# ಸಂಗೊಳ್ಳಿ ರಾಯಣ್ಣ ಆಕರಗಳು : ಸ್ವರೂಪ ಮತ್ತು ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

ಮಂಜುನಾಥ ಜಿ. ವಿ.

ಮಾರ್ಗದರ್ಶಕರು

ಡಾ. ಎಸ್. ಎಸ್. ಅಂಗಡಿ

ಪ್ರಾಧ್ಯಾಪಕರು



ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾ ನಿಕಾಯ

ನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ - ೫೮೩ ೨೭೬

೨೦೨೧

# ಸಂಗೊಳ್ಳಿ ರಾಯಣ್ಣ ಆಕರಗಳು : ಸ್ವರೂಪ ಮತ್ತು ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

**ಮಂಜುನಾಥ ಜಿ. ವಿ.**

ಮಾರ್ಗದರ್ಶಕರು

**ಡಾ. ಎಸ್. ಎಸ್. ಅಂಗಡಿ**

ಪ್ರಾಧ್ಯಾಪಕರು




**ಹಸ್ತಪ್ರತಿಶಾಸ್ತ್ರ ವಿಭಾಗ**

**ಭಾಷಾ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ.**

**ವಿದ್ಯಾರಣ್ಯ-೫೮೩ ೨೭೬**

**೨೦೨೧**

# Kannada University, Hampi
## Akshara Central Library
## Anti-Plagiarism Cell
## Certificate of Plagiarism Check Report

**Sangolli Rayanna Akaragalu : Swarupa Mattu Vishleshane**

**Sangolli Rayanna : Source And Analysis**



By
**Manjunatha G V**
Reg.No. Ko-1316 dated: 03.09.2015

Research Guide
**Dr. S.S. Angadi**
Professor
Department Of Manuscriptology
Kannada University, Hampi.

---

**Urkund Analysis Result**

Analyzed document: KUH-PhD-DoM-Manjunatha G V.docx (D96945527)
Submitted: 3/2/2021 7:57:00 AM
Submitted by: Shankaragouda S G
Submitter email: shankargoudas.mailbox@gmail.com
**Similarity: 9%**
Analysis address: shankargoudas.mailbox.kanuni@analysis.urkund.com

05/03/2021
Seal and authorized sign

# ಮಾರ್ಗದರ್ಶಕರ ದೃಢೀಕರಣ ಪತ್ರ

* * *

ಮಂಜುನಾಥ ಜಿ. ವಿ. ಅವರು **"ಸಂಗೊಳ್ಳಿ ರಾಯಣ್ಣ ಆಕರಗಳು: ಸ್ವರೂಪ ಮತ್ತು ವಿಶ್ಲೇಷಣೆ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ್ದಾರೆ. ಈ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಲಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರ ಸಹಿ**

(ಡಾ. ಎಸ್. ಎಸ್. ಅಂಗಡಿ)
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಡಾ. ಎಸ್. ಎಸ್. ಅಂಗಡಿ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – 583 276

ಸ್ಥಳ: ವಿದ್ಯಾರಣ್ಯ
ದಿನಾಂಕ: 01-02-2021

# ಸಂಶೋಧಕರ ಘೋಷಣಾ ಪತ್ರ

* * *

**"ಸಂಗೊಳ್ಳಿ ರಾಯಣ್ಣ ಆಕರಗಳು: ಸ್ವರೂಪ ಮತ್ತು ವಿಶ್ಲೇಷಣೆ"** ಎಂಬ ಮಹಾಪ್ರಬಂಧವನ್ನು ಹಸ್ತಪ್ರತಿಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ **ಡಾ. ಎಸ್. ಎಸ್. ಅಂಗಡಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತೇನೆ. ಪ್ರಸ್ತುತ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಲಿ ಸಲ್ಲಿಸಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

**ಸಂಶೋಧಕರ ಸಹಿ**

**ಮಂಜುನಾಥ ಜಿ. ವಿ.**
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

ಸ್ಥಳ : ವಿದ್ಯಾರಣ್ಯ
ದಿನಾಂಕ : 01-02-2021

## ಪರಿವಿಡಿ

**ಅಧ್ಯಾಯ : ಹತ್ತು**

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ಅಧ್ಯಯನದ ಸಮೀಕ್ಷೆ

## ಪ್ರಸ್ತಾವನೆ

ದಕ್ಷಿಣ ಭಾರತದಲ್ಲಿ ವಿಜಯನಗರ ಸಾಮ್ರಾಜ್ಯದ ಪತನದ ನಂತರ ಹಲವಾರು ಪಾಳೆಗಾರರು, ಸಂಸ್ಥಾನಗಳು ಉದಯವಾದವು. ಅಂತಹುಗಳಲ್ಲಿ ಕಿತ್ತೂರು ಸಂಸ್ಥಾನವು ಒಂದು. ೧೫೮೫ ರಿಂದ ೧೮೨೪ರ ವರೆಗೆ ೨೩೯ ವರ್ಷಗಳ ಕಾಲ ಈ ಸಂಸ್ಥಾನ ಆಳ್ವಿಕೆ ಮಾಡಿರುವುದನ್ನು ಕಾಣುತ್ತೇವೆ. ೧೮೨೪ರಲ್ಲಿ ಕಿತ್ತೂರು ಸಂಸ್ಥಾನದ ಕೊನೆಯ ದೊರೆ ಶಿವಲಿಂಗರುದ್ರ ಸರ್ಜ ಅನಾರೋಗ್ಯದಿಂದ ಅಕಾಲಿಕ ಮರಣವನ್ನು ಹೊಂದಿದ್ದರಿಂದ ಕಿತ್ತೂರಿನ ಸಿಂಹಾಸನಕ್ಕೆ ಮಾಸ್ತ ಮರಡಿಯ ಬಾಳಪ್ಪ ಗೌಡರ ಮಗನನ್ನು ರಾಣಿ ಚೆನ್ನಮ್ಮ ದತ್ತು ತೆಗೆದುಕೊಂಡು ಆತನಿಗೆ ಸವಾಯಿ ಮಲ್ಲಸರ್ಜ ಎಂದು ನಾಮಕರಣ ಮಾಡಿ ಕಿತ್ತೂರಿನ ಆಡಳಿತವನ್ನು ಮಾಡುತ್ತಾಳೆ. ಭಾರತದಾದ್ಯಂತ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸುತ್ತಿದ್ದ ಸಮಯದಲ್ಲಿ ಬ್ರಿಟಿಷರ ದೃಷ್ಟಿ ಕಿತ್ತೂರಿನತ್ತ ಹೊರಳಿತು. ಬ್ರಿಟಿಷರು ಕಿತ್ತೂರನ್ನು ವಶಪಡಿಸಿಕೊಳ್ಳಲು ದತ್ತು ಪುತ್ರರಿಗೆ ಹಕ್ಕಿಲ್ಲ ಎಂಬ ನೀತಿಯ ಮೂಲಕ ಕಿತ್ತೂರನ್ನು ವಶಪಡಿಸಿಕೊಳ್ಳಲು ಮುಂದಾಗುತ್ತಾರೆ. ಆದರೆ ಕಿತ್ತೂರು ರಾಣಿ ಚೆನ್ನಮ್ಮ ಮತ್ತು ಇತರರು ಬ್ರಿಟಿಷರ ನೀತಿಯನ್ನು ಒಪ್ಪಿಕೊಳ್ಳುವುದಿಲ್ಲ. ಥ್ಯಾಕರೆಯ ನೇತೃತ್ವದಲ್ಲಿ ಬ್ರಿಟಿಷ್ ಸೈನ್ಯ ಕಿತ್ತೂರನ್ನು ವಶಪಡಿಸಿಕೊಳ್ಳಲು ಮುಂದಾಗುತ್ತಾರೆ. ೧೮೨೪ ಸೆಪ್ಟಂಬರ್ ೨೩ ರಂದು ನಡೆದ ಯುದ್ಧದಲ್ಲಿ ಕಿತ್ತೂರಿಗೆ ಜಯವಾಗುತ್ತದೆ. ಭಾರತದಾದ್ಯಂತ ಸಾಮ್ರಾಜ್ಯ ವಿಸ್ತರಿಸಿದ್ದ ಬ್ರಿಟಿಷರಿಗೆ ಅವಮಾನವಾದಂತಾಗಿ ಹೆಚ್ಚಿನ ಸೈನ್ಯದೊಂದಿಗೆ ಮತ್ತೆ ಕಿತ್ತೂರಿನ ಮೇಲೆ ದಾಳಿ ಮಾಡಿ ಕಿತ್ತೂರನ್ನು ವಶಪಡಿಸಿಕೊಳ್ಳುತ್ತಾರೆ. ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಬೇಕೆಂದು ಸಂಗೊಳ್ಳಿ ರಾಯಣ್ಣ ಹೋರಾಟವನ್ನು ಮಾಡುತ್ತಾನೆ. ಆದರೆ ಬ್ರಿಟಿಷರು ನಮ್ಮವರ ಕುತಂತ್ರದಿಂದ ರಾಯಣ್ಣನನ್ನು ಹಿಡಿದು ಗಲ್ಲಿಗೇರಿಸುತ್ತಾರೆ.

ಭಾರತ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಕಿತ್ತೂರು ಸಂಸ್ಥಾನಕ್ಕೆ ಬಹಳ ಮಹತ್ವದ ಸ್ಥಾನವಿದೆ. ೧೮೫೭ರ ಭಾರತದ ಮೊದಲ ಸ್ವಾತಂತ್ರ್ಯ ಸಂಗ್ರಾಮಕ್ಕಿಂತ ಮೊದಲು ಭಾರತದಲ್ಲಿ ಬ್ರಿಟಿಷರ ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಟ ಮಾಡಿದವರೆಂದರೆ ಮೈಸೂರಿನ ಹೈದರಾಲಿ, ಟಿಪ್ಪು, ಕಿತ್ತೂರಿನ ರಾಣಿ ಚೆನ್ನಮ್ಮ ಹಾಗೂ ಸಂಗೊಳ್ಳಿ ರಾಯಣ್ಣಾದಿಗಳು ಪ್ರಮುಖರಾಗಿ ಕಂಡುಬರುತ್ತಾರೆ. ಕಿತ್ತೂರು ಸಂಸ್ಥಾನದ ಪತನದ ನಂತರ ರಾಯಣ್ಣ ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ಹೋರಾಟವನ್ನು ಮಾಡುತ್ತಾನೆ. ಸಂಗೊಳ್ಳಿ ರಾಯಣ್ಣ ರಾಜನಾಗಿರಲಿಲ್ಲ ರಾಜನಾಗಬೇಕೆಂಬ ಬಯಕೆಯು ಅವನಲ್ಲಿರಲಿಲ್ಲ. ಆದರೂ ಅವನು ಬ್ರಿಟಿಷರನ್ನು ಕಿತ್ತೂರಿನಿಂದ ಹೊರಹಾಕಿ ಕಿತ್ತೂರು ಸಂಸ್ಥಾನವನ್ನು ಮತ್ತೆ ಸ್ವಾತಂತ್ರ್ಯಗೊಳಿಸಿ ದೇಸಾಯಿಯರ ಆಡಳಿತವನ್ನು ಮರಳಿ ಸ್ಥಾಪಿಸಲು ಹೋರಾಟವನ್ನು ಮಾಡುತ್ತಾನೆ.

ಕಿತ್ತೂರು ಎಂದಾಕ್ಷಣ ನಮ್ಮ ನೆನಪಿಗೆ ಬರುವುದು ರಾಣಿ ಚೆನ್ನಮ್ಮ ಹಾಗೂ ಸಂಗೊಳ್ಳಿ ರಾಯಣ್ಣ. ರಾಯಣ್ಣನಿಗೆ ಸಂಬಂಧಿಸಿದಂತೆ ದಾಖಲೆಗಳು ಸಿಗುವುದು ಅತಿ ವಿರಳ. ಬ್ರಿಟಿಷರು ಬರೆದಿರಿಸಿದ ದಾಖಲೆಗಳನ್ನು ನೋಡಿದರೆ ರಾಯಣ್ಣನ ಕುರಿತು ಮಾಹಿತಿ ಅಪೂರ್ಣವಾಗುತ್ತದೆ. ಏಕೆಂದರೆ ಬ್ರಿಟಿಷರು ತಮ್ಮ ಕೆಲಸಕ್ಕಾಗಿ ರಾಯಣ್ಣನನ್ನು ಅವರಿಗೆ ಬೇಕಾದ ಹಾಗೆ ಅಂದರೆ ದರೋಡೆಕೋರ, ಲೂಟಿಕೋರ, ಎಂದು ಮುಂತಾಗಿ ಕರೆದರೆ, ನಮ್ಮವರು ಸ್ವಾಂತ್ರ್ಯಕ್ಕಾಗಿ, ನಾಡಿಗಾಗಿ, ಶೋಷಣೆಯ ವಿರುದ್ಧ ಹೋರಾಟ ಮಾಡಿದ ವೀರ, ಧೀರ ಎಂದು ಕರೆದಿದ್ದಾರೆ. ಈ ಕೆಲಸವನ್ನು ನಮ್ಮ ಜನಪದರು ಮಾಡಿರುವುದು ಕಂಡುಬರುತ್ತದೆ. ಅಂದರೆ ಅಂದಿನಿಂದ ಇಂದಿನವರೆಗೆ ರಾಯಣ್ಣನ ಕುರಿತು ಲಾವಣಿ ಪದಗಳು, ಹಂತಿ ಪದಗಳು, ಕೋಲಾಟ ಪದಗಳು, ಬಾಯಿಂದ ಬಾಯಿಗೆ, ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದಿರುವುದನ್ನು ಕಾಣಬಹುದು. ಈ ಜನಪದ ಸಾಹಿತ್ಯವು ರಾಯಣ್ಣನ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ತುಂಬ ಮಹತ್ವದ ಪಾತ್ರವಹಿಸುತ್ತದೆ.

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕರ್ನಾಟಕದ ಸಂಸ್ಥಾನಗಳು ಚಾರಿತ್ರಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ದೊಡ್ಡ ಪರಂಪರೆಯನ್ನು ಹೊಂದಿವೆ. ಆ ಸಂಸ್ಥಾನಗಳನ್ನು ದೇಸಾಯಿ, ದೇಶಗತಿಗಳೆಂದು ಕರೆಯಲಾಗುತ್ತದೆ. ಭಾರತದಾದ್ಯಂತ ಇಂತಹ ಸಂಸ್ಥಾನಗಳನ್ನು ನಾವು ಕಾಣಬಹುದು. ಅವುಗಳಲ್ಲಿ ಕರ್ನಾಟಕದ ಕಿತ್ತೂರು ಸಂಸ್ಥಾನ ಪ್ರಮುಖವಾದುದ್ದಾಗಿದೆ. ಕಿತ್ತೂರು ಸಂಸ್ಥಾನವು ಸ್ಥಳೀಯ ಸಾಂಸ್ಕೃತಿಕ ರಕ್ಷಣೆ ಮತ್ತು ಪೋಷಣೆಯಲ್ಲಿ ತನ್ನದೇ ಆದಂತಹ ಕೊಡುಗೆಗಳನ್ನ ಸಲ್ಲಿಸಿದೆ. ಕಿತ್ತೂರು ಸಂಸ್ಥಾನದ ಬಗ್ಗೆ ಎಚ್. ಜೆ. ಸ್ಟೋಕ್ಸ್, ಜೆ. ಎಫ್. ಫ್ಲೀಟ್, ಜ್ಯೋತಿ ಹೊಸೂರ, ನಿಂಗಣ್ಣ ಸಣ್ಣಕ್ಕಿ, ಸೂರ್ಯನಾಥ ಕಾಮತ, ಶ್ರೀನಿವಾಸ ಹಾವನೂರು, ಎಂ. ಎಂ. ಕಲಬುರ್ಗಿ, ಚನ್ನಕ್ಕ ಎಲಿಗಾರ್,(ಪವಾಟೆ) ಬಸವಾರಾಜ ಕಟ್ಟೀಮನಿ ಮುಂತಾದ ಅನೇಕ ವಿದ್ವಾಂಸರು ಆಳವಾಗಿ ಅಧ್ಯಯನ ಮಾಡಿ ಕೃತಿ, ಕಾದಂಬರಿ, ನಾಟಕ, ಸಂಶೋಧನೆಯ ಮೂಲಕ ಕಿತ್ತೂರು ಸಂಸ್ಥಾನದ ಮಹತ್ವವನ್ನು ಕಟ್ಟಿಕೊಟ್ಟಿದ್ದಾರೆ.

ಕಿತ್ತೂರು ಸಂಸ್ಥಾನಕ್ಕೆ ತನ್ನದೇ ಆದಂತಹ ಗುರುಪರಂಪರೆ, ವಂಶಾವಳಿ, ರಾಜಕೀಯ, ಸಾಂಸ್ಕೃತಿಕ ಇತಿಹಾಸ, ಆಚರಣೆ, ಸಂಪ್ರದಾಯ, ಕಲೆ, ಇತಿಹಾಸ ಈ ಕುರಿತು ಅನೇಕ ವಿದ್ವಾಂಸರು ಚಿಂತನ– ಮಂಥನ ನಡೆಸಿದ್ದಾರೆ. ಕಿತ್ತೂರು ಸಂಸ್ಥಾನ ಕನ್ನಡಿಗರ, ಭಾರತೀಯರ ನೆನಪಿಗೆ ಬರುವುದು ಕಿತ್ತೂರು ಚೆನ್ನಮ್ಮ ಮತ್ತು ಸಂಗೊಳ್ಳಿ ರಾಯಣ್ಣ. ಕರ್ನಾಟಕದ ಚರಿತ್ರೆಯಲ್ಲಿ ಇವರ ಹೆಸರು ಅಜರಾಮರವಾಗಿದೆ. ಅದಕ್ಕೆ ಕಾರಣ ಅವರ ತ್ಯಾಗ ಮತ್ತು ಬಲಿದಾನ. ಕಿತ್ತೂರು ಚೆನ್ನಮ್ಮನ ಇತಿಹಾಸ ಕನ್ನಡಿಗರಿಗೆ ಸಾಕಷ್ಟು ಪರಿಚಯವಿದೆ. ಆ ಕುರಿತು ಆಕರಗಳ ಸಂಗ್ರಹ ಮತ್ತು ಅಧ್ಯಯನಗಳಾಗಿವೆ. ಈ ಕುರಿತು ಹಲವು ವಿದ್ವಾಂಸರು ಹೊಸಬೆಳಕು ಚೆಲ್ಲಿದ್ದಾರೆ.

**ಅಧ್ಯಯನದ ಉದ್ದೇಶ**

ಕಿತ್ತೂರು ರಾಣಿ ಚೆನ್ನಮ್ಮನಷ್ಟೆ ಪ್ರಸಿದ್ಧನಾದ ಕಿತ್ತೂರು ಸಂಸ್ಥಾನದ ಕೀರ್ತಿಯನ್ನು ನಾಡಿನ ಮೂಲೆ ಮೂಲೆಗೂ ಪಸರಿಸಿದ ಸಂಗೊಳ್ಳಿ ರಾಯಣ್ಣನ ಕುರಿತು ಬಂದಂತಹ ಅಧ್ಯಯನಗಳನ್ನ ಒಂದೆಡೆ ಕಲೆಹಾಕಿ, ಸಂಗ್ರಹಿಸಿ, ವಿಶ್ಲೇಷಿಸಿ ಹಾಗೂ ಅವುಗಳ ಸ್ವರೂಪ ಗುರುತಿಸುವುದು. ಸಾಹಿತ್ಯದ ಮೂಲಕ ರಾಯಣ್ಣ ಭಾರತೀಯ ಸ್ವಾತಂತ್ರ್ಯ ಹೋರಾಟಗಾರರಿಗೆ ಹೇಗೆ ಸ್ಫೂರ್ತಿಯಾಗಿದ್ದಾನೆ ಎನ್ನುವುದು ಅಧ್ಯಯನದ ಮತ್ತೊಂದು ಉದ್ದೇಶವಾಗಿದೆ. ಈ ಕೊರತೆಯನ್ನು ಮನಗೊಂಡು "ಸಂಗೊಳ್ಳಿ ರಾಯಣ್ಣ ಆಕರಗಳು : ಸ್ವರೂಪ ಮತ್ತು ವಿಶ್ಲೇಷಣೆ" ಎಂಬ ಶೀರ್ಷಿಕೆ ಅಡಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನಕ್ಕೆ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಸಿದಂತೆ ಇದುವರೆಗೂ ಬಂದಂತಹ ಸಾಹಿತ್ಯ ಕೃತಿಗಳನ್ನ, ಮೌಖಿಕ ಸಾಹಿತ್ಯವನ್ನ, ಬ್ರಿಟಿಷರು ಬರೆದಿಟ್ಟಂತಹ ಕಾಗದ ಪತ್ರಗಳು ಹಾಗೂ ಕಿತ್ತೂರಿಗೆ ಸಂಬಂಧಿಸಿದ ಸಾಹಿತ್ಯ ಮತ್ತು ಚರಿತ್ರೆಯ ಆಕರಗಳ ಜೊತೆಗೆ ಕ್ಷೇತ್ರಕಾರ್ಯದ ಮಾಹಿತಿಗಳು ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿವೆ.

**ಅಧ್ಯಯನದ ಸ್ವರೂಪ**

ಪ್ರಸ್ತುತ ಮಹಾಪ್ರಬಂಧವು ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ಅಧ್ಯಯನದ ಸಮೀಕ್ಷೆ, ಸಂಗೊಳ್ಳಿ ರಾಯಣ್ಣನ ಚರಿತ್ರೆ ಮತ್ತು ಪರಿವಾರ, ಸಂಗೊಳ್ಳಿ ರಾಯಣ್ಣ : ನಾಟಕ ಸಾಹಿತ್ಯ, ಸಂಗೊಳ್ಳಿ ರಾಯಣ್ಣ : ಕಾದಂಬರಿ ಸಾಹಿತ್ಯ, ಸಂಗೊಳ್ಳಿ ರಾಯಣ್ಣ : ಜನಪದ ಸಾಹಿತ್ಯ, ಸಂಗೊಳ್ಳಿ ರಾಯಣ್ಣ : ಜೀವನ ಚರಿತ್ರೆಗಳು, ಸಂಗೊಳ್ಳಿ ರಾಯಣ್ಣ : ಸಂಶೋಧನ ಸಾಹಿತ್ಯ, ಸಂಗೊಳ್ಳಿ ರಾಯಣ್ಣ : ದಾಖಲು ಸಾಹಿತ್ಯ, ಸಂಗೊಳ್ಳಿ ರಾಯಣ್ಣ : ಆಧುನಿಕ ಸಂದರ್ಭ ಹಾಗೂ ಸಮಾರೋಪ ಎಂಬ ಹತ್ತು ಅಧ್ಯಾಯಗಳನ್ನು ಒಳಗೊಂಡಿದೆ. ಅವುಗಳ ಸ್ವರೂಪ ಮತ್ತು ಉದ್ದೇಶ ಈ ಕೆಳಗಿನಂತಿದೆ.

**ಅಧ್ಯಾಯ ಒಂದು** : ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ಅಧ್ಯಯನದ ಸಮೀಕ್ಷೆ

ಈ ಅಧ್ಯಾಯ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪವನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ರಾಯಣ್ಣನನ್ನು ಕುರಿತು ಬಂದಂತಹ ಆಕರಗಳನ್ನು ಸಂಗ್ರಹಿಸಿ, ಅವುಗಳ ಸ್ವರೂಪವನ್ನು ಗುರುತಿಸಿ, ಅವುಗಳ ಅನನ್ಯತೆಯನ್ನು ಅವಲೋಕಿಸುವುದು ಈ ಮಹಾಪ್ರಬಂಧದ ಉದ್ದೇಶವಾಗಿದೆ.

**ಅಧ್ಯಾಯ ಎರಡು** : ಸಂಗೊಳ್ಳಿ ರಾಯಣ್ಣ : ಚರಿತ್ರೆ ಪರಿವಾರ

ಈ ಅಧ್ಯಾಯದಲ್ಲಿ ರಾಯಣ್ಣನ ತಂದೆ, ತಾಯಿ, ಬಾಲ್ಯ, ವೃತ್ತಿ, ಮನೆತನ, ಕಿತ್ತೂರು ಸಂಸ್ಥಾನ ಮತ್ತು ರಾಯಣ್ಣನ ಮನೆತನದ ನಡುವಿನ ಭಾಂದವ್ಯ, ರಾಯಣ್ಣನ ಸ್ನೇಹಿತರು, ಕಿತ್ತೂರು ಬ್ರಿಟಿಷರ ವಶವಾದ ನಂತರ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಲು ರಾಯಣ್ಣ ಹಾಗೂ ರಾಯಣ್ಣನ ಸಹಚರರು ಮಾಡಿದ ಹೋರಾಟ ಮುಂತಾದ ವಿಷಯಗಳ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ಮೂರು** : ಸಂಗೊಳ್ಳಿ ರಾಯಣ್ಣ : ನಾಟಕ ಸಾಹಿತ್ಯ

ನಾಟಕ ಮಾಧ್ಯಮವು ಒಬ್ಬ ವ್ಯಕಿ, ಒಂದು ಘಟನೆಯನ್ನು ಸ್ಪಷ್ಟವಾಗಿ ಚಿತ್ರಿಸುವ ಮಾಧ್ಯಮವಾಗಿದೆ. ಅಲ್ಲಿ ದೃಶ್ಯಕಲೆಯ ವಿವಿಧ ಪಾತ್ರಾಭಿನಯ ಮನನೀಯವಾಗಿ ಮೂಡಿಬರುತ್ತದೆ. ಈ ಅಧ್ಯಾಯದಲ್ಲಿ ರಾಯಣ್ಣನ ಕುರಿತು ರಚನೆಯಾದ ನಾಟಕಗಳ ವಸ್ತು, ವಿಷಯ, ಭಾಷೆ, ನಾಟಕಗಳು ಜನರಲ್ಲಿ ಬೀರಿದ ಪರಿಣಾಮ, ಭಾರತದ ಸ್ವಾತಂತ್ರ್ಯ ಚಳುವಳಿಗೆ ಹೇಗೆ ಪ್ರೇರಣೆಯಾಗಿವೆ ಎನ್ನುವುದನ್ನು ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ ನಾಲ್ಕು** : ಸಂಗೊಳ್ಳಿ ರಾಯಣ್ಣ : ಕಾದಂಬರಿ ಸಾಹಿತ್ಯ

ಆಧುನಿಕ ಈ ಸಾಹಿತ್ಯ ಪ್ರಕಾರವು ಒಂದು ಘಟನೆಯನ್ನು ಅಥವಾ ಒಂದು ಸಂಗತಿಯನ್ನು ಕುರಿತು ದೀರ್ಘವಾಗಿ ವಿವೇಚಿಸುವ ಒಂದು ಸನ್ನಿವೇಶ ಕಾದಂಬರಿಯಲ್ಲಿ ಇರುತ್ತದೆ. ರಾಯಣ್ಣ ಐತಿಹಾಸಿಕ ವ್ಯಕಿಯಾಗಿರುವುದರಿಂದ ಅವನ ಜೀವನ ಮತ್ತು ಸಾಧನೆಗಳನ್ನು ಒಳಗೊಂಡ ಕಾದಂಬರಿಗಳು ಬಂದಿವೆ. ಅಂತಹ ಕಾದಂಬರಿಗಳ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ಐದು** : ಸಂಗೊಳ್ಳಿ ರಾಯಣ್ಣ : ಜನಪದ ಸಾಹಿತ್ಯ

ಇದೊಂದು ಮೌಖಿಕ ಕಾವ್ಯ ಪ್ರಕಾರ. ಅಕ್ಷರಸ್ತರನ್ನು ಮತ್ತು ಅನಕ್ಷರಸ್ತರನ್ನು ಸುಲಭವಾಗಿ ತಲುಪುವಂತಹ ಮಾಧ್ಯಮ ಇದಾಗಿದೆ. ರಾಯಣ್ಣ ಬದುಕ್ಕಿದ್ದಾಗ ಮತ್ತು ನಿಧನದ ನಂತರ ಅವನ ಸಾಹಸವನ್ನು ಕುರಿತು ಹಲವಾರು ಜನಪದ ಕವಿಗಳು ಕಥೆಕಟ್ಟಿ ಹಾಡಿದ್ದಾರೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಲಾವಣಿಗಳು, ಡೊಳ್ಳು ಪದಗಳು, ಕೋಲು ಪದಗಳು ಮುಂತಾದವುಗಳು

ರಾಯಣ್ಣನ ಕುರಿತು ಬಂದಂತಹ ನನಗೆ ಲಭ್ಯವಾಗಿರುವ ಜನಪದ ಆಕರಗಳನ್ನು ಕುರಿತು ಈ ಅಧ್ಯಾಯದಲ್ಲಿ ವಿಸ್ತಾರವಾಗಿ ಚರ್ಚೆ ಮಾಡಲಾಗಿದೆ.

**ಅಧ್ಯಾಯ ಆರು** : ಸಂಗೊಳ್ಳಿ ರಾಯಣ್ಣ : ಜೀವನ ಚರಿತ್ರೆಗಳು

ರಾಯಣ್ಣನನ್ನು ಕುರಿತು ಇಂದಿನ ವಿದ್ಯಾರ್ಥಿಗಳಿಗೆ, ಜನ ಸಾಮಾನ್ಯರಿಗೆ ಹಲವಾರು ವಿದ್ವಾಂಸರು ಜೀವನ ಚರಿತ್ರೆಗಳನ್ನ ರಚಿಸಿದ್ದಾರೆ. ಇವರೆಗೂ ಬಂದಿರುವ ಜೀವನ ಚರಿತ್ರೆಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ಏಳು** : ಸಂಗೊಳ್ಳಿ ರಾಯಣ್ಣ : ಸಂಶೋಧನ ಸಾಹಿತ್ಯ

ಹಲವು ಆಕರಗಳ ಮೂಲಕ ರಾಯಣ್ಣನ ವ್ಯಕ್ತಿತ್ವ ಮತ್ತು ಸಾಧನೆಯನ್ನು ವಿದ್ವಾಂಸರು ಪುನರ್ ರಚಿಸಿದ್ದಾರೆ. ವಸ್ತುನಿಷ್ಟ ಸಂಗತಿಗಳ ಬಗ್ಗೆ ಹೊಸ ಬೆಳಕು ಚಲ್ಲಿದ್ದಾರೆ. ರಾಯಣ್ಣನ ಬಗ್ಗೆ ಬಂದಂತಹ ಸಂಶೋಧನ ಗ್ರಂಥಗಳನ್ನು, ಸಂಶೋಧನ ಲೇಖನಗಳನ್ನು ಕಲೆಹಾಕಿ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ಎಂಟು** : ಸಂಗೊಳ್ಳಿ ರಾಯಣ್ಣ : ದಾಖಲು ಸಾಹಿತ್ಯ

ರಾಯಣ್ಣ ೧೮ನೇ ಶತಮಾನದಲ್ಲಿದ್ದ ಐತಿಹಾಸಿಕ ವ್ಯಕ್ತಿ. ಅವನನ್ನು ಕುರಿತು ಶಾಸನಗಳಾಗಲಿ, ಹಸ್ತಪ್ರತಿಗಳಾಗಲಿ ಲಭ್ಯವಿಲ್ಲ. ಬ್ರಿಟಿಷರ ಕಾಲದ ಕಾಗದ ಪತ್ರಗಳು, ಅಂದಿನ ಅಧಿಕಾರಿಗಳ ಕೆಲವು ಕೃತಿಗಳು ಹಾಗೂ ಮೌಖಿಕ ಸಾಹಿತ್ಯದ ಮೂಲಕ ರಾಯಣ್ಣನ ಹೋರಾಟದ ಚಿತ್ರಣವನ್ನು ತಿಳಿಯಲು ಸಹಾಯಕವಾಗುತ್ತವೆ. ಇಂತಹ ದಾಖಲೆಗಳನ್ನಿಟ್ಟುಕೊಂಡು ರಾಯಣ್ಣನ ಸಿದ್ದಿ ಸಾಧನೆಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ಒಂಬತ್ತು** : ಸಂಗೊಳ್ಳಿ ರಾಯಣ್ಣ : ಆಧುನಿಕ ಸಂದರ್ಭ

ರಾಯಣ್ಣನ ನಿಧನದ ನಂತರ ರಾಯಣ್ಣನ ಸಿದ್ದಿ ಸಾದನೆಗಳನ್ನು ಪರಿಚಯಿಸುವ, ವಿದ್ಯಾರ್ಥಿಗಳಲ್ಲಿ, ಮಕ್ಕಳಲ್ಲಿ ನಾಡು-ನುಡಿಯ ಬಗ್ಗೆ ಅಭಿಮಾನ ಬೆಳೆಸುವ ಹಲವಾರು ಮಾಧ್ಯಮಗಳು ಅಂದರೆ, ಚಲನಚಿತ್ರ, ನಾಮಫಲಕ, ಪ್ರಶಸಿಗಳು, ಶಾಲಾಕಾಲೇಜುಗಳು, ಸಂಘ ಸಂಸ್ಥೆಗಳು ಇತ್ಯಾದಿಗಳು ಅವುಗಳ ಆಶಯದ ಹಿನ್ನಲೆಯಲ್ಲಿ ಅವುಗಳ ಆಶಯವನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ಹತ್ತು** : ಸಮಾರೋಪ

ರಾಯಣ್ಣನ ಕುರಿತು ಇದುವರೆಗೂ ನಡೆದ ಅಧ್ಯಯನಗಳ ಸ್ವರೂಪ ಮತ್ತು ವಿಶ್ಲೇಷಣೆಯಿಂದ ಕಂಡುಕೊಂಡ ಫಲಿತಗಳನ್ನು ಇಲ್ಲಿ ಕ್ರೂಡೀಕರಿಸಲಾಗಿದೆ. ಅನುಬಂಧದಲ್ಲಿ ರಾಯಣ್ಣನ ಛಾಯಚಿತ್ರಗಳು ಹಾಗೂ ಆಕರ ಗ್ರಂಥಗಳ ಸೂಚಿಯನ್ನು ನೀಡಲಾಗಿದೆ.

**ಅಧ್ಯಯನದ ಸಮೀಕ್ಷೆ**

ಪ್ರಸ್ತುತ ಅಧ್ಯಯನದ ವಿಷಯ "ಸಂಗೊಳ್ಳಿ ರಾಯಣ್ಣ ಆಕರಗಳು : ಸ್ವರೂಪ ಮತ್ತು ವಿಶ್ಲೇಷಣೆ" ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಇದುವರೆಗೂ ಪ್ರಕಟಗೊಂಡಿರುವ

ಸಂಶೋಧನಾತ್ಮಕ ಕೃತಿಗಳು, ಸದರಿ ಅಧ್ಯಯನದ ವಿಷಯಕ್ಕೆ ಪೂರಕವಾಗಿ ಪ್ರಟಕಗೊಂಡಿರುವ ಪತ್ರಿಕಾ ಲೇಖನಗಳ ಜೊತೆಗೆ ವಿವಿಧ ಶೈಕ್ಷಣಿಕ ಚಟುವಟಿಕೆಗಳ ಅಂಶಿಕ ಭಾಗವಾಗಿ ಸಲ್ಲಿಕೆಯಾಗಿರುವ ಸಂಪ್ರಬಂಧಗಳನ್ನು ಇಲ್ಲಿ ಅಧ್ಯಯನ ಮಾಡಿ ವಿಶ್ಲೇಷಿಸಲಾಗಿದೆ. ಇದರಿಂದಾಗಿ ಪ್ರಸ್ತುತ ಅಧ್ಯಯನಕ್ಕೆ ನಿಖರವಾದ ಅಡಿಪಾಯ ದೊರೆತಿರುವುದು ಮಾತ್ರವಲ್ಲದೆ, ಪ್ರಸ್ತುತ ಅಧ್ಯಯನದ ಸಂಗೊಳ್ಳಿ ರಾಯಣ್ಣನ ಕುರಿತ ಆಕರಗಳ ವಿಶ್ಲೇಷಣೆ ಆಗಿರುವುದರಿಂದ ಕಾದಂಬರಿಗಳು, ನಾಟಕಗಳು, ಜೀವನ ಚರಿತ್ರೆಗಳು, ದಾಖಲೆಗಳು, ಮೌಖಿಕ ಸಾಹಿತ್ಯ ಹಾಗೂ ಸಂಶೋಧನಾತ್ಮಕ ಬರಹಗಳು ಪ್ರಕಟಗೊಂಡಿವೆ. ಅಧ್ಯಯನ ಸಮೀಕ್ಷೆಯಲ್ಲಿ ಸಂಶೋಧನಾತ್ಮಕ ಬರಹಗಳ ಕುರಿತು ಸಂಕ್ಷಿಪ್ತವಾಗಿ ವಿಶ್ಲೇಷಿಸಲಾಗಿದೆ.

**ಸಂಶೋಧನ ಕೃತಿಗಳು**

**ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ತಿ. ತಾ. ಶರ್ಮ, ಮೈಸೂರು ಸಂಸ್ಥಾನದ ಸರಕಾರ, ಬೆಂಗಳೂರು, ೧೯೫೬.**

ತಿ. ತಾ ಶರ್ಮಾ ಅವರ 'ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ' ಎನ್ನುವ ಕೃತಿಯಲ್ಲಿ ಕಿತ್ತೂರು ಹಾಗೂ ರಾಯಣ್ಣನಿಗೆ ಸಂಬಂಧಿಸಿದಂತೆ ಎರಡು ಲೇಖನಗಳಿವೆ. 'ಕಿತ್ತೂರು ರಾಣಿ ಚೆನ್ನಮ್ಮ' ಹಾಗೂ 'ಸಂಗೊಳ್ಳಿ ರಾಯಣ್ಣ' ಈ ಎರಡೂ ಲೇಖನಗಳು ಕಿತ್ತೂರು ಸಂಸ್ಥಾನದ ಸಂಕ್ಷಿಪ್ತವಾದ ಚರಿತ್ರೆಯೊಂದಿಗೆ, ಬ್ರಿಟಿಷರು ಕಿತ್ತೂರನ್ನ ವಶಪಡಿಸಿಕೊಳ್ಳಲು ದತ್ತು ಪುತ್ರರಿಗೆ ಹಕ್ಕಿಲ್ಲ ಎಂಬ ನಿಯಮದ ಮೇರೆಗೆ ಕಿತ್ತೂರನ್ನೂ ವಶಪಡಿಸಿಕೊಳ್ಳಲು ಮುಂದಾಗುತ್ತಾರೆ. ರಾಣಿ ಚೆನ್ನಮ್ಮ ಆ ನೀತಿಯನ್ನ ವಿರೋಧಿಸುತ್ತಾಳೆ. ಆದರೆ ಬ್ರಿಟಿಷರು ಕಿತ್ತೂರನ್ನ ವಶಪಡಿಸಿಕೊಳ್ಳಲು ಮುಂದಾಗುತ್ತಾರೆ. ಧಾರವಾಡದ ಅಂದಿನ ಪೋಲಿಟಿಕಲ್ ಏಜೆಂಟ್ ಥ್ಯಾಕರೆಯು ಕಿತ್ತೂರನ್ನ ವಶಪಡಿಸಿಕೊಳ್ಳಲು ಬರುತ್ತಾನೆ. ಆಗ ರಾಣಿ ಚೆನ್ನಮ್ಮನ ನೇತೃತ್ವದಲ್ಲಿ ಕಿತ್ತೂರು ಸಂಸ್ಥಾನವು ಬ್ರಿಟಿಷರ ವಿರುದ್ಧ ಹೋರಾಟವನ್ನು ಮಾಡಿ ಜಯಗಳಿಸುತ್ತಾರೆ. ಭಾರತದಾದ್ಯಂತ ತಮ್ಮ ಸಾಮ್ರಾಜ್ಯವನ್ನ ವಿಸ್ತರಿಸಿದ್ದ ಬ್ರಿಟಿಷರಿಗೆ ಅವಮಾನವಾದಂತಾಗಿ ಮತ್ತೇ ಕಿತ್ತೂರಿನವರನ್ನೆ ಬಳಸಿಕೊಂಡು ಕುತಂತ್ರದ ಮೂಲಕ ಕಿತ್ತೂರನ್ನ ವಶಪಡಿಸಿಕೊಳ್ಳುತ್ತಾರೆ.

**ಫ್ಲೀಟರು ಸಂಗ್ರಹಿಸಿದ ಲಾವಣಿಗಳು, ಕ್ಯಾತನಹಳ್ಳಿ ರಾಮಣ್ಣ (ಸಂ), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೨.**

ಕ್ಯಾತನಹಳ್ಳಿ ರಾಮಣ್ಣ ಅವರು ಸಂಪಾದಿಸಿರುವ 'ಫ್ಲೀಟರು ಸಂಗ್ರಹಿಸಿದ ಲಾವಣಿಗಳು' ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ ೧೯೭೨ ರಲ್ಲಿ ಪ್ರಕಟಿಸಿದೆ. ರಾಯಣ್ಣನಿಗೆ

ಸಂಬಂಧಿಸಿದಂತೆ ಬಹಳ ಮುಖ್ಯವಾದ ಕೃತಿಗಳಲ್ಲಿ ಇದು ಒಂದು. ರಾಯಣ್ಣನ ಅಂತ್ಯದ ನಂತರ ರಾಯಣ್ಣನ ಕುರಿತು ಜನರು ಆಡುತ್ತಿದ್ದಂತಹ ಹಾಡುಗಳನ್ನು ಜೆ.ಎಫ್ ಫ್ಲೀಟ್‌ರವರು ಸಂಗ್ರಹಿಸಿ ಇಂಡಿಯನ್ ಆಂಟಿಕ್ವರಿ ಪತ್ರಿಕೆಯಲ್ಲಿ ಪ್ರಕಟಿಸಿದ ಲಾವಣಿಗಳನ್ನು ಕ್ಯಾತನಹಳ್ಳಿ ರಾಮಣ್ಣನವರು ಸುದೀರ್ಘ ಪ್ರಸ್ತಾವನೆಯನ್ನು ಬರೆದು ಲಾವಣಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಫ್ಲೀಟ್‌ರವರು ಸಂಗ್ರಹಿಸಿದ ಲಾವಣಿಗಳಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ ಸಂಗೊಳ್ಳಿ 'ರಾಯಣ್ಣ ದಂಗೆ'ಲಾವಣಿಯು ಒಂದಾಗಿದೆ. ರಾಯಣ್ಣನ ಕುರಿತು ಜನಪದ ಸಾಹಿತ್ಯದ ಬಗ್ಗೆ ಮೊದಲು ಸಂಗ್ರಹಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಅವರು ತಮ್ಮ ಕೆಲಸದ ಜೊತೆಗೆ ಶಾಸನ, ಕೈಫಿಯತ್ತು, ಐತಿಹ್ಯಗಳನ್ನು ಹಾಗೂ ಮೌಖಿಕ ಸಾಹಿತ್ಯವನ್ನು ಭಾರತೀಯರಲ್ಲಿ ಜಾಗೃತಿ ಮೂಡಿಸುವ ಕೆಲಸ ಮಾಡಿರುವುದನ್ನು ಕಾಣಬಹುದು.

**ಕಿತ್ತೂರು ನಾಡಿನ ಇತಿಹಾಸ ಹಾಗೂ ಸಂಸ್ಕೃತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.** ೧೯೭೬.

ಕಿತ್ತೂರು ಸಂಸ್ಥಾನದ ಸಂಪೂರ್ಣ ವಿವರಗಳನ್ನು ತಿಳಿಯಲು ಈ ಕೃತಿಯು ಸಹಾಯಕವಾಗುತ್ತದೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ೧೯೭೪ ರಲ್ಲಿ ಕಿತ್ತೂರು ರಾಣಿ ಚೆನ್ನಮ್ಮನ ೧೫೧ ನೇ ವಿಜಯೋತ್ಸವದ ಸಂದರ್ಭದಲ್ಲಿ ಆಯೋಜಿಸಿದ ಕಾರ್ಯಗಾರದಲ್ಲಿನ ಸಂಶೋಧನಾತ್ಮಕ ಲೇಖನಗಳನ್ನು ೧೯೭೬ ರಲ್ಲಿ ಪ್ರಕಟಿಸಿದೆ. ಪ್ರಾಚೀನ ಕಿತ್ತೂರು ನಾಡು ಕರ್ನಾಟಕದಲ್ಲಿ ಬ್ರಿಟಿಷರ ಆಳ್ವಿಕೆಯ ಆರಂಭ, ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಆರಂಭ, ಕಿತ್ತೂರು ನಾಡಿನ ವೀರರು, ಕಿತ್ತೂರನ್ನು ಕುರಿತ ಲಾವಣಿಗಳು ಹಾಗೂ ಇತರ ಸಾಹಿತ್ಯ ಇಂತಹ ಹಲವು ಲೇಖನಗಳ ಮೂಲಕ ಕಿತ್ತೂರಿನ ಸಮಗ್ರ ಇತಿಹಾಸವನ್ನು ಚಿತ್ರಿಸಿರುವುದು ಕಂಡುಬರುತ್ತದೆ.

ಕಿತ್ತೂರನ್ನು ಕುರಿತ ಲಾವಣಿಗಳು ಹಾಗೂ ಇತರ ಸಾಹಿತ್ಯ ಮತ್ತು ಕಿತ್ತೂರಿನ ವೀರರು ಎನ್ನುವ ಸಂಶೋಧನಾತ್ಮಕ ಲೇಖನದಲ್ಲಿ ಸಂಗೊಳ್ಳಿ ರಾಯಣ್ಣನ ಹೋರಾಟದ ಚಿತ್ರಣಗಳ ಬಗ್ಗೆ ತಿಳಿಯಲು ಸಹಾಯಕವಾಗುತ್ತವೆ. ಜನಪದ ಸಾಹಿತ್ಯ ರಾಯಣ್ಣನ ಚರಿತ್ರೆ ಕಟ್ಟಿಕೊಡುವಲ್ಲಿ ಮುಖ್ಯವಾದ ಆಕರಗಳಾಗುತ್ತವೆ.

**ಸಂಗೊಳ್ಳಿ ರಾಯಣ್ಣ, ಸೂರ್ಯನಾಥ ಕಾಮತ (ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು,** ೧೯೯೫.

ಸೂರ್ಯನಾಥ ಕಾಮತ ಅವರು ಸಂಪಾದಿಸಿರುವ ಸಂಗೊಳ್ಳಿ ರಾಯಣ್ಣ ಕೃತಿಯಲ್ಲಿ ರಾಯಣ್ಣನ ಕುರಿತು ಮಾಹಿತಿಯನ್ನು ತಿಳಿಯಲು ಸಹಾಯಕವಾಗುತ್ತದೆ. ಈ ಕೃತಿಯಲ್ಲಿ ಸೂರ್ಯನಾಥ ಕಾಮತ, ಶ್ರೀನಿವಾಸ ಹಾವನೂರ, ಜ್ಯೋತಿ ಹೊಸೂರ, ಸಿ. ವ್ಹಿ. ಮಠದ ರವರು ಸಂಗೊಳ್ಳಿ ರಾಯಣ್ಣನ ಕುರಿತು ಲೇಖನಗಳನ್ನು ಬರೆದಿದ್ದಾರೆ. ಶ್ರೀನಿವಾಸ ಹಾವನೂರ ಅವರು ಸಂಗೊಳ್ಳಿ

ರಾಯಣ್ಣನ ಕುರಿತು 'ಬ್ರಿಟಿಷ್ ದಾಖಲೆಗಳು ಸೂಚಿಸುವ ಸಂಗೊಳ್ಳಿ ರಾಯಣ್ಣ' ಲೇಖನವನ್ನು ಬರೆದಿದ್ದಾರೆ. ಈ ಲೇಖನವು ಬ್ರಿಟಿಷರು ರಾಯಣ್ಣನ ಹೋರಾಟದ ಕುರಿತು ನಡೆಸಿದಂತಹ ಪತ್ರವ್ಯವಹಾರಗಳು ಹಾಗೂ ಇತರೆ ದಾಖಲೆಗಳ ಸಹಾಯದಿಂದ ಹಾವನೂರ ಅವರು ಬ್ರಿಟಿಷ್ ದಾಖಲೆಗಳು ಸೂಚಿಸುವ ಸಂಗೊಳ್ಳಿ ರಾಯಣ್ಣ ಎನ್ನುವ ಲೇಖನವನ್ನ ಬರೆದಿದ್ದಾರೆ. ಈ ಲೇಖನದಲ್ಲಿ ನಿಖರವಾಗಿ, ನಿರ್ದಿಷ್ಟವಾಗಿ ರಾಯಣ್ಣನ ನಡೆಸಿದಂತಹ ಹೋರಾಟವನ್ನು ತಿಳಿಯಲು ಪ್ರಮುಖ ಆಧಾರಗಳು ದೊರೆಯುತ್ತವೆ ಎಂದು ಹೇಳಬಹುದು.

'ಜನಪದ ಸಾಹಿತ್ಯದಲ್ಲಿ ಮೂಡಿಬಂದ ರಾಯಣ್ಣ' ಹಾಗೂ 'ಸಂಗೊಳ್ಳಿ ರಾಯಣ್ಣನ ಹೋರಾಟದ ಪರಿಸರ ಮತ್ತು ಐತಿಹ್ಯಗಳು' ಎಂಬ ಎರಡು ಲೇಖನಗಳಿವೆ. ಇವುಗಳನ್ನು ಜ್ಯೋತಿ ಹೊಸೂರ ಮತ್ತು ಸಿ.ವಿ ಮಠದರವರು ಬರೆದಿದ್ದಾರೆ. ಜ್ಯೋತಿ ಹೊಸೂರ ಇವರು ರಾಯಣ್ಣನ ಜೀವನದ ಹಾಗೂ ಹೋರಾಟದ ಕುರಿತು ಸಂಕ್ಷಿಪ್ತವಾಗಿ ಹೇಳುತ್ತಾ, ಜನರ ನಾಲಿಗೆಗಳಲ್ಲಿ ರಾಯಣ್ಣನ ಕುರಿತು ಇರುವಂತಹ ಸಾಹಿತ್ಯವನ್ನು ಹೇಳುತ್ತಾರೆ. ರಾಯಣ್ಣನಿಗೆ ಸಂಬಂಧಿಸಿದಂತೆ ಇರುವಂತಹ ಜನಪದ ಹಾಡುಗಳನ್ನು, ಐತಿಹ್ಯಗಳನ್ನು, ಕಥೆಗಳನ್ನು ಸಂಗ್ರಹಿಸಿ ಅಭ್ಯಸಿಸಿದ್ದಾರೆ. ಇವರ 'ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ' ಎನ್ನುವ ಕೃತಿಯಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ ಚಿಕ್ಕವಯಸ್ಸಿನಿಂದಲೂ ಆಕರ್ಷಿತರಾಗಿ ರಾಯಣ್ಣನಿಗೆ ಸಂಬಂಧಿಸಿದಂತೆ ನಾಟಕ, ಚರಿತ್ರೆ, ಕೃತಿ, ಲಾವಣಿ, ಕಾದಂಬರಿ ಇತ್ಯಾದಿ ರೂಪದ ಸಾಹಿತ್ಯ ಕೃತಿಗಳನ್ನು ಆಸಕ್ತಿಯಿಂದ ಸಂಗ್ರಹಿಸಿದ್ದಾರೆ. ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ಅದರಲ್ಲೂ ಹೆಚ್ಚಾಗಿ ದೊರೆಯುವಂತಹ ಜನಪದ ಆಕರಗಳಿಂದ ರಾಯಣ್ಣನ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ.

ರಾಯಣ್ಣನು ಹೋರಾಟಕ್ಕೆ ಸಿದ್ಧತೆಗಳನ್ನು ಮಾಡಿಕೊಂಡ ನಂತರ ರಾಣಿಯನ್ನು ಭೇಟಿಯಾಗಿ ಹೇಳುವ ಒಬ್ಬ ವೀರನ ಮಾತುಗಳನ್ನು ಈ ರೀತಿಯಲ್ಲಿ ಗೆದ್ದೇ ಗೆಲ್ಲುತ್ತೇನೆ ಇಲ್ಲದಿದ್ದರೆ ರಣರಂಗದಲ್ಲಿ ಮರಣವನ್ನಪ್ಪುತ್ತೇನೆ ಹೊರತು ಮತ್ತೊಮ್ಮೆ ಮುಂದೆ ಬರುವುದಿಲ್ಲ ಎಂದು ಹೇಳುವುದರ ಮೂಲಕ ರಾಣಿಯಲ್ಲಿ ಹೊಸ ಭರವಸೆಯ ಬೆಳಕನ್ನು ತುಂಬುತ್ತಾನೆ. ಹಾಗೂ ರಾಯಣ್ಣನಲ್ಲಿ ಇದ್ದಂತಹ ಛಲ, ಗುರಿ, ಸ್ವಾತಂತ್ರ್ಯದ ಕನಸು ಮುಂತಾದವುಗಳನ್ನು ತಿಳಿಯಬಹುದು. ಹೊಸೂರರ ಈ ಲೇಖನದಲ್ಲಿ ತ್ರಿಪದಿಗಳ ಮೂಲಕ, ಲಾವಣಿಗಳ ಮೂಲಕ ರಾಯಣ್ಣನ ಹೋರಾಟದ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.

ಸಿ ವಿ ಮಠದ ಇವರ 'ಸಂಗೊಳ್ಳಿ ರಾಯಣ್ಣನ ಹೋರಾಟದ ಪರಿಸರ ಹಾಗೂ ಐತಿಹ್ಯಗಳು' ಎಂಬ ಲೇಖನವು ಕಿತ್ತೂರಿನ ಸಂಕ್ಷಿಪ್ತ ಇತಿಹಾಸದ ಜೊತೆಗೆ ರಾಯಣ್ಣನ ಹೋರಾಟದ ಚಿತ್ರಣವನ್ನು ಕೊಟ್ಟಿದ್ದಾರೆ. ಈ ಲೇಖನವು ಮುಖ್ಯವಾಗಿ ರಾಯಣ್ಣನಿಗೆ ಸಂಬಂಧಿಸಿದ ಹಾಗೂ ರಾಯಣ್ಣನು ನಡೆಸಿದಂತಹ ಹೋರಾಟದ ಕುರಿತು ಹುಟ್ಟಿಕೊಂಡಿರುವಂತಹ ಐತಿಹ್ಯಗಳನ್ನು, ಕತೆಗಳನ್ನು ತಿಳಿಯಲು

ಸಹಾಯಕವಾಗುತ್ತದೆ. ಯಾವುದೇ ಒಂದು ಕಾರ್ಯಕ್ಕೆ, ಹೋರಾಟಕ್ಕೆ ಹಾಗೂ ಇತರೆ ವಿಷಯಗಳಿಗೆ ಸಂಬಂಧಿಸಿದಂತೆ ಪ್ರದೇಶದ ಪಾತ್ರ ತುಂಬಾ ಮುಖ್ಯವಾಗಿರುತ್ತದೆ. ರಾಯಣ್ಣನು ಹೋರಾಟದ ಸಂದರ್ಭದಲ್ಲಿ ಕಿತ್ತೂರಿನ ಸುತ್ತಮುತ್ತಲಿನ ಪ್ರದೇಶಗಳಾದ ದೇಶನೂರು, ಖಾನಾಪುರ, ನಂದಗಡದ ಸುತ್ತಮುತ್ತಲಿನ ಪ್ರದೇಶಗಳೆಲ್ಲವೂ ಅರಣ್ಯಗಳಿಂದ ಕುಡಿದವುಗಳಾಗಿದ್ದವು. ರಾಯಣ್ಣನು ಬ್ರಿಟಿಷರ ವಿರುದ್ಧ ಗೆರಿಲ್ಲಾ ಯುದ್ಧ ಮಾದರಿಯನ್ನು ಅನುಸರಿಸಿ ಹೋರಾಟವನ್ನು ಮಾಡಿದನು. ರಾಯಣ್ಣನಿಗೆ ಮತ್ತು ಆತನ ಸಹಚರರಿಗೆ ಅರಣ್ಯದ ಬಗ್ಗೆ ಮಾಹಿತಿ ತಿಳಿದವರಾಗಿದ್ದರು. ಬ್ರಿಟಿಷರಿಗೆ ಅರಣ್ಯ ಪ್ರದೇಶಗಳಿಗೆ ಹೋಗಿ ಹಿಡಿಯುವಂತಹದ್ದು ಅಷ್ಟು ಸುಲಭವಾಗಿರಲಿಲ್ಲ. ರಾಯಣ್ಣನು ಇದ್ದಂತಹ ಸ್ಥಳದ ಬಗ್ಗೆ ಮಾಹಿತಿಯಾಗಲಿ ಬ್ರಿಟಿಷರಿಗೆ ಅಷ್ಟು ಸುಲಭವಾದ ಕೆಲಸವಾಗಿರಲಿಲ್ಲ. ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಹೋರಾಟಗಾರರು ಹುಟ್ಟಿದಂತಹ ಪರಿಸರ ಹಾಗೂ ಪ್ರದೇಶಗಳು ಪ್ರಮುಖ ಪಾತ್ರವಹಿಸುತ್ತದೆ ಎನ್ನುವುದನ್ನು ಈ ಲೇಖನ ತಿಳಿಸುತ್ತದೆ.

**ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ, ನಿಂಗಣ್ಣ ಸಣ್ಣಕ್ಕಿ, ವಿದ್ಯಾನಿಧಿ ಪ್ರಕಾಶನ, ಗದಗ. ೧೯೯೭.**

ನಿಂಗಣ್ಣ ಸಣ್ಣಕ್ಕಿಯವರ ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ ಕೃತಿಯು ರಾಯಣ್ಣನಿಗೆ ಸಂಬಂಧಿಸಿದಂತೆ ಜನಪದರಲ್ಲಿ ಇದ್ದಂತಹ ಲಾವಣಿಗಳನ್ನು ಸಂಗ್ರಹಿಸಿ, ಸಂಪಾದಿಸಿ ಪ್ರಕಟಿಸಿದ್ದಾರೆ. ಈ ಕೃತಿಯ ಆರಂಭದಲ್ಲಿ ಪ್ರಸ್ತಾವನೆ ಹಾಗೂ ರಾಯಣ್ಣನ ವಂಶಜರ ವಂಶಾವಳಿಯನ್ನು ನೀಡಿದ್ದಾರೆ.

ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ ಈ ಕೃತಿಯಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ ಆರು ಲಾವಣಿಗಳಿವೆ. ಸಂಗೊಳ್ಳಿ ರಾಯಣ್ಣನ ದಂಗೆ, ಸಂಗೊಳ್ಳಿ ರಾಯಣ್ಣ, ಕಲಿದೀಪ ಸಂಗೊಳ್ಳಿ ರಾಯಣ್ಣ, ಶೂರ ಸಂಗೊಳ್ಳಿ ರಾಯಣ್ಣ, ಧೀರ ಸಂಗೊಳ್ಳಿ ರಾಯಣ್ಣ, ಸಂಗೊಳ್ಳಿ ರಾಯಪ್ಪನ ಲಾವಣಿ ಪದ ಹೀಗೆ ನಿಂಗಣ್ಣ ಸಣ್ಣಕ್ಕಿಯವರು ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ಇರುವಂತಹ ಜನಪದ ಸಾಹಿತ್ಯ ಪ್ರಕಾರಗಳಲ್ಲೊಂದಾದ ಲಾವಣಿಗಳನ್ನು ಸಂಗ್ರಹಿಸಿ, ಜನಪದ ಸಾಹಿತ್ಯದ ಮಹತ್ವವನ್ನು ಕುರಿತು ಹೇಳಿದ್ದಾರೆ.

**ಸಂಗೊಳ್ಳಿ ರಾಯಣ್ಣನ ಪರಿವಾರ, ನಿಂಗಣ್ಣ ಸಣ್ಣಕ್ಕಿ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೨.**

ನಿಂಗಣ್ಣ ಸಣ್ಣಕ್ಕಿ ಯವರ 'ಸಂಗೊಳ್ಳಿ ರಾಯಣ್ಣನ ಪರಿವಾರ' ಈ ಕೃತಿಯು ಸಂಗೊಳ್ಳಿ ರಾಯಣ್ಣನ ವಂಶಾವಳಿಯ ಕುರಿತು ಹೇಳಿದ್ದಾರೆ. ನಿಂಗಣ್ಣ ಸಣ್ಣಕ್ಕಿಯವರು ಹೆಳವರಿಂದ ಹಾಗೂ ದಾಖಲೆಗಳ ಸಹಾಯದಿಂದ ರಾಯಣ್ಣನ ಪರಿವಾರದ ಕುರಿತು ಸಂಗೊಳ್ಳಿ ರಾಯಣ್ಣನ ಪರಿವಾರ ಎಂಬ ಕೃತಿಯಲ್ಲಿ ಹೆಳವರಿಂದ ಸಂಗ್ರಹಿಸಿದ ರಾಯಣ್ಣನ ವಂಶಾವಳಿ ಪಟ್ಟಿಯನ್ನು ಕೃತಿಯ

ಆರಂಭದಲ್ಲಿಯೇ ನೀಡಿ ರಾಯಣ್ಣನ ಕುರಿತು ಬಂದಿರುವ ಲಾವಣಿಗಳನ್ನು ಸಂಗ್ರಹಿಸಿದ್ದಾರೆ. ಜೊತೆಗೆ ರಾಯಣ್ಣನ ಜೊತೆಗೆ ಹೋರಾಟದಲ್ಲಿ ಭಾಗಿಯಾಗಿ ೧೮೩೧ರಲ್ಲಿ ರಾಯಣ್ಣನ ಜೊತೆಗೆ ಗಲ್ಲಿಗೇರಿದವರ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ರಾಯಣ್ಣನ ಜೀವನದ ಹೋರಾಟ ಜನಪದರ ನಾಲಿಗೆಗಳಿಂದ, ಕೆಲವು ದಾಖಲೆಗಳಿಂದ ಕಿತ್ತೂರಿನ ಹಾಗೂ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ಐತಿಹಾಸಿಕ ಅಂಶಗಳನ್ನು ತಿಳಿಯಲು ಈ ಕೃತಿಯು ಸಹಾಯಕವಾಗುತ್ತದೆ.

ಈ ಕೃತಿಯಲ್ಲಿ ಲಾವಣಿಗಳ ನಂತರ ಹಿನ್ನುಡಿ, ಗಲ್ಲಿಗೇರಿದವರ ಪರಿವಾರ, ಕಿತ್ತೂರು ರಾಜ್ಯದ ನಕಾಶೆ, ಪರಿವಾರಕ್ಕೆ ಪುರವಣೆ, ದೇಶ ಮರೆತ ಸಂಗೊಳ್ಳಿ ರಾಯಣ್ಣನ ಮನೆತನ, ನಾವು ರಕ್ಷಿಸಬೇಕಾದ ವೀರಯೋಧನ ವಂಶ, ಸಂಗೊಳ್ಳಿ ರಾಯಣ್ಣನ ಆತ್ಮಾರ್ಪಣೆಯ ವೀರಗಾಥೆ ಎಂಬ ಅಂಶಗಳ ವಿವರಗಳನ್ನು ನೀಡಿದ್ದಾರೆ.

ಸಂಗೊಳ್ಳಿ ರಾಯಣ್ಣ ಅಂದಿನ ರಾಜಕೀಯ ಹಾಗೂ ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ಹೋರಾಟವನ್ನು ಮಾಡಿದ್ದಾನೆ. ಇಂತಹ ಸ್ವಾತಂತ್ರ ಹೋರಾಟವು ಮುಂದೆ ಭಾರತದಿಂದ ಬ್ರಿಟಿಷರನ್ನು ಹೊರಹಾಕುವಂತಹ ಹಾಗೂ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಹೋರಾಟಗಾರರಿಗೆ ರಾಯಣ್ಣನು ಸ್ಫೂರ್ತಿಯಾಗಿದ್ದನ್ನು ಕಾಣಬಹುದು. ಇಂತಹ ಸ್ವಾತಂತ್ರ್ಯ ಹೋರಾಟದ ವ್ಯಕ್ತಿಯಾದ ರಾಯಣ್ಣನ ಮನೆತನವನ್ನು ಹಾಗೂ ಇತರೆ ವಿಚಾರಗಳ ಬಗ್ಗೆ ಜನರಲ್ಲಾಗಲಿ, ಸರ್ಕಾರಕ್ಕಾಗಲಿ ಕಾಳಜಿ ಇಲ್ಲ ಎಂಬುದರ ಕುರಿತು ಮಾಹಿತಿಯನ್ನು ನೀಡಿದ್ದಾರೆ. ಒಟ್ಟಾರೆಯಾಗಿ ನಿಂಗಣ್ಣ ಸಣ್ಣಕ್ಕಿಯವರ ಸಂಗೊಳ್ಳಿ ರಾಯಣ್ಣನ ಪರಿವಾರ ಕೃತಿಯು ರಾಯಣ್ಣನಿಗೆ ಸಂಬಂಧಿಸಿದಂತೆ, ಮನೆತನಕ್ಕೆ ಸಂಬಂಧಿಸಿದಂತೆ ಹೋರಾಟದ ಕುರಿತು ಸ್ವಾತಂತ್ರ್ಯ ನಂತರ ಹಾಗೂ ಪ್ರಸ್ತುತ ದಿನಗಳಲ್ಲಿ ಯಾವ ರೀತಿಯಲ್ಲಿ ರಾಯಣ್ಣನನ್ನು ಗುರುಸುತ್ತಿದ್ದಾರೆ ಎನ್ನುವುದನ್ನು ತಿಳಿಯಲು ಈ ಕೃತಿಯು ಸಹಾಯಕವಾಗುತ್ತದೆ.

**ಜನಪದ ಸಾಹಿತ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆಗಳು, ನಿಂಗಣ್ಣ ಸಣ್ಣಕ್ಕಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. ೨೦೦೩.**

ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಜಾನಪದ ಸಾಹಿತ್ಯ ಹೇಗೆ ಪ್ರೇರಣೆಯಾಗಿದೆ ಎಂಬುದನ್ನು ಕುರಿತು ತಿಳಿಯಲು ಸಹಾಯಕವಾಗುತ್ತದೆ. ಸಾಮಾನ್ಯ ಜನತೆಯು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿರುವುದಕ್ಕೆ ಜನಪದ ಸಾಹಿತ್ಯ ಹೇಗೆ ಪ್ರಭಾವ ಬೀರಿದೆ ಎನ್ನುವುದರ ಕುರಿತು ಹೇಳಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಜೀವಂತವಾಗಿರುವ ಲಾವಣಿಗಳು, ಕೋಲಾಟದ ಪದಗಳು, ಗೀಗಿ ಪದಗಳು, ಡೊಳ್ಳಿನ ಪದಗಳು ಭಾರತದ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಹೇಗೆ ಪ್ರೇರಣೆಯಾಗಿವೆ ಎಂದು ತಿಳಿಯಲು ಸಹಕಾರಿಯಾಗುತ್ತವೆ.

ಜನಪದ ಸಾಹಿತ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ ಮತ್ತು ಗೀತ ಸಾಹಿತ್ಯದಲ್ಲಿ ವೀರತನದ ಪರಿಕಲ್ಪನೆಗಳ ಮೂಲಕ ಬ್ರಿಟಿಷರ ವಿರುದ್ದ ಭಾರತದಲ್ಲಿ ನಡೆದಿರುವ ಪ್ರತಿಯೊಂದು ಘಟನೆಗಳ

ಕುರಿತು ಮಾಹಿತಿಯನ್ನು ತಿಳಿಸಿದ್ದಾರೆ. ಟಿಪ್ಪು ಸುಲ್ತಾನ್, ಕಿತ್ತೂರು ರಾಣಿ ಚೆನ್ನಮ್ಮ, ಸಿಂಧೂರ ಲಕ್ಷ್ಮಣ, ನರಗುಂದದ ಬಾಬಾಸಾಹೇಬ, ಸುರಪುರದ ವೆಂಕಟಪ್ಪ ನಾಯಕ, ಸಂಗೊಳ್ಳಿ ರಾಯಣ್ಣ, ಮಹಾತ್ಮ ಗಾಂಧಿ ಮುಂತಾದವರು ಭಾರತದ ಸ್ವಾತಂತ್ರ್ಯದ ಚಳುವಳಿಯಲ್ಲಿ ತೋರಿದ ಸಾಹಸಮಯ ಚಿತ್ರಣಗಳನ್ನು ತಿಳಿಯಲು ಜನಪದ ಸಾಹಿತ್ಯ ಸಹಾಯಕವಾಗುತ್ತದೆ.

**ಉತ್ತರ ಕರ್ನಾಟಕದ ಜನಪದ ವೀರ ಗೀತೆಗಳು, ವಾಯ್. ಎಫ್. ಸೈದಾಪುರ, ಸೃಜನಶೀಲ ಪ್ರಕಾಶನ, ಹಾಸನ. ೨೦೦೩.**

ವಾಯ್.ಎಫ್ ಸೈದಾಪುರ ಇವರ 'ಉತ್ತರ ಕರ್ನಾಟಕದ ಜನಪದ ವೀರ ಗೀತೆಗಳು' ಎಂಬ ಕೃತಿಯಲ್ಲಿ ಉತ್ತರ ಕರ್ನಾಟಕದಲ್ಲಿ ನಾಡು–ನುಡಿಗಾಗಿ ಹಾಗೂ ಸಾಮಾಜಿಕ ಸಮಾನತೆಗಾಗಿ ಹೋರಾಟ ಮಾಡಿದಂತಹ ಸಿಂಧೂರ ಲಕ್ಷ್ಮಣ, ಸಂಗೊಳ್ಳಿ ರಾಯಣ್ಣ, ಸುರಪುರ ರಾಜ ವೆಂಕಟಪ್ಪ ನಾಯಕ, ಕಿತ್ತೂರು ಚನ್ನಮ್ಮ, ಉಲ್ಲಾಳದ ರಾಣಿ ಅಬ್ಬಕ್ಕ ಮುಂತಾದವರು ತೋರಿದ ಶೌರ್ಯ ಪರಾಕ್ರಮ ಸಾಹಸದ ಕುರಿತು ಕಾಲಾಂತರದಲ್ಲಿ ಹುಟ್ಟಿಕೊಂಡಿರುವಂಹ ಹಾಡುಗಳು, ಕಥೆಗಳು, ಐತಿಹ್ಯಗಳ ಮೂಲಕ ಮಾಹಿತಿಯನ್ನು ತಿಳಿಯಲು ಸಹಾಯಕವಾಗುತ್ತವೆ. ಇಂತಹ ಸ್ವಾತಂತ್ರವೀರರ ಕುರಿತು, ಹೋರಾಟಗಾರರು ಕುರಿತು ಹಲವಾರು ಹಾಡುಗಳು, ಲಾವಣಿಗಳು, ಗೀಗೀ ಪದಗಳು, ಚೌಡಕಿ, ಭಜನೆ ಇತ್ಯಾದಿ ರೂಪಗಳ ಮೂಲಕ ನೆನೆಯುವುದನ್ನು ಇಂದಿಗೂ ಕಾಣಬಹುದು. ಪ್ರಸ್ತುತ ಇವರ ಅಧ್ಯಾಯನದ ನಾಲ್ಕನೇ ಅಧ್ಯಯವು 'ಐತಿಹಾಸಿಕ ವೀರಗೀತೆಗಳಿಗೆ' ಸಂಬಂಧಿಸಿದ್ದು ವೀರ ಗೀತೆಗಳ ಪ್ರಕಾರಗಳನ್ನು ಗುರ್ತಿಸುತ್ತ ಐತಿಹಾಸಿಕ ವೀರ ಗೀತೆಗಳು ಎಂಬ ಭಾಗದಲ್ಲಿ ಸಂಗೊಳ್ಳಿ ರಾಯಣ್ಣನ ಕುರಿತು ಮಾಹಿತಿ ಇದೆ. ರಾಯಣ್ಣನಿಗೆ ಸಂಬಂಧಿಸಿದಂತೆ ಮನೆತನ, ವೃತ್ತಿ, ಜಾತಿಯ ಕುರಿತು ಚರ್ಚೆ ಮಾಡಿದ್ದಾರೆ. ರಾಯಣ್ಣನ ಕೆಚ್ಚೆದೆಯ ಹೋರಾಟದ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವುದನ್ನು ಕಾಣಬಹುದು. ಇಲ್ಲಿ ತೆಗೆದುಕೊಂಡಿರುವ ಲಾವಣಿಗಳು ಫ್ಲೀಟ್ ಸಂಗ್ರಹಿಸಿದ ಲಾವಣಿಗಳು ಕ್ಯಾತನಹಳ್ಳಿ ರಾಮಣ್ಣನವರ ಲಾವಣಿಗಳನ್ನು ಕೇಂದ್ರವಾಗಿಟ್ಟುಕೊಂಡು ವಿಶ್ಲೇಷಣೆ ಮಾಡಿರುವುದನ್ನು ಕಾಣಬಹುದು.

**ಕರ್ನಾಟಕದ ಸ್ವಾತಂತ್ರ್ಯವೀರರು, ಸು. ರುದ್ರಮೂರ್ತಿ ಶಾಸ್ತ್ರೀ, ಲೇಖಕರು ಮತ್ತು ಪ್ರಕಾಶಕರು ರುದ್ರಮೂರ್ತಿ ಶಾಸ್ತ್ರಿ ಪ್ರಕಾಶನ, ಬೆಂಗಳೂರು. ೨೦೦೬.**

ಕರ್ನಾಟಕದ ಸ್ವಾತಂತ್ರ್ಯವೀರರು ಈ ಕೃತಿಯಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ ಸಂಗೊಳ್ಳಿ ರಾಯಣ್ಣ ಎನ್ನು ಸಂಶೋಧನಾ ಲೇಖನವಿದೆ. ಈ ಲೇಖನವು ಸಂಗೊಳ್ಳಿ ರಾಯಣ್ಣನ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುತ್ತದೆ. ಕಿತ್ತೂರು ರಾಣಿ ಚೆನ್ನಮ್ಮ ಬೈಲಹೊಂಗಲದ ಸೆರೆಮನೆಯಲ್ಲಿರುವಂತಹ ಸಂದರ್ಭದಲ್ಲಿ ರಾಯಣ್ಣ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಲು ಹೋರಾಟದ ಸಿದ್ದತೆಯನ್ನು ಮಾಡಿಕೊಂಡ ನಂತರ ರಾಣಿ ಚೆನ್ನಮ್ಮಳ ಆರ್ಶಿವಾದ ಪಡೆದು ಹೋರಾಟಕ್ಕೆ ಮುಂದಾಗುತ್ತಾನೆ.

೧೮ನೆಯ ಶತಮಾನದಲ್ಲಿ ಭಾರತ, ಕರ್ನಾಟಕದಲ್ಲಿ ಇದ್ದಂತಹ ರಾಜಕೀಯ ಪರಿಸ್ಥಿತಿಗಳ ಹಿನ್ನಲೆಯಲ್ಲಿ ಸಂಗೊಳ್ಳಿ ರಾಯಣ್ಣನಂತಹ ಒಬ್ಬ ಸಾಮಾನ್ಯ ಪ್ರಜೆ ಬಲಾಢ್ಯರಾದ ಬ್ರಿಟಿಷರ ವಿರುದ್ದ ನೆಡೆಸಿದಂತಹ ಹೋರಾಟ ಈ ಹೋರಾಟಕ್ಕೆ ಕಿತ್ತೂರಿನ ಜನಸಮಾನ್ಯರ ಸಹಕಾರ ಹಾಗೂ ಸ್ವಾರ್ಥಿಗಳ ಒಳಸಂಚಿನ ಮೂಲಕ ರಾಯಣ್ಣ ಅಂತ್ಯವಾಗುತ್ತಾನೆ.

**ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ, ಜ್ಯೋತಿ ಹೊಸೂರ, ಕಾಲಗತಿ ಪ್ರಕಾಶನ, ರಾಯಬಾಗ, ೨೦೧೫.**

ಜ್ಯೋತಿ ಹೊಸೂರ ಅವರ 'ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ' ಕೃತಿಯು ಬಹಳ ಮುಖ್ಯವಾದುದ್ದಾಗಿದೆ. ಈ ಕೃತಿಯು ಒಟ್ಟು ೨೨ ಅಧ್ಯಾಯಗಳನ್ನೊಳಗೊಂಡಿದ್ದು ಆಕರಗಳು ಪಟ್ಟಿ-ಆಶಯ, ರಾಯಣ್ಣನ ಬಗೆಗಿನ ಆಕರ್ಷಣೆ ಮತ್ತು ಅಧ್ಯಯನ, ವೀರಪರಂಪರೆ ಮುಂದುವರೆಸಿದ ರಾಯಣ್ಣ ಮತ್ತು ಅವನ ಅನನ್ಯತೆ, ಬಿಡುಗಡೆಗೊಂಡ ರಾಯಣ್ಣನ ಅನುಸಂಧಾನ, ರಾಯಣ್ಣನನ್ನು ಕುರಿತ ಕೃತಿಗಳಲ್ಲಿ ಸಂಶಯಾತ್ಮಕ ಪ್ರಮುಖ ವ್ಯತ್ಯಾಸಗಳ ಚರ್ಚೆ, ವಂಶಜರು ಮತ್ತು ವಾರಸುದಾರರು, ರಾಯಣ್ಣನ ಸ್ಮಾರಕಗಳ ಬಗೆಗಳು ಮತ್ತು ಅವುಗಳ ಇತಿಹಾಸ, ರಾಯಣ್ಣನಿಗೆ ಸಂಬಂಧಿಸಿದಂತೆ ಸರಕಾರದ ಕರ್ತವ್ಯಗಳು ಹೀಗೆ ರಾಯಣ್ಣನಿಗೆ ಸಂಬಂಧಿಸಿದ ಸಮಗ್ರ ಮಾಹಿತಿಯನ್ನ ತಿಳಿಯಲು ಸಹಾಯಕವಾಗುತ್ತದೆ. ಜ್ಯೋತಿ ಹೊಸೂರ ಅವರು ರಾಯಣ್ಣನಿಗೆ ಸಂಬಂಧಿಸಿದಂತೆ ಇದುವರೆಗೂ ಪ್ರಕಟವಾದ ಕೃತಿಗಳನ್ನ, ಲೇಖನಗಳನ್ನ ಪರಮಾರ್ಶಿಸುತ್ತಾ ಹಾಗೂ ಬ್ರಿಟಿಷರು ಬರೆದಂತಹ ದಾಖಲೆಗಳನ್ನ ಪಾರಮಾರ್ಶಿಸಿ, ರಾಯಣ್ಣನ ಹೋರಾಟದ ಸ್ವರೂಪ, ಪ್ರದೇಶ, ದಿನಾಂಕವನ್ನ ವಿವಿಧ ಆಕರಗಳ ಮೂಲಕ ಸ್ಪಷ್ಟವಾಗಿ ಹೇಳಿದ್ದಾರೆ.

ಸಂಗೊಳ್ಳಿ ರಾಯಣ್ಣನನ್ನು ಕುರಿತು ರಚನೆಗೊಂಡ ಕೃತಿಗಳಿಗೇನು ಕೊರತೆಯಿಲ್ಲ. ಆದರೆ, ಅವೆಲ್ಲವೂ ಒಂದು ಮತ್ತೊಂದರ ಪ್ರತಿರೂಪವಾಗಿ ಹೊರ ಬಂದಿರುವುದು ಮಾತ್ರ ಬೇಸರದ ವಿದ್ಯಮಾನ. ಅವೆಲ್ಲವುಗಳಲ್ಲಿಯ ವಿಷಯದಲ್ಲಂತೂ ಕಾಣುವುದು ಚರ್ವಿತ ಚರ್ವಣ: ಮತ್ತು ಅರ್ಥವಂತಿಕೆಯಿಲ್ಲದ ಒಣ ವೈಭವೀಕರಣ. ಒಮ್ಮೊಮ್ಮೆ ಕಾಲಮಾನ, ನೈಜತೆ, ಸಾಧ್ಯಾಸಾಧ್ಯತೆಗಳ ಸಾಂಗತ್ಯವಿಲ್ಲದ ಕಾಲ್ಪನಿಕ ಘಟನಾವಳಿಗಳ ಹೆಮ್ಮೆಯ ನಿರೂಪಣೆ. ಇಂಥ ಕೃತಿಗಳಿಂದಾಗಿ ರಾಯಣ್ಣನು ನೈಜಸತ್ವ ಕಳೆದುಕೊಂಡು ಇನ್ನೇನೊ ಆಗಿ ರೂಪುಗೊಂಡಿದ್ದಾನೆ. ವಿಚಾರಶೀಲರ ಕಣ್ಣಲ್ಲಿ ವಿರೂಪಗೊಂಡಿದ್ದಾನೆ. ಅಂತೆಯೇ ನಾನು ರಾಯಣ್ಣನನ್ನು ಕುರಿತು ಕೃತಿ ರಚಿಸಿ, ಆ ಮೂಲಕ ಅವನ ವ್ಯಕ್ತಿತ್ವದ ಅನಾವರಣ ಮಾಡಬೇಕೆಂದು ನಿಶ್ಚಯಿಸಿದನು. ಅವನ ಬಗೆಗೆ ಹಲವಾರು ವರ್ಷಗಳ ಹಿಂದೆಯೇ ಮೂಡಿದ್ದ ಆಸಕ್ತಿ, ಹತ್ತಿಪ್ಪತ್ತು ವರ್ಷಗಳ ಅಧ್ಯಯನ ಇತ್ಯಾದಿಗಳು ನನ್ನ ಈ ನಿಶ್ಚಯದ ಹಿಂದಿನ ಪ್ರೇರಣೆಗಳು. ಆನಂತರ ಮೂರ್ನಾಲ್ಕು ವರ್ಷಗಳ ವರೆಗಿನ ಸತತ ಪರಿಶ್ರಮದೊಂದಿಗೆ ಸಾವಧಾನಪೂರ್ವಕ ಬರವಣಿಗೆ ಸಾಗಿಸಿದೆ. ಪ್ರಸ್ತುತ ಕೃತಿ ಎಂದು ಜ್ಯೋತಿ ಹೊಸೂರ ಅವರ ಮನದಾಳದ ಮಾತುಗಳು ಈ ರೀತಿಯಲ್ಲಿ ಹೇಳಿದ್ದಾರೆ.

ಸಂಗೊಳ್ಳಿ ರಾಯಣ್ಣನ ಕುರಿತು, ಅವನ ಶಕ್ತಿ ವೈಶಿಷ್ಟ್ಯಗಳ ಮೂಲ ಕಾರಣವಾಗಿರುವ ನೈತಿಕತೆಯ ನಡಾವಳಿ ಇತ್ಯಾದಿ ಕುರಿತು, ಅವನ ಹೋರಾಟದ ವೈಶಿಷ್ಟ್ಯಪೂರ್ಣ ನಾವಿನ್ಯತೆಯ ಕುರಿತು, ಅವನ ಬಲಿದಾನದ ಆನಂತರದಲ್ಲಿ ಪ್ರತಿಭಾವಂತ ಸಾಮಾನ್ಯ ಜನರು ವಿವಿಧ ತೆರನಾಗಿ ಸ್ಮರಿಸಿದ್ದಾರೆ: ಕಥೆ ಕಟ್ಟಿದ್ದಾರೆ: ತ್ರಿಪದಿ, ದುಂದುಮೆ, ಲಾವಣಿ ಇತ್ಯಾದಿಗಳನ್ನು ರಚಿಸಿ ಹಾಡಿಹೊಗಳಿದ್ದಾರೆ. ನಾಟಕಗಳು ರಚನೆಗೊಂಡಿವೆ. ಕಾದಂಬರಿ ಬರೆಯಲಾಗಿದೆ. ಅವನನ್ನು ಕುರಿತು ಇಂದಿನವರೆಗೂ ವಿವಿಧ ರೀತಿಯ ಸಾಹಿತ್ಯ ನಿರ್ಮಾಣಗೊಳ್ಳುತ್ತಲೇ ಇದೆ. ಹೀಗೆ ನಿರ್ಮಾಣಗೊಂಡ ವಿವಿಧ ಬಗೆಯ ಜನಪದ ಸಾಹಿತ್ಯ ಮತ್ತು ಶಿಷ್ಟ ಸಾಹಿತ್ಯ ಇತ್ಯಾದಿಗಳೆಲ್ಲ ಅವನ ಜೀವನ ಚರಿತ್ರೆ ಅರಿತುಕೊಳ್ಳಲು ಆಕರಗಳಾಗಿ ಮಹತ್ವದ ಮಾಹಿತಿಗೆ ಸುಳಿವು ನೀಡುತ್ತವೆ. ಇವುಗಳಿಗಿಂತ ಮುಖ್ಯವಾದ ಆಕರಗಳೆಂದರೆ ವಿವಿಧ ರೀತಿಯಲ್ಲಿ ಇರುವ ಮತ್ತು ದೊರೆಯುವ ಬ್ರಿಟಿಷ್ ಸರ್ಕಾರದ ಸೇವೆಯಲ್ಲಿದ್ದವರು ಪ್ರಾಸಂಗಿಕವಾಗಿ ಮಾಡಿದ ಪತ್ರವ್ಯವಹಾರಗಳು, ಆದೇಶಾದಿಗಳು ಮತ್ತು ಅವರು ದಾಖಲಿಸಿದ ರಾಯಣ್ಣಾದಿಗಳ ಜವಾಬು ಹೇಳಿಕೆ ಇತ್ಯಾದಿಗಳ ಸೂಕ್ಷ್ಮ ಪರಿಶೀಲನೆಯಿಂದ ದೊರೆಯಬಹುದಾದ ನಿಷ್ಕರ್ಷಗಳು. ಇಂಥ ಕಾರ್ಯದಿಂದ ರಾಯಣ್ಣನ ಹೋರಾಟದ ಸ್ವರೂಪ, ಪ್ರದೇಶ, ದಿನಾಂಕ, ಸ್ಥಳ ಮುಂತಾದ ಮಾಹಿತಿಗಳನ್ನು, ಖಚಿತವಾಗಿ ಅಧಿಕೃತವಾಗಿ ಕಂಡುಕೊಳ್ಳಲು ಬಹಳಷ್ಟು ಆಧಾರಗಳು ಲಭ್ಯವಾಗುತ್ತವೆ. ರಾಯಣ್ಣನನ್ನು ಕುರಿತು ಚರಿತ್ರೆ ಅಥವಾ ಬೇರೆ ಯಾವುದೇ ರೂಪದಲ್ಲಿ ಬರೆಯುವವರು ಈ ಬಗೆಯ ಆಕರಗಳನ್ನೆಲ್ಲ ಸರಿಯಾಗಿ ಹುಡುಕಿ ಬೆಳೆಸಿಕೊಳ್ಳಲೇ ಬೇಕು. ಇವುಗಳ ಜೊತೆಗೆ ಬೇರೆ ತತ್ಕಾಲೀನ ವಿಷಯಗಳನ್ನು ತಿಳಿಸಿಕೊಡುವ ಎಲ್ಲವುಗಳನ್ನೂ ಗಮನಿಸಿ ಪರ್ಯಾಲೋಚಿಸಬೇಕು. ಆನಂತರ ನಿಖರವಾದ ಸತ್ಯಾಂಶ ಶೋಧಿಸಬೇಕು. ಆ ಸತ್ಯಾಂಶಗಳನ್ನು ಚರಿತ್ರೆಯಲ್ಲಿ ನಿರೂಪಿಸಬೇಕು. ರಾಯಣ್ಣನನ್ನು ಕುರಿತು ಈಗ ಉಪಲಬ್ಧವಿರುವ ಚರಿತ್ರೆಗಳಲ್ಲಿ ಅಥವಾ ಇತರ ಕೃತಿಗಳಲ್ಲಿ ಇಂತಹ ಆಕರಗಳ ಸರಿಯಾದ ಉಪಯೋಗ ಮಾಡಿಕೊಳ್ಳುದಿರುವುದರಿಂದ, ಅವುಗಳಲ್ಲಿ ಹೆಚ್ಚು ಸಂಗತಿಗಳು, ಅವಾಸ್ತವ ಘಟನೆಗಳು, ಕಾಲ್ಪನಿಕ ವೈಭವಿಕರಣಗಳು, ಸ್ಥಾನ ಪಡೆದುಕೊಂಡಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಈವರೆಗೆ ಹೆಚ್ಚಿನ ಕೃತಿಗಳಲ್ಲಿ ರಾಯಣ್ಣನ ಬಗೆಗೆ ರೋಚಕವಾಗಿ, ಕೇವಲ ಅಭಿಮಾನ ಮತ್ತು ಬಗೆಬಗೆಯ ಹಿತಾಸಕ್ತಿಗಳಿಂದ ಚರಿತ್ರೆ ಬರೆಯಲಾಗಿದೆಯೇ ಹೊರತು ವಾಸ್ತವತೆಗೆ, ಐತಿಹಾಸಿಕತೆಗೆ ಹೆಚ್ಚು ಗಮನ ಕೊಟ್ಟಂತಿಲ್ಲ. ಎಂದು ರಾಯಣ್ಣನನ್ನು ಕುರಿತು ಬಂದಿರುವಂತಹ ಕೃತಿಗಳಲ್ಲಿ ರಾಯಣ್ಣನನ್ನು ವೈಭವೀಕರಿಸಿರುವುದರ ಕುರಿತು ಈ ರೀತಿಯಲ್ಲಿ ಹೇಳಿದ್ದಾರೆ. ಕಿತ್ತೂರು ಸಂಸ್ಥಾನದ ರಾಯಣ್ಣನ ಕ್ರಾಂತಿಕಾರಿ ಹೋರಾಟದ ವಿಷಯವನ್ನು ತಿಳಿಯಬೇಕಾದರೆ ಈ ಕೃತಿಯು ಬಹಳ ಮುಖ್ಯವಾಗುತ್ತದೆ.

**ಸತ್ಯವಿಠಲ ವಿರಚಿತ ಸಂಗೊಳ್ಳಿ ರಾಯಣ್ಣ ವೀರಕಥಾ, ಬೆಳವಾಡಿ ಮಂಜುನಾಥ (ಸಂ), ಕನಕ ಗುರುಪೀಠ, ಕಲಬುರಗಿ, ೨೦೧೫.**

ಬೆಳವಾಡಿ ಮಂಜುನಾಥ ಅವರು ಸಂಪಾದಿಸಿರುವ 'ಸತ್ಯವಿಠಲ ವಿರಚಿತ ಸಂಗೊಳ್ಳಿ ರಾಯಣ್ಣ ವೀರಕಥಾ' ಲಾವಣಿಗಳನ್ನು ಸಂಪಾದಿಸಿದ್ದಾರೆ. ಬೆಳವಾಡಿ ಮಂಜುನಾಥ ಅವರು ಸುದೀರ್ಘವಾದ ಪ್ರಸ್ತಾವನೆಯನ್ನು ಬರೆದು, ಲಾವಣಿಗಳು ಕೇವಲ ಮನರಂಜನೆಗಾಗಿ ಅಥವಾ ಯಾವುದೇ ಒಂದು

ವಸ್ತು ಅಥಾವ ವ್ಯಕ್ತಿಗೆ ಸೀಮಿತವಾಗಿರದೆ ಚರಿತ್ರೆಯ ಜೊತೆಗೆ ಲಾವಣಿಗಳು ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲು ಸಹಕಾರಿಯಾಗುತ್ತವೆ ಎಂದು ಹೇಳಿದ್ದಾರೆ. ಲಾವಣಿಗಳನ್ನು ಪೂರ್ವಾರ್ಧ ಮತ್ತು ಉತ್ತರಾರ್ಧ ಎಂದು ಗುರುತಿಸಿಕೊಂಡು, ಪೂರ್ವಾರ್ಧದಲ್ಲಿ ಕಿತ್ತೂರಿನ ಇತಿಹಾಸ ಹಾಗೂ ರಾಯಣ್ಣನ ಮೊದಲ ಚಿತ್ರಣವಿದ್ದು. ಉತ್ತರಾರ್ಧದಲ್ಲಿ ರಾಯಣ್ಣನ ಹೋರಾಟವನ್ನು ಚಿತ್ರಿಸಲಾಗಿದೆ.

**ಕಿತ್ತೂರು ಕಲಿಗಳು ಮತ್ತು ಸ್ವಾತಂತ್ರ ಸಂಗ್ರಾಮ, ಸ. ರಾ. ಸುಳಕೂಡೆ (ಸಂ), ಹೇಮಂತ ಸಾಹಿತ್ಯ, ಬೆಂಗಳೂರು, ೨೦೧೫.**

ಸ.ರಾ ಸುಳಕೊಡೆ ಅವರು ಸಂಪಾದಿಸಿರುವ 'ಕಿತ್ತೂರು ಕಲಿಗಳು ಮತ್ತು ಸ್ವಾತಂತ್ರ ಸಂಗ್ರಾಮ ಎಂಬ ಕೃತಿಯಲ್ಲಿ ಎರಡು ಭಾಗಗಳಿದ್ದು ಭಾಗ-೧ ರೂಪಕ ಲೇಖನ. ಭಾಗ-೨ರಲ್ಲಿ ಜನಪದ ಗೀತೆ, ಲಾವಣಿ, ಕವಿತೆಗಳು ಇರುವುದನ್ನು ಕಾಣುತ್ತೇವೆ. ಈ ಎರಡು ಭಾಗಗಳು ಸಂಗೊಳ್ಳಿ ರಾಯಣ್ಣ ಹಾಗೂ ಕಿತ್ತೂರಿಗೆ ಸಂಬಂಧಿಸಿದ ಮಾಹಿತಿಗಳನ್ನು ತಿಳಿಯಲು ಸಹಾಯಕವಾಗುತ್ತವೆ. ಭಾಗ ಎರಡರಲ್ಲಿ 'ಶೂರ ರಾಯಣ್ಣ' ಎನ್ನುವಂತಹ ಲೇಖನವನ್ನು ಬಿ.ವ್ಹಿ ನೇಸರಗಿ ಹಾಗೂ 'ವೀರಶೂರ ಸಂಗೊಳ್ಳಿ ರಾಯಣ್ಣ' ಲೇಖನವನ್ನು ಎಸ್.ಎಸ್ ರೇವಣ್ಣ ಇವರು ಬರೆದಿದ್ದಾರೆ. ಈ ಲೇಖನಗಳು ಜನಪದ ಸಾಹಿತ್ಯವನ್ನು ಮುಖ್ಯವಾಗಿಟ್ಟುಕೊಂಡು ರಚಿಸಿದಂತಹುಗಳಾಗಿವೆ. ಜಾನಪದ ಹಾಡುಗಳು ರಾಯಣ್ಣನ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ತುಂಬ ಮಹತ್ವದ ಪಾತ್ರವಹಿಸುತ್ತವೆ ಎಂದು ಹೇಳಬಹುದು.

ಸಂಗೊಳ್ಳಿ ಬಂಡಾಯ ಚರಿತ್ರೆ ಮತ್ತು ಜಾನಪದ ನೆಲೆಯಲ್ಲಿ, ಬಸವರಾಜ ಕಮತ, ಸೂರ್ಯಪ್ರಕಾಶ್ ಗೌಡ ಡಿಸೈನ್‌ಕೋರ್ ಇಂಡಿಯ ಪ್ರೈವೇಟ್ ಲಿಮಿಟೆಡ್, ಬೆಂಗಳೂರು. ೨೦೧೮

ಸಂಗೊಳ್ಳಿ ರಾಯಣ್ಣನ ಕುರಿತು ಬಂದಿರುವಂತಹ ಸಂಶೋಧನಾತ್ಮಕ ಕೃತಿಗಳಲ್ಲಿ ಬಸವರಾಜ ಕಮತ ಅವರ 'ಸಂಗೊಳ್ಳಿ ಬಂಡಾಯ ಕೃತಿಯು ಬಹಳ ಮಹತ್ವದ ಕೃತಿಯಾಗಿದೆ. ಸಂಗೊಳ್ಳಿ ನಿವಾಸಿಯಾದ ಇವರು ಸಂಗೊಳ್ಳಿ ರಾಯಣ್ಣನ ಅಭಿಮಾನಿಯಾಗಿ ಹಾಗೂ ರಾಯಣ್ಣನ ಕುರಿತು ಅನೇಕ ಹೊಸ ಅಂಶಗಳ ಕುರಿತು ಶೋಧಿಸುತ್ತಿರುವುದನ್ನು ಕ್ಷೇತ್ರಕಾರ್ಯಕ್ಕೆ ಹೋದಂತಹ ಸಂದರ್ಭದಲ್ಲಿ ಗುರುತಿಸಿದ್ದೇನೆ. ಈ ಕೃತಿಯು ಸಂಗೊಳ್ಳಿ ರಾಯಣ್ಣನ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುತ್ತದೆ.

ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ಕೆಲವು ಹೊಸ ದಾಖಲೆಗಳನ್ನು ಶೋಧಿಸಿರುವುದು ಈ ಕೃತಿಯಲ್ಲಿ ಗುರುತಿಸಿದ್ದಾರೆ. ಈ ಕೃತಿಯಲ್ಲಿ ಮುಖ್ಯವಾಗಿ ಸಂಗೊಳ್ಳಿ ರಾಯಣ್ಣನ ವಾರಸುದಾರರ ಚಾರಿತ್ರಿಕ ಹಿನ್ನಲೆ, ಲಭ್ಯವಾದ ದಾಖಲೆಗಳು, ದಾಖಲೆಗಳು ಲಭ್ಯವಾದ ಸ್ಥಳದ ವಿವರ, ದಾಖಲೆಗಳು ಒಳಗೊಂಡಿರುವ ವಿಷಯ ಹೊರತರುವ ಐತಿಹಾಸಿಕ ವ್ಯಕ್ತಿಯಾದ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ವಿಷಯಗಳು ಕೃತಿಯ ಅನುಬಂಧದಲ್ಲಿ ಸಂಗೊಳ್ಳಿ ರಾಯಣ್ಣನ ಚಿಕ್ಕಪ್ಪನ ವಂಶಾವಳಿ,

ಸಂಗೊಳ್ಳಿ ರಾಯಣ್ಣನ ವಾರಸುದಾರರು ಹೀಗೆ ರಾಯಣ್ಣನಿಗೆ ಸಂಬಂಧಿಸಿದ ಪೂರ್ಣ ವಿಷಯಗಳನ್ನು ಸಂಗ್ರಹಿಸಿ ಕೃತಿ ರಚನೆಯನ್ನು ಮಾಡಿದ್ದಾರೆ.

**ಸಂಶೋಧನ ಲೇಖನಗಳು**

**ಕನ್ನಡದ ಕಡುಗಲಿಗಳು, ಶಿವರಾಮು, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು. ೧೯೭೧.**

ಈ ಕೃತಿಯಲ್ಲಿ ಕಿತ್ತೂರು ರಾಣಿ ಚೆನ್ನಮ್ಮ ಹಾಗೂ ಸಂಗೊಳ್ಳಿ ರಾಯಣ್ಣನ ಕುರಿತು ಎರಡು ಸಂಶೋಧನಾತ್ಮಕ ಲೇಖನಗಳಿವೆ. ಸಂಗೊಳ್ಳಿ ರಾಯಣ್ಣನು ಕಿತ್ತೂರು ಸಂಸ್ಥಾನದ ಪತನದ ನಂತರ ಸೆರೆಮನೆಯಿಂದ ಬಿಡುಗಡೆಯೊಂದಿದ ನಂತರದ ಘಟನೆಗಳ ಅಂದರೆ ರಾಯಣ್ಣನ ಹೋರಾಟದ ಚಿತ್ರಣದ ಕಡೆಗೆ ಹೆಚ್ಚಿನ ಗಮನಹರಿಸಿದ್ದಾರೆ. ಸೆರೆಮನೆಯಿಂದ ಬಿಡುಗಡೆಗೊಂಡ ನಂತರ ರಾಯಣ್ಣ ಸಂಗೊಳ್ಳಿಗೆ ಹಿಂದಿರುಗಿ ವಾಲಿಕಾರಿಕೆಯ ಜೊತೆ ಜೊತೆಗೆ ಕಿತ್ತೂರು ಸಂಸ್ಥಾನವನ್ನು ಸ್ವಾತಂತ್ರ್ಯಗೊಳಿಸಿ ಮತ್ತೆ ದೇಸಾಯಿಯರ ಆಡಳಿತವನ್ನು ತರಬೇಕೆಂದು ಹೋರಾಟಕ್ಕೆ ಸಿದ್ದತೆಗಳನ್ನು ಮಾಡಿಕೊಳ್ಳುತ್ತಾನೆ.

ರಾಣಿ ಚೆನ್ನಮ್ಮಳ ಮರಣದ ನಂತರ ರಾಯಣ್ಣನಿಗೆ ದಿಕ್ಕೇ ತೋಚದಂತಹ ಸ್ಥಿತಿ ಎದುರಾಗುತ್ತದೆ. ರಾಯಣ್ಣನ ಸ್ನೇಹಿತರು ರಾಯಣ್ಣನಿಗೆ ಸಮಾಧಾನವಾಗಿರಿಸಿ ಕಿತ್ತೂರಿನ ದತ್ತಕ ಪುತ್ರ ಮಾಸ್ತಮರಡಿಯ ಬಾಳಪ್ಪ ಗೌಡರ ಮಗ ಶಿವಲಿಂಗಪ್ಪ (ಸವಾಯಿ ಮಲ್ಲಸರ್ಜಾ)ನನ್ನು ಮತ್ತೆ ಸಿಂಹಾಸನಕ್ಕೆ ಕೂರಿಸಬೇಕೆಂದು ಹೋರಾಟವನ್ನು ಮಾಡುತ್ತಾನೆ. ಹೋರಾಟದ ಸಿದ್ದತೆಗಳನ್ನು ಮಾಡಿಕೊಳ್ಳುವ ಸಂದರ್ಭದಲ್ಲಿ ರಾಯಣ್ಣ ಕಿತ್ತೂರಿನ ಸುತ್ತಮುತ್ತಲಿನ ಸಂಸ್ಥಾನಗಳ ಅರಸರ ಸಹಾಯವನ್ನು ಪಡೆದಿರುವುದು ಕಂಡುಬರುತ್ತದೆ. ರಾಯಣ್ಣ ಸೈನ್ಯ ಸಂಘಟಿಸುವ ಸಂದರ್ಭದಲ್ಲಿ ಸುರಪುರದ ಅರಸರ ಸಹಾಯ ಹಾಗೂ ಶಿವನಗುತ್ತಿಯ ಅರಸರ ಸಹಾಯ ಪಡೆದಿರುವುದನ್ನು ನಾವು ಕಾಣುತ್ತೇವೆ.

**ನೇಗಿನಹಾಳ ಪ್ರಬಂಧಗಳು, ನೇಗಿನಹಾಳ ಎಂ. ಬಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.**

ಎಂ ಬಿ ನೇಗಿನಹಾಳ ಅವರ ಸಂಶೋಧನಾ ಲೇಖನಗಳ ಸಂಗ್ರಹವಾದ 'ನೇಗಿನಹಾಳ ಪ್ರಬಂಧಗಳು' ಎಂಬ ಕೃತಿಯಲ್ಲಿ ರಾಯಣ್ಣನನ್ನು ಕುರಿತು 'ಜಾನಪದದಲ್ಲಿ ಸಂಗೊಳ್ಳಿ ರಾಯಣ್ಣ' ಎನ್ನುವಂತಹ ಲೇಖನವಿದೆ. ಈ ಲೇಖನದಲ್ಲಿ ರಾಯಣ್ಣನ ಕುರಿತು ಹಾಗೂ ಕಿತ್ತೂರು ಸಂಸ್ಥಾನದ ಕುರಿತು ಇರುವಂತಹ ಜನಪದ ಸಾಹಿತ್ಯದ ಮೂಲಗಳನ್ನು ಹೇಳುತ್ತಾ, ಕಿತ್ತೂರಿನಲ್ಲಿ ನಡೆದಂತಹ ಹೋರಾಟದ ಕುರಿತು ಸಂಕ್ಷಿಪ್ತವಾಗಿ ಹೇಳಿ, ರಾಯಣ್ಣನು ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸುವುದಕ್ಕಾಗಿ ಹೋರಾಟವನ್ನು ಮಾಡಿದ. ಕಿತ್ತೂರಿನ ಹೋರಾಟವನ್ನು ಕುರಿತು ಜನಪದ ಶೋಧ ನಡೆದಿದ್ದರೂ ಸಹ ಇನ್ನು ನಡೆಯಬೇಕಾಗಿರುವುದರ ಕುರಿತು ಹೇಳಿದ್ದಾರೆ. ಬೆಳಗಾವಿ

ಜಿಲ್ಲೆಯಲ್ಲಿ ರಾಯಣ್ಣನ ಕುರಿತ ಹೆಚ್ಚಿನ ಐತಿಹ್ಯಗಳಿರುವುದನ್ನು ಮತ್ತು ಚರಿತ್ರೆಯ ದೃಷ್ಟಿಯಲ್ಲಿ ಲಿಖಿತ ಆಧಾರಗಳು ದೊರೆಯದ ಸಂದರ್ಭದಲ್ಲಿ ಈ ಐತಿಹ್ಯಗಳೇ ಸತ್ಯವಾಗಿರುತ್ತವೆ. ಇಂತಹ ಐತಿಹ್ಯಗಳು ರಾಯಣ್ಣನ ಚರಿತ್ರೆಯನ್ನು ತಿಳಿಯಲು ತುಂಬ ಮಹತ್ವದ ಪಾತ್ರವನ್ನು ವಹಿಸುತ್ತದೆ.

**ಹಾಲತೊರೆ, ಎಂ ಕರಿಯಪ್ಪ, (ಸಂ), ನಗರ ಕುರುಬರ ಸಂಘ ಶ್ರೀ ಬೀರೇಶ್ವರ ವಿದ್ಯಾರ್ಥಿ ನಿಲಯ, ದಾವಣಗೆರೆ. ೨೦೦೩.**

ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿ ಹಾಲತೊರೆ ಕೃತಿಯಲ್ಲಿ 'ರಾಷ್ಟ್ರವೀರ ಸಂಗೊಳ್ಳಿ ರಾಯಣ್ಣ' ಎನ್ನುವ ಲೇಖನವನ್ನು ಟಿ. ಎನ್. ಶಶಿಧರ ಅವರು ಬರೆದಿದ್ದಾರೆ. ಈ ಲೇಖನದಲ್ಲಿ ಸಂಗೊಳ್ಳಿ ರಾಯಣ್ಣನ ಹಾಗೂ ಕಿತ್ತೂರು ಸಂಸ್ಥಾನದ ಕುರಿತು ಹೊಸ ಬೆಳಕನ್ನು ಚೆಲ್ಲಿರುವುದು ಕಂಡುಬರುತ್ತದೆ. ಕೆಲವೊಂದು ತಪ್ಪು ಗ್ರಹಿಕೆಗಳು ಇರುವುದು ಕಂಡುಬರುತ್ತದೆ. ಸಾಮಾನ್ಯ ಸೈನಿಕ, ಪ್ರಜೆಯಾಗಿದ್ದ ರಾಯಣ್ಣ ಮೊಘಲರ ಸಹಾಯ ಕೇಳಿರುವುದರ ಕುರಿತು ಮಾಹಿತಿಯನ್ನು ನೀಡಿದ್ದಾರೆ.

**ಡಾ. ಬಸವರಾಜ ಮಲಶೆಟ್ಟಿ ಅವರ ಆಯ್ದ ಲೇಖನಗಳು, ಬಸವರಾಜ ಮಲಶೆಟ್ಟಿ (ಸಂ), ಸ್ನೇಹಾ ಪ್ರಿಂಟರ್ಸ್, ಕಲಬುರ್ಗಿ, ೨೦೦೮.**

ಬಸವರಾಜ ಮಲಶೆಟ್ಟಿ ಅವರ 'ಡಾ ಬಸವರಾಜ ಮಲಶೆಟ್ಟಿ ಅವರ ಆಯ್ದ ಲೇಖನಗಳು' ಎನ್ನುವ ಕೃತಿಯಲ್ಲಿ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ 'ಸಂಗೊಳ್ಳಿ ರಾಯಣ್ಣ : ಇತಿಹಾಸ ಮತ್ತು ಜನಪದ ಸಾಹಿತ್ಯ 'ಕಿತ್ತೂರ ಈರವ್ವನನ್ನು ಕುರಿತು ಇತಿಹಾಸ ಮತ್ತು ಜನಪದ ಸಾಹಿತ್ಯ' ಎನ್ನುವ ಎರಡು ಲೇಖನಗಳಿವೆ. ಕಿತ್ತೂರು ಸಂಸ್ಥಾನದ ಇತಿಹಾಸವನ್ನು ಮತ್ತು ರಾಯಣ್ಣನ ಕುರಿತು ಈ ಲೇಖನದಲ್ಲಿ ಬ್ರಿಟಿಷರು ಕಿತ್ತೂರನ್ನು ವಶಪಡಿಸಿಕೊಂಡ ನಂತರದ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುತ್ತದೆ. ಕಿತ್ತೂರು ಬ್ರಿಟಿಷರ ವಶವಾದ ನಂತರ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಲು ಸಮಾನ ಮನಸ್ಕರೊಂದಿಗೆ ಸೇರಿ ಹೋರಾಟಕ್ಕೆ ಸಿದ್ಧರಾಗುತ್ತಾರೆ. ಇಂತಹ ಸಂದರ್ಭದಲ್ಲಿ ಸ್ವಾಭಿಮಾನಿಯಾದ ರಾಯಣ್ಣ ಹಾಗೂ ಕಿತ್ತೂರಿನ ಅನೇಕರು ಕಿತ್ತೂರನ್ನ ಸ್ವಾತಂತ್ರ್ಯಗೊಳಿಸಲು ಬ್ರಿಟಿಷರ ಕಚೇರಿಗಳ ಮೇಲೆ ದಾಳಿಗಳನ್ನ ಮಾಡುತ್ತಾರೆ. ಇಂತಹ ಘಟನೆಗಳ ಕುರಿತು ಸಂಶೋಧನಾತ್ಮಕ ರೀತಿಯಲ್ಲಿ ಜನಪದ ಸಾಹಿತ್ಯವನ್ನು ಬಳಸಿಕೊಂಡಿರುವುದು ಈ ಲೇಖನದಲ್ಲಿ ಕಂಡುಬರುತ್ತದೆ.

**ಸಂಸ್ಕೃತಿ ಸಂಕಥನ, ವೀರೇಶ ಬಡಿಗೇರ, ಮಯ ಪ್ರಕಾಶನ, ಕಮಲಾಪುರ. ೨೦೦೯**

ವೀರೇಶ ಬಡಿಗೇರ ಇವರ 'ಸಂಸ್ಕೃತಿ ಸಂಕಥನ' ಎಂಬ ಕೃತಿಯಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ 'ಸಂಗೊಳ್ಳಿ ರಾಯಣ್ಣ' ಎನ್ನುವ ಲೇಖನವಿದೆ. ಈ ಲೇಖನದಲ್ಲಿ ರಾಯಣ್ಣನನ್ನು ಕುರಿತು ಇದುವರೆಗೂ ಬಂದಿರುವಂತಹ ಕೃತಿಗಳಲ್ಲಿ ಹಾಗೂ ಜಾನಪದದಲ್ಲಿ ಹೆಚ್ಚು ವೈಭವೀಕರಿಸಿ

ಬರೆದಿರುವುದನ್ನು ಹಾಗೂ ದುರಂತ ನಾಯಕನನ್ನಾಗಿ ಚಿತ್ರಿಸಿರುವುದು ಹೆಚ್ಚಾಗಿ ಕಂಡುಬರುತ್ತದೆ ಎಂಬುವಂತಹ ಅಂಶಗಳನ್ನು ತಿಳಿಸುತ್ತಾ, ರಾಯಣ್ಣ ತಳಸಮುದಾಯಗಳ ಮೂಲಭೂತ ಬೇಡಿಕೆಗಳಿಗೆ ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದವರ ಕುರಿತು ಚಿತ್ರಿಸಲು ಪ್ರಯತ್ನಿಸಿದ್ದಾರೆ. ಜನಪದರು ತಮ್ಮವರನ್ನು ನಾಯಕನನ್ನಾಗಿ ಮಾಡಿ ವೈಭವೀಕರಿಸಿ ಹೇಳಿದ್ದಾರೆ. ಈ ಲೇಖನದಲ್ಲಿ ಕಿತ್ತೂರಿನ ಬಗ್ಗೆ ಸಂಕ್ಷಿಪ್ತವಾಗಿ ಹೇಳುತ್ತಾ ರಾಯಣ್ಣನಿಗೆ ಸಂಬಂಧಿಸಿದಂತೆ ಇದುವರೆಗೂ ಬಂದಂತಹ ಮೌಖಿಕ ಹಾಗೂ ಲಿಖಿತ ಸಾಹಿತ್ಯದ ಕುರಿತು ಹೇಳುತ್ತಾ ತಮ್ಮ ಸ್ವಾತಂತ್ರ್ಯಕ್ಕೆ ದಕ್ಕೆ ಬಂದಾಗ ಮನುಷ್ಯ ಯಾವ ರೀತಿಯಲ್ಲಿ ಬದಲಾಗುತ್ತಾನೆ. ಎನ್ನುವಂತಹ ಸಂದರ್ಭವನ್ನು ಲೇಖಕರು 'ಇಂಥ ಸಂಬಂಧಗಳಿಗೆ ಚ್ಯುತಿ ಬಂದಾಗ ತೋರಿಸುವ ಪ್ರತಿರೋಧ ಪ್ರತಿಕ್ರಿಯೆ ಬೆಂಕಿಯನ್ನು ಬದುಕಿನ ಹಂಗನ್ನೆ ತೊರೆದು ಬಂಡಾಯಕ್ಕಿಳಿಯುವ ಗುಣ ಎರವಲು ಪಡೆದಂತದ್ದಲ್ಲ ಅದಕ್ಕೆ ರಾಯಣ್ಣ ಉತ್ತಮ ನಿದರ್ಶನ.' ಸ್ವಾತಂತ್ರ್ಯದ ಕುರಿತು ಜನರಲ್ಲಿ ಜಾಗೃತಿ ಮೂಡಿಸಿದವರಲ್ಲಿ, ಎಚ್ಚರಗೊಳಿಸಿದವರಲ್ಲಿ ರಾಯಣ್ಣ ಪ್ರಮುಖ ಎನ್ನುವಂತಹದನ್ನು ಲೇಖಕರು ಹೇಳಿದ್ದಾರೆ.

**ಕರ್ನಾಟಕದ ಕ್ರಾಂತಿಕಾರಿಗಳು, ರಮೇಶ ಬಿ. ಈ. ಚಂದನ ಪ್ರಕಾಶನ, ಬೆಂಗಳೂರು. ೨೦೧೧.**

ಬ್ರಿಟಿಷರ ವಿರುದ್ದ ಭಾರತೀಯ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ ಕರ್ನಾಟಕದ ವೀರರನ್ನು, ದೇಶಭಕ್ತರನ್ನು ನೆನೆಯುವುದಕ್ಕಾಗಿ ರಚಿಸಿರುವ ಈ 'ಕರ್ನಾಟಕದ ಕ್ರಾಂತಿಕಾರಿಗಳು' ಕೃತಿಯಲ್ಲಿ ಬ್ರಿಟಿಷರ ವಿರುದ್ದ ೧೮೨೪ ರಲ್ಲಿ ಹೋರಾಟ ಮಾಡಿದ ಕಿತ್ತೂರು ರಾಣಿ ಚೆನ್ನಮ್ಮ ಹಾಗೂ ಸಂಗೊಳ್ಳಿ ರಾಯಣ್ಣನ ತ್ಯಾಗ, ಬಲಿದಾನವು ೧೯೪೨ ರ ಭಾರತದ ಅಸಹಕಾರ ಚಳುವಳಿಗೆ ಸ್ಪೂರ್ತಿಯಾಗಿದ್ದಾರೆ.

ಭಾರತದ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಕಿತ್ತೂರು ಸಂಸ್ಥಾನಕ್ಕೆ ಪ್ರಮುಖ ಸ್ಥಾನವಿದೆ. ಚಿಕ್ಕ ಸಂಸ್ಥಾನವೊಂದು ಭಾರತದಲ್ಲಿ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸುತ್ತಿದ್ದ ಬಲಾಢ್ಯರಾದ ಬ್ರಿಟಿಷರ ವಿರುದ್ಧ ಸಮರ ಸಾರಿ ವಿಜಯ ಸಾಧಿಸಿದ ಮೊದಲ ಸಂಸ್ಥಾನವಾಗಿದೆ. ಕರ್ನಾಟಕದ ಕ್ರಾಂತಿಕಾರಿಗಳು ಈ ಕೃತಿಯಲ್ಲಿ ಕಿತ್ತೂರು ಸಂಸ್ಥಾನ ಹಾಗೂ ಸಂಗೊಳ್ಳಿ ರಾಯಣ್ಣನ ಹೋರಾಟದ ಕುರಿತು ಮಾಹಿತಿಯನ್ನು ತಿಳಿಯಲು ಸಹಾಯವಾಗುತ್ತದೆ.

**ಹಾಲುಮತ ರತ್ನಗಳು, ಚಂದ್ರಕಾಂತ ಬಿಜ್ಜರಗಿ, ಶೈಲಚಂದ್ರ ಪ್ರಕಾಶನ, ವಿಜಾಪುರ. ೨೦೧೨.**

ಸಂಗೊಳ್ಳಿ ರಾಯಣ್ಣನನಿಗೆ ಸಂಬಂಧಿಸಿದಂತೆ ಈ ಕೃತಿಯಲ್ಲಿ 'ಸಂಗೊಳ್ಳಿ ರಾಯಣ್ಣ' ಎನ್ನುವ ಲೇಖನವಿದೆ. ಈ ಲೇಖನವು ಸಂಗೊಳ್ಳಿ ರಾಯಣ್ಣನ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುತ್ತದೆ. ಹಾಗೂ ಈ ಲೇಖನದಲ್ಲಿ ಸಂಗೊಳ್ಳಿ ರಾಯಣ್ಣನ ಪೂರ್ವಜರ ಕುರಿತು ಕೆಲವೊಂದು ಅಂಶಗಳನ್ನು ತಪ್ಪಾಗಿ ದಾಖಲಿಸಿರುವುದು ಕಂಡು ಬರುತ್ತದೆ.

ರಾಯಣ್ಣನ ತಂದೆ ಭರಮಪ್ಪ, ಚಿಕ್ಕಪ್ಪ ಸಣ್ಣಭರಮಪ್ಪ ಎಂದು ಚರಿತ್ರೆಯ ದಾಖಲೆಗಳಿಂದ ತಿಳಿದು ಬರುತ್ತದೆ. ಸಣ್ಣಭರಮಪ್ಪ ಚಿಕ್ಕ ವಯಸ್ಸಿನಲ್ಲಿಯೇ ಮರಣ ಹೊಂದಿದನು ಎಂದು ಹೇಳಿದ್ದಾರೆ. ಚರಿತ್ರೆಯಲ್ಲಿ ಸಣ್ಣಭರಮಪ್ಪನ ಮರಣದ ಕುರಿತು ಹಾಗೂ ಚಿಕ್ಕ ವಯಸ್ಸಿನಲ್ಲಿಯೇ ಮರಣ ಹೊಂದಿರುವ ವಿಷಯದ ಕುರಿತು ಮಾಹಿತಿಗಳು ದೊರೆಯುವುದಿಲ್ಲ. ನಿಂಗಣ್ಣ ಸಣ್ಣಕ್ಕಿ ಅವರ ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ ಕೃತಿಯ ಆರಂಭದಲ್ಲಿ ಹೆಳವರಿಂದ ರಾಯಣ್ಣನ ವಂಶಾವಳಿ ದಾಖಲಿಸಿದ್ದಾರೆ. ಸಣ್ಣಭರಮಪ್ಪನ ವಂಶ ಮುಂದುವರೆದಿರುವುನ್ನು ಕೊಟ್ಟಿದ್ದಾರೆ.

ಸ್ವಾತಂತ್ರ್ಯ ಸ್ವಾಭಿಮಾನಿಯಾದ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ಸಾಹಿತ್ಯ ಪ್ರಕಾರಗಳಲ್ಲಿ ಭಿನ್ನ ಭಿನ್ನವಾದಂತಹ ಮಾಹಿತಿಗಳು ದೊರಕುತ್ತವೆ. ರಾಯಣ್ಣನ ವಂಶ, ಹೆಂಡತಿ, ಮಗ, ಸಹೋದರ ಇಂತಹ ವಿಷಯದ ಕುರಿತು ಮಾಹಿತಿ ಇರುವುದನ್ನು ನಾವು ಕಾಣಬಹುದು. ನಾಟಕ ಕಥೆ ಕಾದಂಬರಿ ಲಾವಣಿ ಮುಂತಾದ ಹಾಡುಗಳಲ್ಲಿ ದೊರಕುತ್ತವೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಸಾಕಷ್ಟು ಚರ್ಚೆಗಳು ನಡೆದಿದ್ದರೂ ಸಹ ಒಮ್ಮತವಾದಂತಹ ಅಭಿಪ್ರಾಯಗಳು ಬಂದಿಲ್ಲವೆಂದು ಹೇಳಬೇಕು. ಇಂತಹ ಐತಿಹಾಸಿಕ ವ್ಯಕ್ತಿಯ ಕೌಟುಂಬಿಕ ಜೀವನದ ಮಾಹಿತಿಯು ಸ್ಪಷ್ಟವಾಗಿ ಇಲ್ಲದಿರುವುದಕ್ಕೆ ಕಾರಣ ತಿಳಿದುಬಂದಿಲ್ಲ.

ರಾಯಣ್ಣನ ಮನೆತನ, ತಂದೆ, ತಾಯಿ, ವೃತ್ತಿ, ಕಿತ್ತೂರು ಸಂಸ್ಥಾನದಲ್ಲಿ ಸೈನಿಕನಾಗಿ, ಕಿತ್ತೂರು ಸಂಸ್ಥಾನ ಬ್ರಿಟಿಷರ ವಶವಾದ ನಂತರ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಲು ನಡೆಸಿದಂತಹ ಹೋರಾಟವನ್ನು ತಿಳಿಯಲು ಜನಪದ ಸಾಹಿತ್ಯ ಸಹಾಯಕವಾಗುತ್ತದೆ. ರಾಯಣ್ಣನನ್ನು ಕುರಿತು ರಚನೆಗೊಂಡಿರುವಂತಹ ಎಲ್ಲಾ ಲಾವಣಿಗಳು ರಾಯಣ್ಣನ ಕುರಿತಂತಹ ಪ್ರಮುಖ ದಾಖಲೆಗಳು.

ಉತ್ತರ ಕರ್ನಾಟಕದ ಭಾಗದಲ್ಲಿ ಲಾವಣಿಗಳು ಹೆಚ್ಚು ಜನಪ್ರಿಯತೆಯನ್ನು ಪಡೆದಿವೆ. ರಾಯಣ್ಣನ ಸ್ವಾತಂತ್ರ್ಯ ಹೋರಾಟವನ್ನು ಭಾರತದಾದ್ಯಂತ ವಿಸ್ತರಿಸಲು ಲಾವಣಿಗಳು ಪ್ರಮುಖ ಮಾಧ್ಯಮವಾಗಿರುವುದನ್ನು ಕಾಣಬಹುದು. ಜನಪದ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣನ ನೈಜ ಚಿತ್ರಣವನ್ನು ತಿಳಿಯಬಹುದು. ರಾಯಣ್ಣನ ವ್ಯಕ್ತಿತ್ವದ ವೈಶಿಷ್ಟ್ಯಗಳನ್ನು ಜನಪದ ಸಾಹಿತ್ಯದಲ್ಲಿ ಪ್ರಮುಖವಾಗಿರುವ ಲಾವಣಿ ಸಾಹಿತ್ಯದಲ್ಲಿ ರಾಯಣ್ಣನನ್ನು ಸಮರ್ಥವಾಗಿ ಹಾಗೂ ವಿವರವಾಗಿ ಸಂಪೂರ್ಣ ಚಾರಿತ್ರಿಕ ವಿವರವನ್ನು ಕಟ್ಟಿಕೊಟ್ಟಿವೆ. ಕಿತ್ತೂರಿನ ಸುತ್ತಮುತ್ತಲಿನ ಪ್ರದೇಶದಲ್ಲಿ ರಾಯಣ್ಣನನ್ನು ದೇವರೆಂದು ಪೂಜಿಸುತ್ತಿರುವ ಸ್ಥಳಗಳಲ್ಲಿ ಇರುವಂತಹ ಐತಿಹ್ಯಗಳನ್ನು ಸಂಗ್ರಹಿಸಬೇಕಾಗಿದೆ. ಸಂಗೊಳ್ಳಿ ರಾಯಣ್ಣನನ್ನು ಜಾನಪದ ಇತರೆ ಪ್ರಕಾರಗಳಾದ ಆಚರಣೆ, ಉತ್ಸವ, ಲಾವಣಿ, ಕಥೆ, ಒಗಟು, ಗಾದೆ, ವದಂತಿ, ಐತಿಹ್ಯ ಮುಂತಾದವುಗಳನ್ನು ಸಂಗ್ರಹಿಸಬೇಕಾದ ಕಾರ್ಯ ನಡೆಯಬೇಕಿದೆ.

ಜಾನಪದ ಸಾಹಿತ್ಯದಲ್ಲಿ ಐತಿಹ್ಯಗಳಿಗೆ ವಿಶೇಷ ಮಹತ್ವವಿದೆ. ಚಾರಿತ್ರಿಕ ವ್ಯಕ್ತಿಯಾದ ರಾಯಣ್ಣನ ಕುರಿತು ಅಸಂಖ್ಯಾತ ಐತಿಹ್ಯಗಳು ಇರುವುದನ್ನು ಕಾಣುತ್ತೇವೆ. ಐತಿಹ್ಯಗಳನ್ನು ಕಥೆಗಳೆಂದು ಹಿಂದೆ ಸರಿಸದೆ, ಇಂತಹ ಎಷ್ಟೋ ಐತಿಹ್ಯಗಳು, ಕಥೆಗಳು ಅನೇಕ ವೇಳೆ ಐತಿಹಾಸಿಕ ಸತ್ಯಗಳೆ ಆಗಿರುತ್ತವೆ. ಆದ್ದರಿಂದ ರಾಯಣ್ಣನಿಗೆ ಸಂಬಂಧಪಟ್ಟ ಇಂತಹ ಲಾವಣಿಗಳು, ಐತಿಹ್ಯಗಳ, ವದಂತಿಗಳು ಮುಂತಾದವುಗಳನ್ನು ಇತಿಹಾಸ ರಚನೆಯಲ್ಲಿ ಬಳಸಿಕೊಳ್ಳಬೇಕೆಂದು ಹೇಳಲೇಬೇಕು.

* * *

## ಅಧ್ಯಾಯ : ಎರಡು

# ಸಂಗೊಳ್ಳಿ ರಾಯಣ್ಣ : ಚರಿತ್ರೆ ಮತ್ತು ಪರಿವಾರ

ಭಾರತ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಕಿತ್ತೂರು ಸಂಸ್ಥಾನದ ಪಾತ್ರ ಬಹಳ ಮುಖ್ಯವಾದದ್ದು. ೧೮೫೭ರ ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕಿಂತ ಮೊದಲು ಭಾರತದಲ್ಲಿ ರಾಜ್ಯಗಳ, ಸಂಸ್ಥಾನಗಳ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಹೋರಾಟ ಮಾಡಿದವರೆಂದರೆ ಮೈಸೂರಿನ ಹೈದರಾಲಿ, ಟಿಪ್ಪು, ಕಿತ್ತೂರಿನ ರಾಣಿ ಚೆನ್ನಮ್ಮ ಹಾಗೂ ಸಂಗೊಳ್ಳಿ ರಾಯಣ್ಣಾದಿಗಳು ಪ್ರಮುಖರಾಗಿ ಕಂಡುಬರುತ್ತಾರೆ. ರಾಯಣ್ಣ ರಾಜನಾಗಿರಲಿಲ್ಲ, ರಾಜನಾಗಬೇಕೆಂಬ ಬಯಕೆಯು ಅವನಲ್ಲಿರಲಿಲ್ಲ. ಆದರೂ ಅವನು ಬ್ರಿಟಿಷರನ್ನು ಕಿತ್ತೂರಿನಿಂದ ಹೊರಹಾಕಿ ಕಿತ್ತೂರು ಸಂಸ್ಥಾನವನ್ನು ಮತ್ತೆ ಸ್ವಾತಂತ್ರ್ಯಗೊಳಿಸಿ ದೇಸಾಯಿ ಅವರ ಆಡಳಿತವನ್ನು ಮರಳಿ ಸ್ಥಾಪಿಸಲು ಹೋರಾಟವನ್ನು ಮಾಡುತ್ತಾನೆ.

ಭಾರತದಲ್ಲಿ ಬ್ರಿಟಿಷರು ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಲು ಅನುಸರಿಸಿದ ಮಾರ್ಗವನ್ನು ಕುರಿತು ಎನ್.ಪಿ. ಶಂಕರನಾರಾಯಣ ರಾವ್ ಅವರು "ರಾಜ್ಯ ವಿಸ್ತರಣೆಗೆ ಬ್ರಿಟಿಷರು ಅನುಸರಿಸಿದ ಎರಡು ನೀತಿಗಳನ್ನು ಇಲ್ಲಿ ಸೂಚಿಸುವುದು ಆಗತ್ಯ. ಇವು ಪರಸ್ಪರ ಪೂರಕ ಹಾಗೂ ಅವುಗಳ ಗುರಿ ಒಂದೇ. ಇತರೆ ರಾಜ್ಯಗಳ ವಿದ್ಯಮಾನಗಳಲ್ಲಿ ತಲೆ ಹಾಕುವುದು ಮತ್ತು ಸಹಾಯಕ ಸೈನ್ಯ ಪದ್ಧತಿ ಈ ಎರಡು ನೀತಿಗಳು ಉತ್ತರಾಧಿಕಾರಕ್ಕೆ ವ್ಯಾಜ್ಯವಾದಲ್ಲೆಲ್ಲ ಇಂಗ್ಲೀಷರು ತಲೆಯಿಟ್ಟು ರಾಜ್ಯ ವಿಸ್ತರಿಸಿದುದು ಎಲ್ಲರಿಗೂ ತಿಳಿದ ಸಂಗತಿ"[೧] ಎಂದು ಅಭಿಪ್ರಾಯ ಪಡುತ್ತಾರೆ. ಬ್ರಿಟಿಷರು ಈ ಎರಡು ನೀತಿಗಳ ಜೊತೆಗೆ ದತ್ತು ಮಕ್ಕಳಿಗೆ ಹಕ್ಕಿಲ್ಲವೆಂಬ ನೀತಿಯನ್ನು ಜಾರಿಗೆ ತಂದು, ಭಾರತದ ಅನೇಕ ಪ್ರಾಂತ್ಯ, ಸಂಸ್ಥಾನಗಳಲ್ಲಿ ಉತ್ತರಾಧಿಕಾರಿಯಿಲ್ಲ ಎಂದು ಹೇಳುತ್ತಾ ಭಾರತದಲ್ಲಿ ರಾಜ್ಯ ವಿಸ್ತರಿಸಿದರು.

"ರಾಯಣ್ಣ ಮತ್ತು ಅವನ ಮಿತ್ರ ಪಡೆಯ ಉದ್ದೇಶ ಆಂಗ್ಲರಿಂದ ತಮಗಾದ ಅನ್ಯಾಯಕ್ಕೆ ಪ್ರತಿಕಾರ ಹೂಡುವುದು ನಿಮಿತ್ತವಾಯಿತು. ಸ್ವಾತಂತ್ರ್ಯದ ಕಿಚ್ಚು ವಿಶಾಲ ವ್ಯಾಪ್ತಿ ಪಡೆಯಿತು. ಸರ್ಕಾರದ ಅಡಳಿತ ಯಂತ್ರದ ತಡೆಗೋಡೆಯಂತೆ ಅಸಹಕಾರ ಅಸ್ತ್ರ ಬಳಸಿದರು. ಅದಕ್ಕಾಗಿ ಅವರ ಕರನಿರಾಕರಣೆ, ಕಾನೂನು ಭಂಗ ಪ್ರಜಾಸೇನೆ ಸಂಘಟನೆ, ಗೆರಿಲ್ಲಾ ದಾಳಿ, ಚಾವಡಿ ಕಚೇರಿಗಳಿಗೆ ಬೆಂಕಿ, ಸರ್ಕಾರಿ ಕಾಗದ ಪತ್ರಗಳ ನಾಶ, ಕಂದಾಯದ ಹಣ ಲೂಟಿ, ಟಪಾಲು ಕದಿಯುವುದು, ಸರ್ಕಾರಿ ಪತ್ರ ಸಂಚಾರಕ್ಕೆ ತಡೆ, ಕ್ರಾಂತಿಗೆ ಜನರನ್ನು ಪ್ರಚೋದಿಸುವುದು, ಟಪಾಲು ಕಚೇರಿಗೆ ಬೆಂಕಿ, ಟಪಾಲು ರನ್ನರುಗಳ ಮೇಲೆ ದಾಳಿ, ಜೀವ ಬೆದರಿಕೆ, ಸರ್ಕಾರಿ ಅಧಿಕಾರಿಗಳ ಮತ್ತು ಅವರ ಹಸ್ತಕರ ಮೇಲೆ ದಾಳಿ ಅವರ ಅಸ್ತಿ ಪಾಸ್ತಿ ನಾಶ, ಸೇನಾ ಶಿಬಿರಗಳ ಮೇಲೆ ದಾಳಿ ಮುಂತಾದ ಕಾರ್ಯಗಳನ್ನು ಕೈಗೊಂಡನು. ೧೯೪೨ ರಲ್ಲಿ ಅಗಷ್ಟ ಕ್ರಾಂತಿಯಲ್ಲಿ ಮಾಡಿದ ಕಾರ್ಯಚಟುವಟಿಕೆಗಳನ್ನು ರಾಯಣ್ಣ ೧೧೨ ವರ್ಷಗಳ ಹಿಂದೆಯೆ ೧೮೩೦ ಜನೆವರಿ ಕ್ರಾಂತಿಯಲ್ಲಿ ಬಳಸಿದ್ದಾನೆ. ಮಹಾತ್ಮ ಗಾಂಧಿಯವರ ಅಸಹಕಾರ, ಕರನಿರಾಕರಣೆಯ ಅಸ್ತ್ರಗಳನ್ನು ರಾಯಣ್ಣ ಅವಾಗಲೆ ಬ್ರಿಟಿಷರಿಗೆ ಪರಿಚಯಿಸಿದ್ದಾನೆ."[೨] ಹೀಗೆ ರಾಯಣ್ಣ ಭಾರತದ ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಪೂರ್ತಿಯಾಗಿ ನಿಲ್ಲುತ್ತಾನೆ.

ಕಿತ್ತೂರು ಸಂಸ್ಥಾನದ ಇತಿಹಾಸದಲ್ಲಿ ಮರೆಯಲಾಗದ ವ್ಯಕ್ತಿಗಳೆಂದರೆ ರಾಣಿ ಚೆನ್ನಮ್ಮ ಮತ್ತು ಸಂಗೊಳ್ಳಿ ರಾಯಣ್ಣ. ರಾಯಣ್ಣ ಅರಸನಾಗಿರಲಿಲ್ಲ ಕಿತ್ತೂರಿನ ಸಾಮಾನ್ಯ ಪ್ರಜೆಯಾಗಿ, ಸೈನಿಕನಾಗಿ ಬ್ರಿಟಿಷರ ವಿರುದ್ಧ ನಡೆದ ಎರಡು ಯುದ್ಧಗಳಲ್ಲಿ ಭಾಗವಹಿಸಿ, ಕಿತ್ತೂರು ಪತನದ ನಂತರ ಸೆರೆಮನೆ ಸೇರಿ ಬಿಡುಗಡೆಗೊಂಡು, ಸಂಗೊಳ್ಳಿಗೆ ಹಿಂದಿರುಗಿ ಕೃಷಿ ಹಾಗೂ ಮನೆತನದ ವೃತ್ತಿಯಾದ ವಾಲಿಕಾರಿಕೆಯನ್ನು ಮಾಡುತ್ತಿದ್ದನು.

ಕಿತ್ತೂರು ಸಂಸ್ಥಾನಕ್ಕೂ ರಾಯಣ್ಣನ ಮನೆತನಕ್ಕೂ ತುಂಬಾ ಅವಿನಾಭಾವ ಸಂಬಂಧವಿತ್ತು. ಇದನ್ನು ನೆನಪಿಸಿಕೊಂಡ ರಾಯಣ್ಣನ ಮನಸ್ಸಿನಲ್ಲಿ ರಾಜನಿಷ್ಠೆ, ಸ್ವಾಮಿಭಕ್ತಿ, ಸ್ವಾತಂತ್ರ್ಯ, ಸ್ವಾಭಿಮಾನ ಕಿತ್ತೂರು ಪರಕೀಯರ ಆಡಳಿತದಲ್ಲಿರುವುದನ್ನು ಹಾಗೂ ಬ್ರಿಟಿಷರು ಮಾಡುತ್ತಿದ್ದ ಶೋಷಣೆಯನ್ನು ಕಂಡು ಒಳಒಳಗೆ ಸಿಡಿಮಿಡಿಗೊಳ್ಳುತ್ತಿದ್ದನು ಅಷ್ಟೆ. ಇದರಿಂದಾಚೆ ಏನು ಮಾಡುವಂತಿರಲಿಲ್ಲ. ಏಕೆಂದರೆ ರಾಯಣ್ಣ ಒಬ್ಬ ಸಾಮಾನ್ಯ ಪ್ರಜೆಯಾಗಿದ್ದ. ಸಂಗೊಳ್ಳಿಯ ಕುಲಕರ್ಣಿ ಬಾಳಪ್ಪ ರಾಯಣ್ಣನನ್ನು ಉದ್ದೇಶ ಪೂರ್ವಕವಾಗಿ ಇಲ್ಲ ಸಲ್ಲದ ಕೆಲಸಗಳಿಗೆ ಕರೆಯುತ್ತಿದ್ದ. ಕಿತ್ತೂರು ಬ್ರಿಟಿಷರ ವಶವಾದ ಮೇಲೆ ಕಿತ್ತೂರಿನಲ್ಲಿ ಜಮೀನಿನ ಅಳತೆಯ ನೆಪದಿಂದ ಬಾಳಪ್ಪ ರಾಯಣ್ಣನನ್ನು ತನ್ನ ಹಿಡಿತದಲ್ಲಿಡಲು ಪ್ರಯತ್ನಿಸಿದ. ಆದರೆ ಸ್ವಾಭಿಮಾನಿಯಾದ ರಾಯಣ್ಣ ಕುಲಕರ್ಣಿಯ ಹಿಡಿತಕ್ಕೆ ಒಳಗಾಗಲಿಲ್ಲ. ರಾಯಣ್ಣನನ್ನು ಹೇಗಾದರೂ ಮಾಡಿ ತನ್ನ ಹಿಡಿತದಲ್ಲಿಡಲು ಪ್ರಯತ್ನಿಸಿ ವಿಫಲವಾದಾಗ ಕುಲಕರ್ಣಿಯು ರಾಯಣ್ಣನನ್ನು ಕರೆದು ವಾಲಿಕಾರಿಕೆ ಕೆಲಸದ ಮೇಲೆ ಸಂಪಗಾವಿಗೆ

ಕಳುಹಿಸಿದ. ಸಂಪಗಾವಿಗೆ ಹೋಗಿ ಲಕೋಟೆಯನ್ನು ಕೊಟ್ಟ ನಂತರ ನಡೆಯುವ ಘಟನೆಯು ರಾಯಣ್ಣನನ್ನು ಬೆಚ್ಚಿ ಬೀಳಿಸುತ್ತದೆ. ಕುಲಕರ್ಣಿಯು ರಾಯಣ್ಣನ ವಿರುದ್ಧ ಅಮಲ್ದಾರರಿಗೆ ರಾಯಣ್ಣನನ್ನು ಕೊಲ್ಲಲು ಬಂದಿದ್ದ ಎಂದು ಆರೋಪದ ಪತ್ರವನ್ನು ಕಳುಹಿಸಿದ್ದ. ಸಂಪಗಾವಿಯ ಅಧಿಕಾರಿ ರಾಯಣ್ಣನನ್ನು ಬಂಧನದಲ್ಲಿರಿಸಿದನು.

ರಾಯಣ್ಣ ಸಂಪಗಾವಿಗೆ ಹೋದ ನಂತರ ಸಂಗೊಳ್ಳಿಯಲ್ಲಿ ಕುಲಕರ್ಣಿ ಬಾಳಪ್ಪನು ರಾಯಣ್ಣನ ವಯಸ್ಸಾದ ತಾಯಿಯನ್ನು ಚಾವಡಿಗೆ ಕರೆಯಿಸಿ, ಕಂದಾಯದ ಹಣವನ್ನು ಈಗಿಂದಿಗಲೇ ಕೊಡಬೇಕೆಂದು ಕೇಳುತ್ತಾನೆ. ವಯಸ್ಸಾದ ಕೆಂಚವ್ವ ನನ್ನ ಮಗ ರಾಯ ಬಂದು ಕೊಡುತ್ತಾನೆ ಎಂದು ಹೇಳಿದಳು. ಅದಕ್ಕೆ ಕುಲಕರ್ಣಿ ಕೆಂಚವ್ವನ ಮಾತನ್ನು ಕೇಳದೆ, ಈಗಿಂದಿಗ ಕೊಡಬೇಕೆಂದು ಹೇಳುತ್ತಾನೆ. ರಾಯಣ್ಣನ ತಾಯಿ ಕೆಂಚವ್ವನ ಸೊಂಟದ ಮೇಲೆ ಬೀಸುವ ಕಲ್ಲನ್ನು ಹೇರಿ ಶಿಕ್ಷೆಗೆ ಗುರಿಪಡಿಸುತ್ತಾನೆ. ಇಂತಹ ಘಟನೆಗಳಿಂದ ರಾಯಣ್ಣ ಸಿಟ್ಟಿಗೆದ್ದು ಹೋರಾಟಕ್ಕೆ ಮುಂದಾಗುತ್ತಾನೆ. ಬ್ರಿಟಿಷರ ವಿರುದ್ಧ ರಾಯಣ್ಣ ಗೆರಿಲ್ಲಾ ಯುದ್ಧಗಳ ಮೂಲಕ ಕಾಡತೊಡಗುತ್ತಾನೆ. ರಾಯಣ್ಣನ ಹೋರಾಟಗಳಿಂದ ಹೊರಬರಲಾಗದ ಬ್ರಿಟಿಷರು, ರಾಯಣ್ಣನ್ನು ಹಿಡಿಯಲು ಕಿತ್ತೂರಿನವರನ್ನು ಬಳಸಿಕೊಂಡು ಮೋಸದ ಮೂಲಕ ಹಿಡಿದು ಗಲ್ಲಿಗೇರಿಸುತ್ತಾರೆ.

ಅ.ನ.ಕೃಷ್ಣರಾಯರು ಹೇಳುವಂತೆ "ಕಿತ್ತೂರಿನ ಪತನಕ್ಕೆ ಕಾರಣರಾದ ಸ್ವಾರ್ಥಿಗಳ ಶನಿ ಸಂತಾನವೇ ಇಂದು ಭಾರತದ ಸ್ವಾತಂತ್ರ್ಯದ ಆಸ್ತಿ ಭಾರವನ್ನು ಅಲುಗಾಡಿಸಲು ಯತ್ನಿಸುತ್ತಿವೆ"[೩] ಕಿತ್ತೂರು ಸಂಸ್ಥಾನ ಬ್ರಿಟಿಷರ ವಶವಾಗುವುದಕ್ಕೆ ಕಿತ್ತೂ ಸಂಸ್ಥಾನದ ಅಧಿಕಾರಿಗಳಾದ ಮಲ್ಲಪ್ಪಶೆಟ್ಟಿ ಮತ್ತು ವೆಂಕಟರಾಯರು ಬ್ರಿಟಿಷರ ಜೊತೆ ಕೈ ಜೋಡಿಸಿ, ಕಿತ್ತೂರಿನ ಪತನಕ್ಕೆ ಕಾರಣರಾದ ಇವರುಗಳ ಮೂಲಕ ಬ್ರಿಟಿಷರು ಮುಂದೆ ಭಾರತದಲ್ಲಿ ತಮ್ಮ ಸಾಮ್ರಾಜ್ಯವನ್ನು ಯಾವ ರೀತಿಯಲ್ಲಿ ವಿಸ್ತರಿಸಿದರು ಎಂಬುದನ್ನು ಅ. ನ. ಕೃ ರವರು ಈ ರೀತಿಯಲ್ಲಿ ಹೇಳಿದ್ದಾರೆ. ನಾಡಿನ ಸ್ವಾತಂತ್ರ್ಯಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿ ಇಟ್ಟವರಲ್ಲಿ ರಾಯಣ್ಣ ಒಬ್ಬ. ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ, ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸುವುದಕ್ಕಾಗಿ, ದೇಸಾಯಿಗಳ ಆಡಳಿತವನ್ನು ಮರಳಿ ಸ್ಥಾಪಿಸಲು ರಾಯಣ್ಣ ಬ್ರಿಟಿಷರ ವಿರುದ್ಧ ಹೋರಾಟ ಮಾಡಿ ನಮ್ಮವರಿಂದಲೇ ಅಂತ್ಯವಾದದ್ದು ದುರದೃಷ್ಟಕರವಾದ ಸಂಗತಿಯಾಗಿದೆ.

ಸಂಗೊಳ್ಳಿ ರಾಯಣ್ಣನ ಕುರಿತು, ಆತನ ಹೋರಾಟದ ಕುರಿತು, ಜೀವನ ಚರಿತ್ರೆಯ ಕುರಿತು ಜನಪದ ಸಾಹಿತ್ಯದ ತ್ರಿಪದಿ, ದುಂದುಮೆ, ಲಾವಣಿ, ಐತಿಹ್ಯಗಳ ಮೂಲಕ ಕತೆ ಕಟ್ಟಿ ಹಾಡಿ ಹೊಗಳಿದ್ದಾರೆ. ಇದರ ಜೊತೆಗೆ ಕಾದಂಬರಿಗಳು, ನಾಟಕಗಳು, ಕಾವ್ಯಗಳು ಸಹ ರಚನೆಗೊಂಡಿವೆ. ಇವುಗಳ ಜೊತೆಗೆ ಬ್ರಿಟಿಷ್ ಅಧಿಕಾರಿಗಳು ಬರೆದಿಟ್ಟಿರುವ ದಾಖಲೆಗಳು ಪತ್ರ-ವ್ಯವಹಾರಗಳು ಹಾಗೂ ವೈಯಕ್ತಿಕ ಬರಹಗಳ ಮೂಲಕ ರಾಯಣ್ಣನ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುತ್ತದೆ.

ಆದರೆ ಈ ಎಲ್ಲಾ ಆಕರಗಳಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ ಭಿನ್ನವಾದ ಅಂಶಗಳಿರುವುದು ಹಾಗೂ ಕೆಲವೊಂದು ಅಂಶಗಳ ಬಗ್ಗೆ ಖಚಿತವಾದ ಮಾಹಿತಿಗಳಿಲ್ಲದಿರುವುದು ಕಂಡುಬರುತ್ತದೆ. ರಾಯಣ್ಣನ ವಂಶದ ಬಗ್ಗೆ, ವಿವಾಹದ ಬಗ್ಗೆ ಇದುವರೆಗೂ ಖಚಿತವಾದ ಮಾಹಿತಿಗಳು ದೊರೆತಿಲ್ಲ. ಆದರೂ ಕೆಲವು ಕೃತಿಕಾರರು, ಸಂಶೋಧಕರು ರಾಯಣ್ಣನಿಗೆ ಸಂಬಂಧಿಸಿದಂತೆ ತಮ್ಮದೇ ಅಭಿಪ್ರಾಯಗಳನ್ನು ಹೇಳಿರುವುದು ನಾವು ಕಾಣಬಹುದು. ಪ್ರೊ. ಜ್ಯೋತಿ ಹೊಸೂರ ಅವರು "ಈವರೆಗಿನ ಹೆಚ್ಚಿನ ಕೃತಿಗಳಲ್ಲಿ ರಾಯಣ್ಣನ ಬಗೆಗೆ ರೋಚಕವಾಗಿ ಕೇವಲ ಅಭಿಮಾನ ಮತ್ತು ಬಗೆಬಗೆಯ ಹಿತಾಸಕ್ತಿಗಳಿಂದ ಚರಿತ್ರೆ ಬರೆಯಲಾಗಿದೆಯೇ ಹೊರೆತು ವಾಸ್ತವತೆ, ಐತಿಹಾಸಿಕತೆಗೆ ಹೆಚ್ಚಿನ ಗಮನ ಕೊಟ್ಟಂತಿಲ್ಲ"[೪] ಎಂದು ಹೇಳಿರುವುದನ್ನು ರಾಯಣ್ಣನ ಕುರಿತು ಕೃತಿ ರಚಿಸಿರುವ ಅನೇಕ ಲೇಖಕರು ರಾಯಣ್ಣನನ್ನು ಹೆಚ್ಚು ವೈಭವೀಕರಿಸಿ ಹಾಗೂ ಒಂದು ಜಾತಿಗೆ, ಒಂದು ಸಮುದಾಯಕ್ಕೆ ಸಂಕುಚಿತಗೊಳಿಸುತ್ತಿರುವುದು ವಾಸ್ತವವಾಗಿದೆಯೆಂದು ಹೇಳಬೇಕಾಗುತ್ತದೆ.

ರಾಯಣ್ಣನಿಗೆ ಸಂಬಂಧಿಸಿದಂತೆ ಇದುವರೆಗೂ ಬಂದಿರುವ ಕೃತಿಗಳಲ್ಲಿ ಒಂದಕ್ಕಿಂತ ಒಂದು ಭಿನ್ನವಾಗಿದ್ದು, ನಮ್ಮನ್ನು ದ್ವಂದ್ವದೆಡೆಗೆ ಕರೆದೊಯ್ಯುತ್ತವೆ. ಕುಟುಂಬದ ಸದಸ್ಯರ ಕುರಿತು, ವಿವಾಹ, ಸಹೋದರರ ಕುರಿತು ಈವರೆಗೆ ಬಂದಿರುವ ಕೃತಿಗಳಲ್ಲಿ ವ್ಯತ್ಯಾಸವಿರುವುದನ್ನು ಗಮನಿಸಬಹುದು. ರಾಯಣ್ಣನ ವಂಶಜರ ಕುರಿತು ಹಾಗೂ ವಿವಾಹದ ಕುರಿತು ಇತ್ತೀಚಿನ ದಿನಗಳಲ್ಲಿ ತುಂಬ ಚರ್ಚೆಯಾಗುತ್ತಿರುವುದನ್ನು ಸಹ ಗಮನಿಸಬಹುದು.

ನಿಂಗಣ್ಣ ಸಣ್ಣಕ್ಕಿ ಅವರು ತಮ್ಮ ಸಂಗೊಳ್ಳಿ ರಾಯಣ್ಣ ಪರಿವಾರ ಎಂಬ ಕೃತಿಯಲ್ಲಿ ಹೇಳುವಂತೆ, ಒಬ್ಬ ರಾಯಣ್ಣ ಗಲ್ಲಿಗೇರಿದರೇನಂತೆ ಇನ್ನು ಮುಂದೆ ಮನೆ-ಮನೆಗೂ ರಾಯಣ್ಣನಂತಹ ಗಂಡುಗಲಿಗಳು ಹುಟ್ಟುತ್ತಾರೆ ಎಂದು ವೀರವಾಣಿಯನ್ನು ಬಿತ್ತರಿಸಿದ್ದನು. ಭಾರತೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಉತ್ತರ ಕರ್ನಾಟಕದ ಜನತೆಗೆ ರಾಯಣ್ಣನೆ ಸ್ಫೂರ್ತಿಯಾಗಿದ್ದು, ಸಾಮೂಹಿಕವಾಗಿ ಹೋರಾಟದಲ್ಲಿ ಭಾಗವಹಿಸಿರುವುದನ್ನು ಕಾಣುತ್ತೇವೆ. ಭಾರತದಲ್ಲಿ ಬ್ರಿಟಿಷರ ವಿರುದ್ಧ ಹೋರಾಟಕ್ಕೆ ರಾಯಣ್ಣನ ಅಂತ್ಯದ ನಂತರದ ಕಾಲದಲ್ಲಿ ಭಗತ್‌ಸಿಂಗ್, ರಾಜಗುರು, ಮಂಗಲಪಾಂಡೆ ಮುಂತಾದವರ ಮೂಲಕ ಈ ಮಾತು ನಿಜವಾಗಿರುವುದನ್ನು ನಾವು ಕಾಣಬಹುದು.

ಸಂಗೊಳ್ಳಿ ರಾಯಣ್ಣನು ಒಬ್ಬ ಸಾಮಾನ್ಯ ಪ್ರಜೆಯಾಗಿ, ಸೈನಿಕನಾಗಿ, ವಾಲಿಕಾರಿಕನಾಗಿದ್ದು, ನಾಡ ರಕ್ಷಣೆ ಮಾಡುವುದು ಇದು ಕೇವಲ ರಾಜರ ಕೆಲಸವಲ್ಲ. ಜನತೆಯ ಕರ್ತವ್ಯವೂ ಕೂಡ ಹೌದು ಎಂದು ತೋರಿಸಿಕೊಟ್ಟವ. ಬ್ರಿಟಿಷರ ವಸಹಾತುಶಾಹಿಗೆ ಭಾರತದಲ್ಲಿ ಅಥವಾ ಕರ್ನಾಟಕದಲ್ಲಿ ಪ್ರತಿರೋಧ ವ್ಯಕ್ತಪಡಿಸಿದವರಲ್ಲಿ ಮೊದಲಿಗ ರಾಯಣ್ಣ. ಏಕೆಂದರೆ ರಾಜರುಗಳು ತಮ್ಮ ಅಧಿಕಾರವನ್ನು ಉಳಿಸಿಕೊಳ್ಳಲು ಹೋರಾಟ ಮಾಡಿದರೆ, ರಾಯಣ್ಣ ಕಿತ್ತೂರಿನ ಸಾಮಾನ್ಯ ಪ್ರಜೆಯಾಗಿ ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸಲು ಬ್ರಿಟಿಷರ ವಿರುದ್ಧ ಹೋರಾಟ ಮಾಡಿ ತಮ್ಮವರಿಂದ ಮೋಸದ ತಂತ್ರಕ್ಕೆ ಬಲಿಯಾಗಿ ಅಂತ್ಯವಾಗುತ್ತಾನೆ.

ಸಂಗೊಳ್ಳಿ ಕಿತ್ತೂರಿನಿಂದ ೧೪ ಕಿ.ಮೀ. ದೂರದಲ್ಲಿ ಮಲಪ್ರಭಾ ನದಿಯ ದಂಡೆಯ ಮೇಲಿದೆ. ಕೆಂಚವ್ವ ಮತ್ತು ಭರಮಣ್ಣರ ಮಗ ರಾಯಣ್ಣ. ಸಂಗೊಳ್ಳಿ ರಾಯಣ್ಣನ ಪರಿಚಯವನ್ನು ನಮ್ಮ ಲಾವಣಿಕಾರರು ಅರ್ಥಪೂರ್ಣವಾಗಿ ಗುರ್ತಿಸಿದ್ದಾರೆ.

"ಬೆಳಗಾಂವಿ ಜಿಲ್ಲಾ ಪೈಕಿ ಸಂಪಗಾಂವಿ ತಾಲೂಕಿನೊಳಗೆ
ಸಂಗವಳ್ಳಿ ಎಂಬ ಸಣ್ಣ ಹಳ್ಳಿ ಇತ್ತು ಹದ್ದಿನೊಳಗೆ
ತಾಯಿ ಕೆಂಚವ್ವನ ಹೊಟ್ಯಾಗ ಬೆಳೆದಾನೊ ರಾಯಣ್ಣಾಗ
ರೋಗವಣ್ಣವರ ರಾಯನೆಂದು ಹೆಸರು ಆದಾನೊ ದೇಶದ ಮ್ಯಾಗ
ಜಾತಿಯಿಂದ ರಾಯಣ್ಣ ತಾನು ಕುರುಬ ಆಗಿದ್ದನಾಗ
ಸಂಗವಳ್ಳಿಕೆ ವಾಲಿಕಾರಿಕೆ ಇತ್ತ ಅವರ ವಂಶಕ್ಕಾಗಿ"[೫]

ಈ ಲಾವಣಿಯು ರಾಯಣ್ಣನ ಕುರಿತು ಹಾಗೂ ಅವನ ಕುಂಟುಂಬದ ಕುರಿತು ಸ್ಪಷ್ಟವಾಗಿ ರಾಯಣ್ಣನ ಮನೆತನವು ವೀರ ಮನೆತನ, ವೀರಪರಂಪರೆಯ ಮನೆತನವಾಗಿತ್ತು. ರಾಯಣ್ಣನ ತಾತ ರಾಘಪ್ಪ, ತಂದೆ ಭರಮಪ್ಪನಂತೆ ರಾಯಣ್ಣನು ಸಹ ವೀರನಾಗಿದ್ದನು. ರಾಯಣ್ಣನ ತಂದೆ ಭರಮಪ್ಪ, ತಾಯಿ ಕೆಂಚವ್ವ ಇವರು ಜಾತಿಯಿಂದ ಕುರುಬರಾಗಿದ್ದು, ಇವರ ವಂಶಕ್ಕೆ ವಾಲೀಕಾರಿಕೆಯು ವಂಶಪರಂಪರೆಯಾಗಿ ಮುಂದುವರೆದುಕೊಂಡು ಬಂದಿತ್ತು. ತಾತ ರಾಘಪ್ಪನು, ಕಿತ್ತೂರು ಸಂಸ್ಥಾನದಲ್ಲಿ 'ಚಿಣಗಿ ಕೋವಾಡ' ಯುದ್ಧದಲ್ಲಿ ತೋರಿದ ಶೌರ್ಯವನ್ನು ಮೆಚ್ಚಿದ ಅಂದಿನ ಕಿತ್ತೂರು ದೊರೆಯಾದ ವೀರಪ್ಪ ದೇಸಾಯಿಯವರು ರಾಘಪ್ಪನಿಗೆ 'ಸಾವಿರ ಒಂಟಿ ಸರದಾರ' ಎಂಬ ಬಿರುದನ್ನು ನೀಡಿ ಗೌರವಿಸಿದ್ದರು. ರಾಘಪ್ಪನು ಹಳ್ಳಿಯ ಜನಗಳಿಗೆ ಬರುತ್ತಿದ್ದ ಜಡ್ಡುಗಳಿಗೆ, ರೋಗಗಳಿಗೆ ಔಷಧಿಯನ್ನು ಕೊಡುತ್ತಿದ್ದ. ಸಂಗೊಳ್ಳಿ ಭಾಗದ ಸುತ್ತ-ಮುತ್ತಲಿನ ಪ್ರದೇಶದವರೆಲ್ಲ ರಾಘಪ್ಪನಲ್ಲಿಗೆ ಔಷಧಿಗಾಗಿ ಬರುತ್ತಿದ್ದರು. ಹಾಗಾಗಿ ರಾಘಪ್ಪನು ಔಷಧಿ ಕೊಡುವುದರಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದ. ರಾಯಣ್ಣ ತಂದೆ ಭರಮಪ್ಪನಿಗೆ ಊರಿನ ಜನರು ರೋಗಣ್ಣವರ ಭರಮಪ್ಪ ಎಂದು ಕರೆಯುತ್ತಿದ್ದರು. ಈ ರೀತಿಯಿಂದ ಭರಮಪ್ಪನನ್ನು ಜನರು ಕರೆದುಕೊಂಡು ಬಂದಿದ್ದರಿಂದ ಇವರ ವಂಶಕ್ಕೆ ರೋಗಣ್ಣವರ ಭರಮಪ್ಪ, ರಾಯಣ್ಣ ಎಂದು ಕರೆದುಕೊಂಡು ಬರತೊಡಗಿದರು.

ರಾಘಪ್ಪನಂತೆ ಮಗನಾದ ಭರಮಪ್ಪನು ತಂದೆಯಂತೆ ವೀರ. ಧೈರ್ಯಶಾಲಿಯಾಗಿದ್ದ. ಒಮ್ಮೆ ಕಿತ್ತೂರಿನ ನಿಚ್ಚನಿಕೆ ಎಂಬ ಗ್ರಾಮದ ಉದ್ಯಾನವನದಲ್ಲಿ ಒಂದು ವ್ಯಾಘ್ರ ಬಂದು ಜನರಿಗೆ ತುಂಬ ಹಾನಿಯನ್ನುಂಟು ಮಾಡತೊಡಗಿತ್ತು. ಆ ವ್ಯಾಘ್ರದ ಹಾವಳಿಯಿಂದ ಜನರು ಭಯದಿಂದ ಜೀವನ ಸಾಗಿಸುತ್ತಿದ್ದರು. ಈ ವಿಷಯ ಅಂದಿನ ಕಿತ್ತೂರಿನ ದೊರೆ ಮಲ್ಲಸರ್ಜನಿಗೆ ತಿಳಿದು ಹುಲಿಯನ್ನು ಹೊಡೆದವರಿಗೆ ಬಹುಮಾನ ಕೊಡಲಾಗುವುದೆಂದು ಮಾಹಿತಿಯನ್ನು ತಿಳಿಸಿದನು. ಆದರೆ ಯಾರು

ಸಹ ಮುಂದೆ ಬರಲಿಲ್ಲ, ಇದರಿಂದ ಅಲ್ಲಿನ ಜನರು ಭಯದಿಂದ ಇರತೊಡಗಿದರು. ಈ ವಿಷಯ ಭರಮಪ್ಪನಿಗೆ ತಿಳಿದು ಹುಲಿಯನ್ನು ಬೇಟೆಯಾಡಲು ಹೊರಟನು. ಭರಮಪ್ಪನು ಹುಲಿಯನ್ನು ಹುಡುಕಿಕೊಂಡು ಉದ್ಯಾನವನದಲ್ಲಿ ತಿರುಗತೊಡಗಿದ. ಆಗ ಹುಲಿಯು ಇವನ ಕಡೆಗೆ ಗರ್ಜಿಸುತ್ತ ಬರತೊಡಗಿತು. ಧೈರ್ಯಶಾಲಿಯಾದ ಭರಮಪ್ಪನು ಹುಲಿಯ ಜೊತೆ ಬಹಳ ಸಮಯದವರೆಗೆ ಹೋರಾಟ ಮಾಡತೊಡಗಿದ. ಈ ವಿಷಯ ತಿಳಿದ ನಿಚ್ಚನಿಕೆ ಗ್ರಾಮದ ಜನರು ಉದ್ಯಾನದೊಳಗೆ ಬರತೊಡಗಿದರು. ದೂರದಿಂದ ಜನರು ಭರಮಪ್ಪನ ಸಾಹಸವನ್ನು ನೋಡ ತೋಡಗಿದರು. ಬಹಳ ಸಮಯ ಹುಲಿಯ ಜೊತೆಗೆ ಕಾದಾಡಿದ ಭರಮಪ್ಪ ತನ್ನ ಖಡ್ಗದಿಂದ ಹುಲಿಯನ್ನು ಕೊಂದನು. ಹುಲಿಯ ಜೊತೆ ಹೋರಾಟ ಮಾಡಿದ ಭರಮಪ್ಪನಿಗೆ ದೇಹದ ತುಂಬ ಸಣ್ಣ-ಪುಟ್ಟ ಗಾಯಗಳಾಗಿ ದೇಹವೆಲ್ಲಾ ರಕ್ತಮಯವಾಗಿತ್ತು. ಈ ವಿಷಯ ಕಿತ್ತೂರಿನ ಅರಸ ಮಲ್ಲಸರ್ಜನಿಗೆ ಹಾಗೂ ಕಿತ್ತೂರಿನ ಜನತೆಗೆ ತಿಳಿದ ನಂತರ, ಜನರು ತಂಡ-ತಂಡವಾಗಿ ಬರತೊಡಗಿದರು. ಕಿತ್ತೂರಿನ ದೊರೆ ಭರಮಪ್ಪನನ್ನು ಕರೆಯಿಸಿ ಸನ್ಮಾನ ಮಾಡಿ, ಭರಮಪ್ಪ ತೋರಿದ ಸಾಹಸಕ್ಕಾಗಿ ೨೪ ಎಕರೆ ಜಮೀನನ್ನು ನೀಡಿದನು. ಈ ಜಮೀನಿಗೆ 'ರಕ್ತ ಮಾನ್ಯದ' ಹೊಲ ಎಂದು ಕರೆಯುತ್ತಿದ್ದರು. ಅಂದಿನ ಕಾಲದಲ್ಲಿ ವೀರತನ ಪ್ರದರ್ಶಿಸಿದವರಿಗೆ ಯುದ್ಧಗಳಲ್ಲಿ ಹಾಗೂ ಇತರೆ ಸಂದರ್ಭಗಳಲ್ಲಿ ಮಾಡಿದ ಸಹಾಸಕ್ಕಾಗಿ ನೀಡುತ್ತಿದ್ದ ಕೊಡುಗೆ ರಕ್ತಮಾನ್ಯ ಮಾನ್ಯದ ಆಸ್ತಿ.

ಭರಮಪ್ಪನ ಸಾಹಸ ಇಡೀ ಕಿತ್ತೂರಿಗೆ ತಿಳಿದು, ಜನತೆಯು ಭರಮಪ್ಪನನ್ನು ಜನರು ಕೊಂಡಾಡಿದರು. ಇಂತಹ ಮನೆತನದಲ್ಲಿ ಭರಮಪ್ಪ-ಕೆಂಚವ್ವನ ಮಗನಾಗಿ ರಾಯಣ್ಣನು ಜನಿಸಿದನು. ಇವರು ಜಾತಿಯಿಂದ ಕುರುಬರಾಗಿದ್ದು, ಇವರ ಮನೆತನಕ್ಕೆ ವಾಲೀಕಾರಿಕೆಯು ವಂಶಪರಂಪರೆಯಾಗಿ ಮುಂದುವರೆದುಕೊಂಡು ಬಂದಿತ್ತು. ಸಂಗೊಳ್ಳಿಯಿಂದ ತಾಲೂಕು ಕೇಂದ್ರವಾದ ಸಂಪಗಾಂವಿಗೆ, ಸಂಪಗಾಂವಿಯಿಂದ ಸಂಗೊಳ್ಳಿಗೆ ಪತ್ರಗಳನ್ನು ರವಾನಿಸುವ ಕೆಲಸಗಳನ್ನು ಮಾಡುತ್ತಿದ್ದರು ಇದಕ್ಕಾಗಿ ಹಣದ ಬದಲಾಗಿ ಇಂತಿಷ್ಟು ಜಮೀನನ್ನು ನೀಡುತ್ತಿದ್ದರು.

ರಾಯಣ್ಣನ ತಂದೆ ವಾಲೀಕಾರಿಕೆಯ ಜೊತೆಗೆ ಕೃಷಿ ಹಾಗೂ ಕುರಿ ಸಾಕಾಣಿಕೆಯನ್ನು ಮಾಡುತ್ತಿದ್ದನು. ರಾಯಣ್ಣನಿಗೆ ಅಣ್ಣನಿರಲಿಲ್ಲ. ಆದರೆ ಚರಿತ್ರೆಯನ್ನು ಬರೆಯುವರು ಕಾದಂಬರಿ, ನಾಟಕ ಇತರೆ ಸಾಹಿತ್ಯಗಳಲ್ಲಿ ರಾಯಣ್ಣನಿಗೆ ಸ್ವಂತ ಅಣ್ಣನಿದ್ದನೆಂದು ಹೇಳಿದ್ದಾರೆ. ಆದರೆ ಭರಮಪ್ಪನ ತಮ್ಮನ ಮಗನಾದ ಸಿದ್ದಣ್ಣನನ್ನು ರಾಯಣ್ಣನ ಅಣ್ಣನೆಂದು ಚರಿತ್ರೆಯನ್ನು ಬರೆಯಲಾಗಿದೆ. ಸಿದ್ದಣ್ಣ ರಾಯಣ್ಣನಿಗಿಂತ ವಯಸ್ಸಿನಲ್ಲಿ ದೊಡ್ಡವನಿದ್ದ ಕಾರಣ ಸಿದ್ದಣ್ಣನನ್ನು ಅಣ್ಣನೆಂದು ಕರೆಯುತ್ತಿದ್ದರು. ಆಗಿನ ಕಾಲದಲ್ಲಿ ಅವಿಭಕ್ತ ಕುಟುಂಬಗಳಿದ್ದವು. ಆದ್ದರಿಂದ ಭರಮಪ್ಪನ ಅಣ್ಣ ತಮ್ಮಂದಿರೆಲ್ಲರು ಹಾಗೂ ಹೆಂಡತಿ ಮಕ್ಕಳು ಜೊತೆಗಿದ್ದಿದ್ದರಿಂದ ವಯಸ್ಸಿನಲ್ಲಿ ಹಿರಿಯನಿದ್ದಿದ್ದರಿಂದ ಅಣ್ಣನೆಂದು ಹೇಳಿರಬಹುದು ಜೊತೆಗೆ ರಾಯಣ್ಣನ ಅಣ್ಣನ ಹೆಸರು ಸಹ ನಿರ್ದಿಷ್ಟವಾಗಿಲ್ಲ. ಸಿದ್ದಣ್ಣ, ಭೀಮಪ್ಪನೆಂದು

ಆರಂಭದ ಚರಿತ್ರೆಕಾರರು ಗುರ್ತಿಸಿದ್ದಾರೆ. ಆದರೆ ರಾಯಣ್ಣನ ಚರಿತ್ರೆಯನ್ನು ಕುರಿತು ಬಂದಿರುವ ಮೊದಲ ಕೃತಿಗಳಾದ ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ, ಸಂಗೊಳ್ಳಿ ರಾಯಣ್ಣನ ಪರಿವಾರ, ಕೃತಿಗಳಲ್ಲಿ ನಿಂಗಣ್ಣ ಸಣ್ಣಕ್ಕಿಯವರು ರಾಯಣ್ಣನಿಗೆ ಭೀಮಪ್ಪನೆಂಬ ಅಣ್ಣನಿದ್ದನೆಂದು ಹೇಳಿದ್ದಾರೆ. ಜೊತೆಗೆ ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ ಎಂಬ ಕೃತಿಯಲ್ಲಿ ಭೀಮಪ್ಪ ಎನ್ನುವವನು ಚಿಕ್ಕ ವಯಸ್ಸಿನಲ್ಲಿಯೇ ಮರಣ ಹೊಂದಿದನೆಂದು, ನಿಂಗಣ್ಣ ಸಣ್ಣಕ್ಕಿಯವರು ಹೇಳಿ ನಂತರ ಬಂದಂತಹ 'ಸಂಗೊಳ್ಳಿ ರಾಯಣ್ಣನ ಪರಿವಾರ' ಎಂಬ ಕೃತಿಯಲ್ಲಿ ಭೀಮಪ್ಪನ ವಂಶ ಮುಂದುವರೆದಿರುವುದನ್ನು ರಾಯಣ್ಣನ ವಂಶಾವಳಿ ಕೊಟ್ಟಿರುವುದರಲ್ಲಿ ಸೂಚಿಸಿದ್ದಾರೆ. ಇಂತಹ ಮಾಹಿತಿಗಳಿಂದ ಓದುಗರಲ್ಲಿ ಹಾಗೂ ಜನಸಾಮಾನ್ಯರಲ್ಲಿ ಗೊಂದಲಗಳನ್ನು ಸೃಷ್ಟಿಸಿದ್ದಾರೆ. ಬಸವರಾಜ ಕಟ್ಟೀಮನಿಯವರ ಸಂಗೊಳ್ಳಿ 'ರಾಯನಾಯಕ' ಎಂಬ ಕಾದಂಬರಿಯಲ್ಲಿ ರಾಯಣ್ಣನ ಅಣ್ಣ ಸಿದ್ದಣ್ಣ, ಮಗ ಹನುಮಂತ ಎಂದು ಗುರ್ತಿಸಿದ್ದಾರೆ. ಭರಮಪ್ಪನ ತಮ್ಮನ ಮಗನಾದ ಸಿದ್ದಣ್ಣನನ್ನು ಕಾದಂಬರಿಕಾರರು ರಾಯಣ್ಣನ ಅಣ್ಣನೆಂದು ಚಿತ್ರಿಸಿದ್ದಾರೆ. ಆದರೆ ರಾಯಣ್ಣನ ಸಹೋದರನ ಬಗ್ಗೆ ಯಾವುದೇ ಖಚಿತ ಆಧಾರಗಳು ದೊರೆಯದೆ, ಚರಿತ್ರೆಕಾರರು ಊಹೆಯನ್ನು ಮಾಡಿ ಬರೆದಿರಬಹುದೆಂದು ಹೇಳಬಹುದು.

ಪ್ರತಿದಿನ ರಾಯಣ್ಣ ಸಂಗೊಳ್ಳಿಯಲ್ಲಿದ್ದ ಗರಡಿ ಮನೆಗೆ ಹೋಗುತ್ತಿದ್ದ. ಗರಡಿ ಮನೆಯು ಸೈನಿಕರನ್ನು ತಯಾರು ಮಾಡುವ ಕೇಂದ್ರವಾಗಿತ್ತು. ರಾಜರುಗಳು ಆಡಳಿತದಲ್ಲಿ ಪ್ರತಿಯೊಂದು ಹಳ್ಳಿಗಳಲ್ಲಿ ಸೈನಿಕರನ್ನು ತಯಾರು ಮಾಡುವ ಕೇಂದ್ರಗಳು ಇದ್ದವು. ರಾಯಣ್ಣನು ಗರಡಿ ಮನೆಯಲ್ಲಿ ಅಂಗಸಾಧನೆ, ಕುಸ್ತಿ, ಕತ್ತಿವರಸೆ ಮುಂತಾದ ಯುದ್ಧಾಭ್ಯಾಸಗಳನ್ನು ಮಾಡುತ್ತಿದ್ದನು. ರಾಯಣ್ಣನು ಕಟ್ಟು ಮಸ್ತದ ದೇಹದಿಂದ ಕೂಡಿದ ಎಣ್ಣೆಗೆಂಪು ಬಣ್ಣದ ಶರೀರ ಕತ್ತಿವರಸೆಯಲ್ಲಿ ಹಾಗೂ ಓಡುವುದರಲ್ಲಿ ಬಹಳ ನೈಪುಣ್ಯತೆಯನ್ನು ಹೊಂದಿದ್ದ. ರಾಯಣ್ಣನ ಸ್ನೇಹಿತರಾದ ಬಿಚ್ಚುಗತ್ತಿ ಚನ್ನಬಸವ ಹಾಗೂ ವಡ್ಡರ ಯಲ್ಲಣ್ಣ ರಾಯಣ್ಣನ ಸ್ನೇಹಿತರಾಗಿದ್ದರು. ಬಿಚ್ಚುಗತ್ತಿ ಚೆನ್ನಬಸಣ್ಣ ಕತ್ತಿವರೆಸೆಯಲ್ಲಿ ನೈಪುಣ್ಯತೆಯನ್ನು ಹೊಂದಿದ್ದರೆ, ವಡ್ಡರ ಯಲ್ಲಣ್ಣ ಗುರಿ ಹೊಡೆಯುವುದರಲ್ಲಿ ನೈಪುಣ್ಯತೆ ಹಾಗೂ ರಾಯಣ್ಣ ಓಡುವುದರಲ್ಲಿ ಮೊದಲಿಗ. ಈ ಮೂರು ಜನರು ಒಮ್ಮೆ ತಮ್ಮ ಸಾಹಸವನ್ನು ಅಥವಾ ತಾವು ಕಲಿತಿರುವ ಯುದ್ಧ ವಿದ್ಯೆಯನ್ನು ಕಿತ್ತೂರಿನ ಅಧಿಕಾರಿಗಳಿಗೆ ತೋರಿಸಲೆಂದು ಕಿತ್ತೂರಿಗೆ ಹೋದರು. ತಮ್ಮ ತಮ್ಮ ಸಾಹಸಗಳನ್ನು ಪ್ರದರ್ಶಿಸಿದರು. ಇವರ ಸಾಹಸವನ್ನು ಅಥವಾ ಯುದ್ಧ ಕಲೆಗಳನ್ನು ನೋಡಿದ ಅಧಿಕಾರಿಗಳು ಇವರನ್ನು ಕಿತ್ತೂರು ಸೈನ್ಯದಲ್ಲಿ ಸೇರಿಸಿಕೊಂಡರು. ರಾಯಣ್ಣನು ಸಂಗೊಳ್ಳಿಯ ಭರಮಪ್ಪನ ಮಗನೆಂದು ತಿಳಿದಾಗ ಬಹಳ ಸಂತೋಷದಿಂದ ಆಧರಿಸಿ ಕಿತ್ತೂರಿನಿಂದ ಕಳುಹಿಸಿದರು. ರಾಯಣ್ಣ ಹಾಗೂ ಅವನ ಸ್ನೇಹಿತರು ಕಿತ್ತೂರಿನಿಂದ ತಮ್ಮ ಊರುಗಳಿಗೆ ಹೋದಾಗ ಜನರು ತುಂಬ ಪ್ರೀತಿಯಿಂದ ಸ್ವಾಗತಿಸಿದರು. ರಾಯಣ್ಣನ ತಾಯಿ ಮಗ ಕಿತ್ತೂರಿನ ಸೈನ್ಯದಲ್ಲಿ ಸೇರಿರುವುದನ್ನು ತಿಳಿದು ಬಹಳ ಸಂತೋಷದಿಂದ

ರಾಯಣ್ಣನನ್ನು ಮನೆಗೆ ಕರೆದುಕೊಂಡು ಹೋಗಿ, ಸಿಹಿ ಊಟದ ಜೊತೆಗೆ ಸಂಭ್ರಮವನ್ನು ಆಚರಿಸಿದಳು.

ಭಾರತದಾದ್ಯಂತ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸುತ್ತಿದ್ದ ಬ್ರಿಟಿಷರ ಕಣ್ಣು ಕಿತ್ತೂರಿನ ಮೇಲೆ ತಿರುಗಿತು. ಕಿತ್ತೂರು ಸಂಸ್ಥಾನ ಹಾಗೂ ಪ್ರದೇಶಗಳು ಸಂಪತ್ತಿನಿಂದ ಕೂಡಿದ ಪ್ರದೇಶವಾಗಿತ್ತು. ಕಿತ್ತೂರಿನ ವಾರ್ಷಿಕ ವರಮಾನ ೫ ಲಕ್ಷರೂಪಾಯಿಗಳಷ್ಟಿತ್ತು. ಬ್ರಿಟಿಷರಿಗೆ ಕಿತ್ತೂರನ್ನು ವಶಪಡಿಸಿಕೊಳ್ಳುವುದಕ್ಕೆ ಕಾರಣಬೇಕಾಗಿತ್ತು. ಆ ಕಾರಣಕ್ಕಾಗಿಯೇ ಕಾಯತೊಡಗಿದರು. ಮಲ್ಲಸರ್ಜನ ಮರಣದ ನಂತರ ಅಧಿಕಾರಕ್ಕೆ ಬಂದ ಶಿವಲಿಂಗರುದ್ರಸರ್ಜನು ಮರಾಠರನ್ನು ಹತ್ತಿಕ್ಕಲು ಬ್ರಿಟಿಷರಿಗೆ ಸಹಾಯ ಮಾಡಿದನು.

ಮರಾಠರಿಗೆ ನೀಡುತ್ತಿದ್ದ ವಾರ್ಷಿಕ ಹಣವನ್ನು ಬ್ರಿಟಿಷರಿಗೆ ಕೊಟ್ಟು ಸಂಸ್ಥಾನವನ್ನು ಮುಂದುವರೆಸಿಕೊಂಡು ಹೋಗಲು ೧೮೧೮ ರಲ್ಲಿ ಥಾಮಸ್ ಮನ್ರೋ ಹಾಗೂ ಶಿವಲಿಂಗರುದ್ರ ಸರ್ಜರ ನಡುವೆ ಒಂದು ಒಪ್ಪಂದವಾಯಿತು. "ವಂಶಪಾರಂಪರ್ಯವಾಗಿ ಈ ಸಂಸ್ಥಾನವನ್ನು ನಿಮಗೆ ಕೊಡಲಾಗಿದೆ. ಇದನ್ನು ನಿಮ್ಮ ಮಕ್ಕಳು ಮತ್ತು ಅವರ ಮಕ್ಕಳು ಅನುಭವಿಸುತ್ತಾ ಹೋಗಬೇಕು. ಇದಕ್ಕಾಗಿ ೧,೭೦,೦೦೦ ರೂಗಳ ವಾರ್ಷಿಕ ಕಾಣಿಕೆಯನ್ನು ಪಡೆಯಲಾಗುವುದು"[೬] ಎಂಬ ಒಪ್ಪಂದವನ್ನು ಮಾಡಿಕೊಳ್ಳುತ್ತಾರೆ. ೧೮೨೪ರಲ್ಲಿ ಶಿವಲಿಂಗರುದ್ರಸರ್ಜನು ಅನಾರೋಗ್ಯದ ಕಾರಣದಿಂದ ಮರಣ ಹೊಂದುತ್ತಾನೆ. ಇವನಿಗೆ ಸಂತಾನವಿರುವುದಿಲ್ಲ. ಹಾಗೂ ಮರಣ ಹೊಂದುವುದಕ್ಕಿಂತ ಮೊದಲು ಮಾಸ್ತಮರಡಿಯ ಶಿವಲಿಂಗಪ್ಪ ಎಂಬ ಬಾಲಕನನ್ನು ದತ್ತು ತೆಗೆದುಕೊಂಡು ಅಧಿಕಾರಕ್ಕೆ ಕೂರಿಸುತ್ತಾರೆ.

ಶಿವಲಿಂಗಪ್ಪ ಚಿಕ್ಕ ವಯಸ್ಸಿನವನಾಗಿದ್ದ ಕಾರಣದಿಂದ ರಾಣಿ ಚೆನ್ನಮ್ಮ ಅಧಿಕಾರವನ್ನು ಮುಂದುವರೆಸಿಕೊಂಡು ಹೋಗುತ್ತಾಳೆ. ಈ ನೆಪದಿಂದ ಬ್ರಿಟಿಷರು ಕಿತ್ತೂರನ್ನು ವಶಪಡಿಸಿಕೊಳ್ಳಬೇಕೆಂದು ಮುಂದಾಗುತ್ತಾರೆ. ಈ ವಿಷಯ ರಾಣಿ ಚೆನ್ನಮ್ಮಳಿಗೆ ತಿಳಿದು ಯುದ್ಧಕ್ಕೆ ಸಿದ್ಧಳಾಗುತ್ತಾಳೆ. ೧೮೨೪ ಸೆಪ್ಟಂಬರ್ ೨೪ರಂದು ಥ್ಯಾಕರೆಯ ನೇತೃತ್ವದಲ್ಲಿ ನಡೆದ ಬ್ರಿಟಿಷ್ ಸೈನ್ಯ ಕಿತ್ತೂರಿಗೆ ಬರುತ್ತದೆ. ಯುದ್ಧದಲ್ಲಿ ರಾಣಿ ಚೆನ್ನಮ್ಮ ಯುದ್ಧ ಮಾಡುತ್ತಾಳೆ. ಹಾಗೂ ಈ ಯುದ್ಧದಲ್ಲಿ ಕಿತ್ತೂರಿಗೆ ತಾತ್ಕಾಲಿಕ ಜಯವಾಗುತ್ತದೆ. ಆದರೆ ಬ್ರಿಟಿಷರಿಗೆ ಅಪಮಾನವಾದಂತಾಗಿ ಮತ್ತೆ ಕಿತ್ತೂರಿನ ಕೆಲವರನ್ನು ಒಳಸಂಚಿಗೆ ಬಳಸಿಕೊಂಡು, ಕಿತ್ತೂರಿನ ಮೇಲೆ ಅಕ್ರಮಣ ಮಾಡಿ ಮೋಸದಿಂದ ಕಿತ್ತೂರನ್ನು ವಶಪಡಿಸಿಕೊಳ್ಳುತ್ತಾರೆ. ಈ ಕಿತ್ತೂರಿನ ಎರಡು ಯುದ್ಧಗಳಲ್ಲಿ ರಾಯಣ್ಣ ಭಾಗವಹಿಸುತ್ತಾನೆ. ಕಿತ್ತೂರು ಬ್ರಿಟಿಷರ ವಶವಾದ ಮೇಲೆ ರಾಜ ಪರಿವಾರದವರನ್ನು ಹಾಗೂ ಅನೇಕ ಸೈನಿಕರನ್ನು ಸೆರೆಮನೆಗೆ ಹಾಕುತ್ತಾರೆ. ಅದರಲ್ಲಿ ರಾಯಣ್ಣನು ಒಬ್ಬ. ಕೆಲವು ದಿನಗಳ ನಂತರ ಬ್ರಿಟಿಷರು ಅನೇಕ ಸೈನಿಕರನ್ನು ಸೆರೆಮನೆಯಿಂದ ಬಿಡುಗಡೆಗೊಳಿಸಿದರು. ಹೀಗೆ ರಾಯಣ್ಣ ಬಿಡುಗಡೆಗೊಂಡು ಸಂಗೊಳ್ಳಿಗೆ ಹಿಂತಿರುಗಿ ಕೃಷಿ ಹಾಗೂ ವಾಲೀಕಾರಿಕೆ ವೃತ್ತಿಯನ್ನು ಮಾಡುತ್ತಾನೆ.

"ಕಿತ್ತೂರು ಸ್ವಾತಂತ್ರ್ಯ ಸಂಗ್ರಾಮೇತಿಹಾಸದಲ್ಲಿ ಚೆನ್ನಮ್ಮ ರಾಣಿಯ ಪ್ರಯತ್ನ ಮೊದಲ ಘಟ್ಟ, ಸಂಗೊಳ್ಳಿ ರಾಯಣ್ಣ ಪ್ರಯತ್ನ ಎರಡನೆಯ ಘಟ್ಟ"[೭] ಕಿತ್ತೂರು ಬ್ರಿಟಿಷರ ವಶವಾದ ನಂತರ, ಸಂಗೊಳ್ಳಿ ರಾಯಣ್ಣ ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸಲು ಹಾಗೂ ಬ್ರಿಟಿಷರನ್ನು ಹೊರಹಾಕಲು ಹೋರಾಟ ಮಾಡುತ್ತಾನೆ. ಸೆರೆಮನೆಯಿಂದ ಬಿಡುಗಡೆಹೊಂದಿ ಸಂಗೊಳ್ಳಿಗೆ ಬಂದ ನಂತರ ಆಡಳಿತದಲ್ಲಾದ ಬದಲಾವಣೆ, ಕಿತ್ತೂರು ಸಂಸ್ಥಾನದ ನೆನಪು, ರಾಣಿ ಚೆನ್ನಮ್ಮಳನ್ನು ಬಂಧನದಿಂದ ಮುಕ್ತಗೊಳಿಸಿ ಮತ್ತೆ ಅಧಿಕಾರಕ್ಕೆ ತರಬೇಕೆಂದು ಮನಸ್ಸಿನಲ್ಲಿ ಅಂದುಕೊಂಡಿದ್ದನು. ಸ್ವಾತಂತ್ರ್ಯ, ಸ್ವಾಭಿಮಾನ, ನಾಡಪ್ರೇಮಿಯಾದ ಸಂಗೊಳ್ಳಿ ರಾಯಣ್ಣ ಹೋರಾಟಕ್ಕೆ ಸಿದ್ಧತೆಗಳನ್ನು ಮಾಡಿಕೊಳ್ಳತೊಡಗಿದ.

ಸಂಗೊಳ್ಳಿ ರಾಯಣ್ಣನ ಗೆಳೆಯರಾದ ಬಿಚ್ಚುಗತ್ತಿಯ ಚನ್ನಬಸವ ಹಾಗೂ ವಡ್ಡರ ಯಲ್ಲಣ್ಣ ಇವರ ಮುಂದೆ ಹೋರಾಟ ಮಾಡಬೇಕೆಂಬುದನ್ನು ಹೇಳಿದಾಗ ವಾಲಿಕಾರಿಕೆಯ ಜೊತೆ-ಜೊತೆಗೆ ಹೋರಾಟದ ಸಿದ್ಧತೆಗಳನ್ನು ಮಾಡಿಕೊಳ್ಳಬೇಕೆಂದು ಹೇಳಿದರು. ಸಂಗೊಳ್ಳಿ ರಾಯಣ್ಣ ವಾಲೀಕಾರಿಕೆಯನ್ನು ಮಾಡಲು ಮನಸ್ಸಿಲ್ಲದಿದ್ದರೂ ಸಹ ಗೆಳೆಯರು ಸೂಚಿಸಿದ ಸಲಹೆಗಳ ಮೇರೆಗೆ ಒಪ್ಪಿಕೊಂಡು ವಾಲೀಕಾರಿಕೆಯನ್ನು ಮುಂದುವರೆಸುತ್ತಾನೆ. ಇದರ ಜೊತೆಗೆ ಸಂಗೊಳ್ಳಿಯ ಯುವಕರನ್ನು ಒಂದೆಡೆ ಗರಡಿ ಮನೆಯಲ್ಲಿ ಯುದ್ಧಾಭ್ಯಾಸ ಹಾಗೂ ಕಿತ್ತೂರು ದಾಸ್ಯದಲ್ಲಿರುವುದನ್ನು ಮತ್ತು ಕಿತ್ತೂರನ್ನು ಬ್ರಿಟಿಷರಿಂದ ಸ್ವಾತಂತ್ರ್ಯಗೊಳಿಸಬೇಕೆಂದು ಜನರಿಗೆ ತಿಳಿಸತೊಡಗುತ್ತಾನೆ. ಹೀಗೆ ಸಂಗೊಳ್ಳಿ ರಾಯಣ್ಣನು ಜನತೆಯಲ್ಲಿ ದೇಶ ಪ್ರೇಮವನ್ನು ಹಾಗೂ ಸಂಘಟನೆಯನ್ನು ಮಾಡತೊಡಗುತ್ತಾನೆ. ಹೋರಾಟಕ್ಕೆ ಬೇಕಾದ ಶಸ್ತ್ರಸ್ತ್ರಗಳನ್ನು ಗೋಕಾಕ ಬಳಿಯ ಉದಗಟ್ಟಿಯ ರೈತ ಬಸವಣ್ಣನ ಮನೆಯಲ್ಲಿ ಸಂಗ್ರಹ ಮಾಡತೊಡಗುತ್ತಾನೆ.

ರಾಯಣ್ಣ ಹೋರಾಟದ ಸಿದ್ಧತೆಗಳು ನಡೆಯುತ್ತಿರುವುದನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಸಂಗೊಳ್ಳಿಯ ಕುಲಕರ್ಣಿ, ರಾಯಣ್ಣನಿಗೆ ಕೆಲಸಗಳನ್ನು ಹೆಚ್ಚಾಗಿ ಹೇಳತೊಡಗಿದ. ಬ್ರಿಟಿಷರ ಆಡಳಿತ ಬಂದ ನಂತರ ಗ್ರಾಮಗಳಲ್ಲಿ ಇವರೆ ರಾಜರಂತೆ ನಡೆದುಕೊಳ್ಳತೊಡಗಿದರು. ಕುಲಕರ್ಣಿಯು ರಾಯಣ್ಣನ್ನು ಕಂಡರೆ ಸಿಡಿಮಿಡಿಗೊಳ್ಳುತ್ತಿದ್ದ. ರಾಯಣ್ಣನನ್ನು ತನ್ನ ಹಿಡಿತದಲ್ಲಿಡಲು ಪ್ರಯತ್ನಿಸುತ್ತಿದ್ದ. ಆದರೆ ಸ್ವಾಭಿಮಾನಿಯಾದ ರಾಯಣ್ಣ ಆತನಿಗೆ ವಿರುದ್ಧವಾದ ಕೆಲಸಗಳನ್ನು ಮಾಡುತ್ತಿದ್ದ.

ಬ್ರಿಟಿಷರು ಕಿತ್ತೂರನ್ನು ವಶಪಡಿಸಿಕೊಂಡ ನಂತರ ತಮ್ಮ ನೀತಿಗಳನ್ನು ಕಿತ್ತೂರಿನಲ್ಲಿ ಜಾರಿಗೆ ತಂದರು. ಅಂತವುಗಳಲ್ಲಿ ಜಮೀನಿನ ಅಳತೆಯು ಒಂದು. ಕುಲಕರ್ಣಿಗಿಂತ ರಾಯಣ್ಣನಿಗೆ ಆಸ್ತಿ ಹೆಚ್ಚಾಗಿದ್ದರಿಂದ ಕುಲಕರ್ಣಿಗೆ ರಾಯಣ್ಣನ ಮೇಲೆ ಅಸೂಯೆ ಪಡುತ್ತಿದ್ದ. ಜಮೀನಿನ ಅಳತೆಯ ನಂತರ ಅಳತೆಗಿಂತ ಹೆಚ್ಚಾಗಿ ಇರುವುದಕ್ಕೆ ೩೨ ರೂಪಾಯಿಗಳನ್ನು ಕೊಡಬೇಕೆಂದು ಹೇಳುತ್ತಾನೆ. ಆಗ ರಾಯಣ್ಣ ನಾವು ಇದುವರೆಗೂ ಕಂದಾಯವನ್ನು ಕೊಟ್ಟಿಲ್ಲ, ಈಗಲೂ ಕೊಡುವುದಿಲ್ಲವೆಂದು ಹೇಳುತ್ತಾನೆ.

ಸಂಗೊಳ್ಳಿ ರಾಯಣ್ಣನ ಹೋರಾಟಕ್ಕೆ ಮುಖ್ಯವಾದ ಕಾರಣವೆಂದರೆ, ಕುಲಕರ್ಣಿ ಬಾಳಪ್ಪನು ಮಲಪ್ರಭಾ ನದಿಯಲ್ಲಿ ಸ್ನಾನ ಮಾಡಿ ತನ್ನ ಬಟ್ಟೆಗಳನ್ನು ತೊಳೆದುಕೊಡಲು ರಾಯಣ್ಣನಿಗೆ ಹೇಳುತ್ತಾನೆ. ರಾಯಣ್ಣನ ಸಿಟ್ಟು, ಸ್ವಾಭಿಮಾನವನ್ನು ನಮ್ಮ ಆತ್ಮಾಭಿಮಾನಕ್ಕೆ ದಕ್ಕೆಯಾಗುವಂತಹ ಯಾವ ಕೆಲಸವನ್ನು ನಾವು ಮಾಡುವುದಿಲ್ಲ ಎಂದು ಹೇಳುತ್ತಾನೆ. ಈ ಘಟನೆಯ ನಂತರ ಕುಲಕರ್ಣಿಯು ರಾಯಣ್ಣನನ್ನು ವಾಲೀಕಾರಿಕೆ ಕೆಲಸದ ಮೇಲೆ ಲಕೋಟೆಯನ್ನು ಕೊಟ್ಟು ಕಳುಹಿಸುತ್ತಾನೆ. ಸಂಪಗಾವಿಗೆ ತೆಗೆದುಕೊಂಡು ಹೋಗಿ ಕೊಟ್ಟ ನಂತರ ರಾಯಣ್ಣನಿಗೆ ಗೊತ್ತಾಗುತ್ತದೆ ನಾ ಮೋಸ ಹೋದೆ ಎಂದು. ಕಪಟಿಯಾದ ಬಾಳಪ್ಪನು ರಾಯಣ್ಣ ನನ್ನನ್ನು ಕೊಲೆ ಮಾಡಲು ಬಂದಿದ್ದನೆಂದು ಬರೆದು ಸಂಪಗಾವಿಯ ಸೆರೆಮನೆಗೆ ಹಾಕಿಸುತ್ತಾನೆ. ರಾಯಣ್ಣನನ್ನು ಸಂಪಗಾವಿಗೆ ಕಳುಹಿಸಿದ ನಂತರ ಚಾವಡಿಗೆ ರಾಯಣ್ಣನ ತಾಯಿಯನ್ನು ಕೆಂಚವ್ವನನ್ನು ಕರೆಯಿಸಿ, ಕಂದಾಯದ ಹಣವನ್ನು ಕೊಡಬೇಕೆಂದು ಕೇಳುತ್ತಾನೆ. ರಾಯಣ್ಣ ಬಂದ ನಂತರ ಕೊಡುತ್ತಾನೆ ಎಂದು ಹೇಳಿದರೂ ಕೇಳದೆ ಕುಲಕರ್ಣಿ ವಯಸ್ಸಾದ ಕೆಂಚವ್ವನ ಬೆನ್ನಿನ ಮೇಲೆ ಬೀಸುವ ಕಲ್ಲನ್ನು ಹೇರಿ ಹಿಂಸೆಗೆ ಗುರಿಪಡಿಸುತ್ತಾನೆ. ಈ ವಿಷಯ ತಿಳಿದ ಬಿಚ್ಚುಗತ್ತಿ ಚೆನ್ನಬಸವ ಕಂದಾಯದ ಹಣಕ್ಕೆ ಜಾಮೀನಾಗಿ ಚಾವಡಿಯಿಂದ ಮನೆಗೆ ಕರೆದುಕೊಂಡು ಬರುತ್ತಾನೆ.

ಸಂಪಗಾವಿಯಲ್ಲಿ ಸೆರೆಮನೆ ಸೇರಿದ ರಾಯಣ್ಣನು ಕುಲಕರ್ಣಿಯ ಮೇಲೆ ಸಿಟ್ಟಾಗಿ ಮೂರು ದಿನಗಳ ಕಾಲ ಸೆರೆಮನೆಯಲ್ಲಿರುತ್ತಾನೆ. ಸೆರೆಮನೆ ಸೇರಿ ಮೂರು ದಿನಗಳ ನಂತರ ಅಮಲ್ದಾರ ಜಾಮೀನು ಕೊಟ್ಟು ಹೋಗು ಎಂದಾಗ ಮೇಲುಗಿರಿ ರಂಗನಗೌಡರು ರಾಯಣ್ಣನಿಗೆ ಜಾಮೀನುಕೊಟ್ಟು ಬಿಡುಗಡೆಯ ಮಾಡಿಸುತ್ತಾರೆ. ಸೆರೆಮನೆಯಿಂದ ಹೊರಗೆ ಬಂದ ನಂತರ ಸಂಪಗಾವಿ ಕಚೇರಿಯಿಂದ ಹೊರಬಂದು ತಾನು ಮಾಡಿರದ ತಪ್ಪಿಗೆ ನನ್ನನ್ನು ಮೂರು ದಿನಗಳ ಕಾಲ ಸೆರೆಮನೆಯಲ್ಲಿ ಇಟ್ಟಿದ್ದಿರಿ ನಾನು ಈ ಕಚೇರಿಯನ್ನು ನಡು ಹಗಲಿನಲ್ಲಿ ಸುಟ್ಟು ಹಾಕುತ್ತೇನೆಂದು ಶಪಥ ಹಾಕುತ್ತಾನೆ. ಮಾಡಿರದ ತಪ್ಪಿಗಾಗಿ ಶಿಕ್ಷೆ ಅನುಭವಿಸಿದ್ದರಿಂದ ಸಿಟ್ಟಿನಿಂದ ರಾಯಣ್ಣ ಈ ರೀತಿಯ ಸವಾಲು ಹಾಕಿ ಸಂಗೊಳ್ಳಿ ಕಡೆಗೆ ಹೊರಟ. ಸಂಗೊಳ್ಳಿಗೆ ಹೋದ ನಂತರ ಕುಲಕರ್ಣಿ ಮಾಡಿದ ಅವಾಂತರಗಳನ್ನು ಕೇಳಿ ಕುಲಕರ್ಣಿಯನ್ನು ಜೀವಂತ ಬಿಡುವುದಿಲ್ಲವೆಂದು ಹುಡುಕಿಕೊಂಡು ಹೊರಟ, ಕುಲಕರ್ಣಿಯ ಮನೆಗೆ ಹೋದಾಗ ಕುಲಕರ್ಣಿಯ ಹೆಂಡತಿ, ಪತಿಭಿಕ್ಷೆ ಬೇಡಿದಕ್ಕೆ ಕುಲಕರ್ಣಿಗೆ ಕೊನೆಯ ಎಚ್ಚರಿಕೆಯನ್ನು ಕೊಟ್ಟು, ಸಂಗೊಳ್ಳಿಯನ್ನು ತೊರೆಯಲು ನಿರ್ಧರಿಸುತ್ತಾನೆ. ಅದೇ ದಿನ ರಾತ್ರಿ ಕುಲಕರ್ಣಿಯ ಜೋಳದ ಬಣವೆಯನ್ನು ಸುಡುವುದರ ಮೂಲಕ ರಾಯಣ್ಣ ತನ್ನ ಹೋರಾಟವನ್ನು ಪ್ರಾರಂಭಿಸುತ್ತಾನೆ. ಇಂತಹ ಘಟನೆಗಳಿಂದ ರಾಯಣ್ಣನ ಅಥವಾ ಕಿತ್ತೂರಿನ ಇತಿಹಾಸದಲ್ಲಿ ಮಹತ್ತರವಾದ ಚಳುವಳಿಗೆ ನಾಂದಿ ಹಾಡಿದನು ಎಂದು ಹೇಳಬಹುದು. ಅನ್ಯಾಯ, ಶೋಷಣೆಗಳಿಂದ ಬ್ರಿಟಿಷರ ವಿರುದ್ಧ ಹೋರಾಟ ಮಾಡಬೇಕೆಂದು ರಾಯಣ್ಣನಂತೆಯೇ ಅನೇಕ ಯುವಕರು ಕಾಯುತ್ತಿದ್ದರು. ಅಂತವರೆಲ್ಲರನ್ನು ಒಂದೆಡೆ ಸೇರಿಸಿ ಬ್ರಿಟಿಷರನ್ನು ಕಿತ್ತೂರಿನಿಂದ

ಹೊರ ಹಾಕಬೇಕೆಂದು ಯೋಜನೆಗಳನ್ನು ರೂಪಿಸತೊಡಗಿದನು. ಹೋರಾಟಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡು ಜನರ ಬೆಂಬಲಕ್ಕಾಗಿ ಕಾಯತೊಡಗಿದನು.

"ರಾಯಣ್ಣ ಸಂಗೊಳ್ಳಿ ಗರಡಿ ಮನೆಯನ್ನು ದೇಶಭಕ್ತ ನವಯುವಕರಲ್ಲಿ ಸ್ವಾತಂತ್ರ್ಯದ ಕಿಚ್ಚು ಹೊತ್ತಿಸುವ ಚಟುವಟಿಕೆಯ ಕೇಂದ್ರವಾಗಿಸಿದನು. ಎಲ್ಲ ಪ್ರಜೆಗಳಿಗೆ, ಯುವ ಸಮೂಹಕ್ಕೆಲ್ಲ ಕಿತ್ತೂರಿನ ಇತಿಹಾಸವನ್ನು, ದೇಸಾಯರ ಘನತೆ ಔದಾರ್ಯಗಳನ್ನು, ರಾಣಿ ಚನ್ನಮ್ಮನ ತ್ಯಾಗ ಧೈರ್ಯ ಛಲಗಳನ್ನು ಕಥಾರೂಪದಲ್ಲಿ ಹೇಳಿ ಬ್ರಿಟಿಷರ ದೌರ್ಜನ್ಯ, ಸಮಯ ಸಾಧಕತನಗಳನ್ನು ಹಾಗೂ ಕಿತ್ತೂರಿನ ಕೆಲವು ದೇಶದ್ರೋಹಿ ಮೋಸಗಾರರಿಂದ ಕಿತ್ತೂರು ಸಂಸ್ಥಾನ ನಾಶವಾದಂತಹ ಬಗೆಯನ್ನು ವಿವರಿಸಿದಾಗ ಆ ಯುವಸಮೂಹವೆಲ್ಲ ರಾಯಣ್ಣನ ಬೆಂಬಲಕ್ಕೆ ಟೊಂಕಕಟ್ಟಿ ನಿಂತಿತ್ತು."[೮] ಜನರ ಪ್ರೋತ್ಸಾಹ ಹಾಗೂ ಹಣ ಬೆಂಬಲಕ್ಕಾಗಿ ಯೋಚಿಸುತ್ತಿರುವಾಗ ಕಿತ್ತೂರು ಪತನದ ನಂತರದ ಸಂದರ್ಭದಲ್ಲಿ ಕಿತ್ತೂರಿಗೆ ದತ್ತು ಪುತ್ರನನ್ನು ತೆಗೆದುಕೊಂಡಿದ್ದ ಮಾಸ್ತಮರಡಿಯ ಶಿವಲಿಂಗಪ್ಪ (ಸವಾಯಿ ಮಲ್ಲಸರ್ಜ)ನನ್ನು ಮುಂದಿಟ್ಟುಕೊಂಡು ಹೋರಾಟ ಮಾಡಬೇಕೆಂದು ಸಿದ್ಧತೆಗಳನ್ನು ಮಾಡಿಕೊಂಡರು. ಸವಾಯಿ ಮಲ್ಲಸರ್ಜನನ್ನು ರಾತ್ರೋ ರಾತ್ರಿ ಕರೆದುಕೊಂಡು ಬಂದು ಸುರಕ್ಷಿತವಾಗಿ ಹಂಡಿಬಡಗನಾಥ ಬೆಟ್ಟಕ್ಕೆ ಕರೆದೊಯ್ಯುತ್ತಾರೆ. ಇಲ್ಲಿಂದ ರಾಯಣ್ಣ ಬ್ರಿಟಿಷರ ವಿರುದ್ಧ ಹೋರಾಟವನ್ನು ಪ್ರಾರಂಭಿಸಲು ಸಿದ್ಧರಾಗುತ್ತಾರೆ. ಬಾಳನಾಯಕ, ಅಪ್ಪೊಜಿನಾಯಕ, ಬಂಡಾರಿ ಬಾಪು ಮುಂತಾದ ಸಮಾನ ಮನಸ್ಕರೊಂದಿಗೆ ಸೇರಿ ರಾಯಣ್ಣ ಹೋರಾಟಕ್ಕೆ ಸೈನ್ಯದ ಹಾಗೂ ಇತರ ಹೋರಾಟದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾನೆ. ರಾಯಣ್ಣನು ಹೋರಾಟಕ್ಕೆ ಸುರಪುರದ ಅರಸನ ಸಹಾಯ ಪಡೆದಿರುವುದು ಕಂಡುಬರುತ್ತದೆ.

ರಾಯಣ್ಣನು ಸುರಪುರದ ಅರಸನ ಹತ್ತಿರ ಹೋಗಿ ತಾನು ಮಾಡಬೇಕೆಂದಿರುವ ಉದ್ದೇಶವನ್ನು ತಿಳಿಸಿದ ನಂತರ ರಾಯಣ್ಣನಿಗೆ ಮೂರುನೂರು ಜನರನ್ನು ಬೇಡರ ಸೈನ್ಯದಲ್ಲಿ ತಾನೆ ಆರಿಸಿಕೊಂಡು ದಂಡನ್ನು ಕಟ್ಟುತ್ತಾನೆ. ಬ್ರಿಟಿಷರ ಬೃಹತ್ ಸೈನ್ಯದ ವಿರುದ್ಧ ಹೋರಾಟಕ್ಕೆ ಸಾಕಷ್ಟು ದಂಡು ಬೇಕೆಂದು ಶಿವನಗುತ್ತಿಯ ಅರಸನ ಸಹಾಯ ಕೇಳುತ್ತಾನೆ. ಅವನಿಂದ ನಿರೀಕ್ಷಿತ ಸಹಾಯ ದೊರೆಯದಿದ್ದಾಗ ಶಿವನಗುತ್ತಿಯ ಸುತ್ತ-ಮುತ್ತಲಿನ ಪ್ರದೇಶಗಳಲ್ಲಿ ಜನರಿಗೆ ಹಾನಿ ಮಾಡುತ್ತಿದ್ದ ಒಕ್ಕಳ ಭರಮನೆಂಬ ದರೋಡೆಕೋರನನ್ನು ಸಂಹರಿಸಿದನು. ಶಿವನಗುತ್ತಿಯಿಂದ ಹಿಂದುರುಗಿದ ಕೆಲವು ದಿನಗಳವರೆಗೆ ಹೋರಾಟದ ಯೋಜನೆಗಳನ್ನು ರೂಪಿಸಿಕೊಂಡು ಹೋರಾಟಕ್ಕೆ ಸಿದ್ಧರಾಗುತ್ತಾರೆ.

ಶಿವನಗುತ್ತಿಯಿಂದ ರಾಯಣ್ಣ ಹಿಂದಿರುಗುವುದು ತಡವಾಗಿತ್ತು. ರಾಯಣ್ಣ ಶಿವನಗುತ್ತಿಗೆ ಹೋಗುವುದಕ್ಕು ಮೊದಲು ತನ್ನ ಸ್ನೇಹಿತರಿಗೆ ಬೇಗ ಬರುವುದಾಗಿ ಹೇಳಿದ್ದ. ಕಾರಣ ಅರಣ್ಯ ಪ್ರದೇಶದೊಳಗಿದ್ದ ಸೈನಿಕರಿಗೆ ಹಾಗೂ ಸ್ನೇಹಿತರಿಗೆ ಕಳವಳವಾಗತೊಡಗಿತು. ಆಗ ಬುದ್ಯಳ್ಳ ಯಲ್ಲಣ್ಣ ಎಲ್ಲರನ್ನು ಮೌನವಾಗಿರಿಸಿ ನೆಲಕ್ಕೆ ಕಿವಿಯಿಟ್ಟು ರಾಯಣ್ಣನ ಬರುವಿಕೆಯನ್ನು ಹೇಳುತ್ತಾನೆ. ಯಲ್ಲಣ್ಣ ಹೇಳಿದಂತೆ ಮರುದಿನ ರಾಯಣ್ಣ ಸೈನ್ಯದೊಂದಿಗೆ ಬಂದು ಇವರೊಂದಿಗೆ ಸೇರಿಕೊಳ್ಳುತ್ತಾನೆ.

ಹೋರಾಟದ ಸಿದ್ಧತೆಗಳನ್ನು ಮಾಡಿಕೊಂಡ ನಂತರ ರಾಯಣ್ಣ ಹಾಗೂ ಸ್ನೇಹಿತರು ಹೋರಾಟದ ಆರಂಭಕ್ಕೂ ಮೊದಲು ಕಿತ್ತೂರಿನ ಅರಾಧ್ಯ ದೇವರಾದ ಗುರುಸಿದ್ದೇಶ್ವರರಿಗೆ ಪೂಜೆಯನ್ನು ಸಲ್ಲಿಸಿ ಅರಣ್ಯ ಪ್ರದೇಶದೊಳಗೆ ಹೋಗುತ್ತಿರುವಾಗ ಬೀಡಿ ಕಚೇರಿಯಲ್ಲಿ ಸಾಕಷ್ಟು ಹಣವಿದೆಯೆಂದು ಮಾಹಿತಿಯನ್ನು ಪಡೆದುಕೊಂಡು ಬೀಡಿಯ ಕಡೆ ಹೊರಟರು.

ಬ್ರಿಟಿಷರ ವಿರುದ್ಧ ರಾಯಣ್ಣ ಮೊದಲ ದಾಳಿ ೧೮೩೦ ಜನವರಿ ೫ ರಿಂದ ಪ್ರಾರಂಭವಾಯಿತು. ಬೀಡಿ ಕಚೇರಿಯಲ್ಲಿ ಸಾಕಷ್ಟು ಹಣವಿದೆಯೆಂದು ಮಾಹಿತಿ ಪಡೆದ ರಾಯಣ್ಣನ ತಂಡ ದಾಳಿ ಮಾಡಿತು. ರಾಯಣ್ಣನ ತಂಡ ಬೀಡಿಗೆ ಬರುತ್ತಿದಂದತೆಯೇ ಕಾವಲಿದ್ದವರು ಅಲ್ಲಿಂದ ಓಡಿ ಹೋದರು. ಆದರೆ ರಾಯಣ್ಣನು ದಾಳಿ ಮಾಡುವುದಕ್ಕಿಂತ ಒಂದು ದಿನ ಮುಂಚಿತವಾಗಿ ಕಚೇರಿಯಲ್ಲಿದ್ದ ೨೮ ಸಾವಿರ ರೂಪಾಯಿಗಳನ್ನು ಮುಂಬೈಗೆ ಕಳುಹಿಸಲಾಗಿತ್ತೆಂದು ಬ್ರಿಟಿಷ್ ಅಧಿಕಾರಿಯಾಗಿ ನಿಸ್ಬತ್‌ರವರು ಮುಂಬೈ ಸರ್ಕಾರಕ್ಕೆ ಬರೆದ ಪತ್ರದಲ್ಲಿ ಹೇಳಿದ್ದಾರೆ. ರಾಯಣ್ಣನ ತಂಡ ಕಚೇರಿಯ ಮೇಲೆ ದಾಳಿ ಮಾಡಿ ಕಚೇರಿಯಲ್ಲಿದ್ದ ಕಾಗದ ಪತ್ರಗಳೆಲ್ಲವನ್ನು ಸುಟ್ಟು ಹಾಕಿದರು. ಖಜಾನೆಯಲ್ಲಿದ್ದ ೧೯೦೦ ರೂಪಾಯಿಗಳನ್ನು ವಶಪಡಿಸಿಕೊಂಡರು. ಬೀಡಿಯಿಂದ ರಾಯಣ್ಣನ ತಂಡ ನಂದಗಡಕ್ಕೆ ಬಂದರು. ಕಿಲ್ಲೇದಾರನನ್ನು ಬೆದರಿಸಿ ಕಂದಾಯದ ಹಣವನ್ನು ನಮಗೆ ಕೊಡಬೇಕೆಂದು ಹೇಳಿದರು. ನಂದಗಡದ ಊರಿನ ಪರವಾಗಿ ಒಂದು ಸಾವಿರ (೧೦೦೦) ರೂಗಳನ್ನು ಪಡೆಯಲಾಯಿತೆಂದು ಸ್ವತಃ ರಾಯಣ್ಣನೆ ವಿಚಾರಣೆಯ ವೇಳೆ ಒಪ್ಪಿಕೊಂಡಿದ್ದಾನೆ. ಬ್ರಿಟಿಷರು ಕಿತ್ತೂರು ಸಂಸ್ಥಾನವನ್ನು ವಶಪಡಿಸಿಕೊಂಡ ನಂತರ ಖಾನಾಪುರವನ್ನು ಸೈನ್ಯಾತಾಣ್ಯವನ್ನಾಗಿ ಮಾಡಿಕೊಂಡಿದ್ದರು. ಖಾನಾಪುರದಲ್ಲಿ ಮೇಜರ್ ಪಿಕರಿಂಗ್ ಎಂಬಾತನ ನೇತೃತ್ವದಲ್ಲಿ ಬ್ರಿಟಿಷರ ಸೇನಾಪಡೆಯಿತ್ತು. ರಾಯಣ್ಣ ಖಾನಾಪುರವನ್ನು ಪ್ರವೇಶಿಸಿ ಸೈನ್ಯತಾಣ್ಯವನ್ನು ಸುಟ್ಟುಹಾಕಿದರು. ಹಾಗೂ ಖಾನಾಪುರದಲ್ಲಿ ನಡೆದ ದಾಳಿಯಲ್ಲಿ ರಾಯಣ್ಣನ ಗುಂಪಿನಲ್ಲಿದ್ದವರು ಒಬ್ಬನು ಸತ್ತನೆಂದು ಕರ್ನಲ್ ಮ್ಯಾಕ್ಲೆಯಾಡನಿಗೆ ಪಿಕರಿಂಗ್ ಬರೆದ ಪತ್ರದಲ್ಲಿ ಮಾಹಿತಿಯಿದೆ.

ರಾಯಣ್ಣನ ಪ್ರಮುಖ ದಾಳಿ ಎಂದರೆ ಸಂಪಗಾವಿ ಕಛೇರಿಯ ಮೇಲೆ ಮಾಡಿದ ದಾಳಿಯಾಗಿದೆ. ಕುಲಕರ್ಣಿ ಬಾಳಪ್ಪನ ಪಿತೂರಿಯಿಂದ ಮೂರು ದಿನಗಳ ಕಾಲ ಸೆರೆಮನೆಯಲ್ಲಿದ್ದು, ಅಲ್ಲಿಂದ ಬಿಡುಗಡೆಗೊಂಡ ನಂತರ ಹೊರಬಂದು ಪ್ರತಿಜ್ಞೆ ಮಾಡುತ್ತಾನೆ. ಈ ಕಚೇರಿಯನ್ನು ನಡುಹಗಲಿನಲ್ಲಿ ಸುಟ್ಟುಹಾಕುತ್ತೆನೆಂದು ಶಪಥ ಹಾಕುತ್ತಾನೆ. ಈ ವಿಷಯ ಜಾನಪದ ಸಾಹಿತ್ಯದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಬಿಡುಗಡೆಯ ನಂತರ ಪ್ರತಿಜ್ಞೆಯನ್ನು ಮಾಡಿ ಬಂದಿರುತ್ತಾನೆ. ಆ ಪ್ರತಿಜ್ಞೆಯನ್ನು ರಾಯಣ್ಣ ತನ್ನ ಹೋರಾಟದ ಸಂದರ್ಭದಲ್ಲಿ ೧೮೩೦ ಜನವರಿ ೧೩ ರಂದು ನಡುಹಗಲಿನಲ್ಲಿಯೇ ಸಂಪಗಾವಿ ಕಚೇರಿಯ ಮೇಲೆ ದಾಳಿ ಮಾಡುತ್ತಾನೆ. ಸಂಪಗಾವಿಯ ಅಮಲ್ದಾರನಾದ ಕೃಷ್ಣರಾವನು, ರಾಯಣ್ಣ ಯಾವ ಸಮಯದಲ್ಲಾದರೂ ದಾಳಿ ಮಾಡಬಹುದೆಂದು ಹೆದರಿ ಕಚೇರಿಯಲ್ಲಿದ್ದ ಹಣವನ್ನು ಮಸೀದಿಯ ಮೇಲಿರಿಸಿ ಕಾವಲಿಗೆ ಕೆಲವರನ್ನು ನೇಮಿಸಿರುತ್ತಾನೆ. ಕಚೇರಿಯ ಕಾವಲಿದ್ದವರು

ದೇವಲಾಪುರದವರು ಇವರು ಮೊದಲೆ ರಾಯಣ್ಣ ಹೇಳಿದಂತೆ ರಾಯಣ್ಣನ ಸಂಗಡ ಹೋರಾಟಕ್ಕೆ ಸೇರಿಕೊಂಡರು. ರಾಯಣ್ಣನು ಸಂಪಗಾವಿಗೆ ಬಂದ ನಂತರ ಕಾವಲಿಗಿದ್ದವರು ರಾಯಣ್ಣನ ಸಂಗಡ ಸೇರಿಕೊಳ್ಳುತ್ತಾರೆ. ಕಚೇರಿಯಲ್ಲಿದ್ದ ಕಾಗದ ಪತ್ರಗಳನ್ನೆಲ್ಲಾ ಸುಟ್ಟು ಹಾಕಿ ಕಛೇರಿಗೆ ಬೆಂಕಿ ಹಚ್ಚುತ್ತಾರೆ. ಹಾಗೂ ಕೃಷ್ಣರಾವನ ಮನೆಗೂ ಬೆಂಕಿ ಹಚ್ಚಿಸಿದರು. ಸಂಪಗಾವಿಯ ಕಡೆ ಬ್ರಿಟಿಷರ ಹೆಚ್ಚಿನ ಸೇನೆ ಬರುತ್ತಿರುವ ಸುದ್ದಿಯನ್ನು ತಿಳಿದು ಸಂಪಗಾವಿಯಿಂದ ದೇಶನೂರು ಗುಡ್ಡದ ಮೂಲಕ ಮರೆಯಾಗುತ್ತಾರೆ.

ಕಿತ್ತೂರಿನ ಜನತೆ ರಾಯಣ್ಣನ ಹೋರಾಟಕ್ಕೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಾಯವನ್ನು ಮಾಡುತ್ತಿದ್ದರು. ರಾಯಣ್ಣ ಜನರಿಗೆ ಒಂದು ಮಾಹಿತಿ ತಿಳಿಸಿ, ತಾನು ಮತ್ತೊಂದು ಕಡೆ ದಾಳಿ ಮಾಡುತ್ತಿದ್ದ. ಜನರು ಬ್ರಿಟಿಷರ ದಾರಿಯನ್ನು ತಪ್ಪಿಸಲು ರಾಯಣ್ಣನ ಕುರಿತು ಸುಳ್ಳು ಮಾಹಿತಿಯನ್ನು ತಿಳಿಸುತ್ತಿದ್ದರು. ಹಾಗೂ ರಾಯಣ್ಣನ ಕುರಿತು ಜನರು ಬ್ರಿಟಿಷರಿಗೆ ಬಗೆ-ಬಗೆಯ ಕಡೆಯ ಇರುವಿಕೆಯನ್ನು ಹೇಳುತ್ತಿದ್ದರು. ಇಂತಹ ಮಾಹಿತಿಗಳಿಂದ ಬ್ರಿಟಿಷರು ಗೊಂದಲಗೊಂಡು ಸೈನ್ಯವನ್ನು ಹರಿದು ಹಂಚಿ ಹೋಗುವಂತೆ ಜನತೆ ರಾಯಣ್ಣನಿಗೆ ಸಹಕಾರವನ್ನು ಕೊಡುತ್ತಿದ್ದರು. ಇದಕ್ಕೆ ಸಂಬಂಧಿಸಿದಂತೆ ಕ್ಯಾಥಿಯಾರ್ಟ ಎಂಬ ಬ್ರಿಟಿಷ್ ಅಧಿಕಾರಿಯು ಆ ಭಾಗದ ಗ್ರಾಮದ ಊರ ಶೇತ್ ಸನದಿಗಳು ಅಮಲ್ದಾರರಿಗೆ ಬಂಡಾಯಗಾರರ ವಿರುದ್ಧ ಏನು ಸಹಾಯ ನೀಡಲಿಲ್ಲ. ಅವರು ಬಂಡಾಯಗಾರರ ಜೊತೆ ಸಹಕರಿಸಿ ಅವರಿಗೆ ಮಾಹಿತಿಯನ್ನು ನೀಡುತ್ತಾರೆ. ಕಿತ್ತೂರು ನಾಡಿನ ಪ್ರಜೆಗಳಾದವರೆಲ್ಲ ಹೀಗೆ ಮಾಡುತ್ತಾರೆ"[೯] ಎಂದು ವರದಿ ಮಾಡಿದ್ದಾನೆ. ಈ ವರದಿಯ ಅರ್ಥ ಕಿತ್ತೂರಿನ ಜನರು ರಾಯಣ್ಣನ ಹೋರಾಟಕ್ಕೆ ಹಾಗೂ ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸಬೇಕು ಎಂಬಂತಹ ಹಂಬಲವಿರುವುದನ್ನು ಕಾಣುತ್ತೇವೆ. ಜೊತೆಗೆ ರಾಯಣ್ಣನಿಗೆ ಅರಣ್ಯ ಪ್ರದೇಶದ ಪರಿಚಯವಿದ್ದ ಕಾರಣ ಮಿಂಚಿನಂತೆ ಬೇಗ ಮರೆಯಾಗಿಬಿಡುತ್ತಿದ್ದ. ಕಿತ್ತೂರಿನ ಜನತೆಯು ಬ್ರಿಟಿಷರಿಗೆ ಯಾವುದೇ ರೀತಿಯ ಸಹಾಯ ಮತ್ತು ಸಹಕಾರವನ್ನು ನೀಡುತ್ತಿರಲಿಲ್ಲ. ರಾಯಣ್ಣನಿಗೆ ಹಾಗೂ ರಾಯಣ್ಣನ ತಂಡದವರಿಗೆ ಅರಣ್ಯ ಪ್ರದೇಶದಲ್ಲಿನ ಸಂಚಾರವು ತಿಳಿದಿದ್ದರಿಂದ ದಾಳಿ ಮಾಡಿದ ನಂತರ ಅರಣ್ಯ ಪದೇಶದೊಳಗೆ ಮರೆಯಾಗುತ್ತಿದ್ದರು.

ಸಂಪಗಾವಿಯ ಕಚೇರಿಯ ಮೇಲೆ ರಾಯಣ್ಣ ದಾಳಿ ಮಾಡುತ್ತಿರುವ ವಿಷಯವನ್ನು ತಿಳಿದ ಅಮಲ್ದಾರ ಹೆಚ್ಚಿನ ಸೈನ್ಯದೊಂದಿಗೆ ಸಂಪಗಾವಿಯ ಕಡೆಗೆ ಹೊರಟ ಈ ವಿಷಯ ರಾಯಣ್ಣನಿಗೆ ತಿಳಿದು ಸಂಪಗಾವಿಯನ್ನು ತೊರೆದ ನಂತರ ರಾಯಣ್ಣನಿಗೆ ಅಮಲ್ದಾರನ ಸೈನ್ಯ ಎದುರಾಯಿತು. ಮುಖಾಮುಖಿ ಹೋರಾಟ ಮಾಡುತ್ತಿರುವಾಗ ಅಮಲ್ದಾರನು ಬೆಳಗಾಂವ ಹಾಗೂ ಧಾರವಾಡದಿಂದ ಸೈನ್ಯವನ್ನು ಕಳುಹಿಸಿದ್ದರು. ಎಲ್ಲಾ ದಿಕ್ಕುಗಳಿಂದಲೂ ಸೈನ್ಯ ತರಿಸಿ ರಾಯಣ್ಣನನ್ನು ಹಿಡಿಯಬೇಕೆಂದು ಯೋಜನೆಯನ್ನು ರೂಪಿಸಿಕೊಂಡರು. ಆದರೆ ಈ ವಿಚಾರ ರಾಯಣ್ಣನಿಗೆ ತಿಳಿದು ಸಂಗಡಿಗರೊಂದಿಗೆ ದೇಶನೂರು ಅರಣ್ಯದೊಳಗೆ ರಾಯಣ್ಣನ ಸಂಗಡಿಗರು ಮರೆಯಾದರು.

ದೇಶನೂರು ಅರಣ್ಯದೊಳಗೆ ಸೇರಿಕೊಂಡ ರಾಯಣ್ಣನ ತಂಡವು ಕೆಲ ಸಮಯ ವಿಶ್ರಾಂತಿಯನ್ನು ಪಡೆದು ಮುಂದಿನ ಕಾರ್ಯಗಳಿಗೆ ಸಿದ್ಧತೆಯನ್ನು ಮಾಡತೊಡಗಿತು. ಸಂಗಡಿಗರನ್ನು ಎರಡು ತಂಡಗಳನ್ನಾಗಿ ಮಾಡಿಕೊಂಡು, ಒಂದು ತಂಡ ರಾಯಣ್ಣನ ನೇತೃತ್ವದಲ್ಲಿ ಸುಮಾರು ಒಂದು ಸಾವಿರದಷ್ಟು ಸಂಗಡಿಗರೊಂದಿಗೆ ಸಂಗೊಳ್ಳಿಯ ಮೇಲೆ ದಾಳಿ ಮಾಡಲು ಹೊರಟಿತು. ಈ ವಿಷಯ ತಿಳಿದ ಕುಲಕರ್ಣಿಗೆ ತಿಳಿದು ಹೆದರಿ ಅಡಗಿಕೊಳ್ಳಲು ದಾರಿ ಹುಡುಕುತ್ತಿದ್ದ. ಸಂಗೊಳ್ಳಿಗೆ ರಾಯಣ್ಣ ಬರುತ್ತಿರುವ ಸುದ್ಧಿಯನ್ನು ತಿಳಿದ ಸಂಗೊಳ್ಳಿಯ ಜನತೆ ರಾಯಣ್ಣನ ಸ್ವಾಗತಕ್ಕಾಗಿ ಕಾಯುತ್ತಿದ್ದರು. ಸಂಗೊಳ್ಳಿಯ ಸರಕಾರಿ ಚಾವಡಿ ಹಾಗೂ ಚಾವಡಿಯಲ್ಲಿದ್ದ ಕಾಗದ ಪತ್ರಗಳನೆಲ್ಲಾ ಸುಟ್ಟು ಹಾಕಿದರು. ಹಾಗೂ ಬ್ರಿಟಿಷರಿಗೆ ಸಹಾಯ ಮಾಡುತ್ತಿದ್ದಂತಹ ಕೆಲವರನ್ನು ಬೆದರಿಸಿ ಬ್ರಿಟಿಷರ ಅಥವಾ ಸರ್ಕಾರದ ಕೆಲಸಗಳನ್ನು ಅವರಿಗೆ ಯಾವುದೇ ರೀತಿಯ ಸಹಾಯ ಮಾಡಬಾರದೆಂದು ಎಚ್ಚರಿಕೆಯನ್ನು ಕೊಟ್ಟು ಸಂಗೊಳ್ಳಿಯನ್ನು ತೊರೆದನು.

ರಾಯಣ್ಣನ ದಾಳಿಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಇದ್ದವು. ರಾಯಣ್ಣನು ಯಾವ ಸಮಯದಲ್ಲಾದರೂ ದಾಳಿ ಮಾಡಬಹುದೆಂದು ಬ್ರಿಟಿಷರು ಸದಾ ಭಯದ ಸ್ಥಿತಿಯಲ್ಲಿದ್ದರು. ರಾಯಣ್ಣನ ಯುದ್ಧ ನೀತಿ ಅಥವಾ ಯುದ್ಧ ತಂತ್ರ ರಾತ್ರಿಯ ವೇಳೆಯಲ್ಲಿ ಇದ್ದಕ್ಕಿದ್ದಂತೆ ದಾಳಿ ಮಾಡುವುದಾಗಿತ್ತು. ರಾಯಣ್ಣನನ್ನು ಹಿಡಿಯಲಾಗದ ಬ್ರಿಟಿಷರಿಗೆ ರಾಯಣ್ಣ ಸಿಂಹಸ್ವಪ್ನನಾಗಿದ್ದನು. ಸಂಪಗಾವಿಯ ಅಮಲ್ದಾರ ರಾಯಣ್ಣನನ್ನು ಹಿಡಿಯಲೇಬೇಕೆಂದು ಹಗಲಿರುಳು ಹುಡುಕುತ್ತಿದ್ದ. ಆದರೆ ಅಮಲ್ದಾರನ ನಿರೀಕ್ಷೆಗಳಿಗೆ ವಿರುದ್ಧವಾಗಿ ರಾಯಣ್ಣ ದಾಳಿಗಳನ್ನು ಮಾಡುತ್ತಿದ್ದ. ಸಂಗೊಳ್ಳಿಯಿಂದ ರಾಯಣ್ಣ ಕುರುವಿನಕೊಪ್ಪ-ಮಾಸ್ತಿಕೊಪ್ಪಗಳ ಕಡೆ ಹೋಗಿರುವ ಮಾಹಿತಿಯನ್ನು ಪಡೆದ ಅಮಲ್ದಾರನು ಸೈನ್ಯವನ್ನು ಕಳುಹಿಸಿದ. ಆದರೆ ರಾಯಣ್ಣ ದಾರಿಯನ್ನು ಬದಲಿಸಿ ಕಿತ್ತೂರಿನ ಕಡೆ ಹೊರಟು ಹೋಗಿದ್ದನು.

ರಾಯಣ್ಣ ದಾಳಿ ಮಾಡಿದ ನಂತರ ಅರಣ್ಯ ಪ್ರದೇಶಗಳಲ್ಲಿ ಮರೆಯಾಗುತ್ತಿದ್ದ. "ರಾಯಣ್ಣ ಮತ್ತು ಅವನ ತಂಡದವರಿಗೆ ದಟ್ಟವಾದ ಅರಣ್ಯ ಪ್ರದೇಶದಲ್ಲಿಯ ಅಡಗು ತಾಣಗಳಲ್ಲಿರುವ ಜೀವನ ಕ್ರಮವು ಒಗ್ಗಿ ಹೋಗಿತ್ತು. ದೇಶನೂರು ಗುಡ್ಡ, ಹಣ್ಣಿಕೇರಿ ಗುಡ್ಡ, ಕೌಲುಗುಡ್ಡ, ಬಾಳಗುಂದ ಬೆಟ್ಟ, ಹಂಡಿ ಬಡಗನಾಥ ಬೆಟ್ಟ ಮುಂತಾದೆಡೆಗಳಲ್ಲಿಯ ಅಡಗು ತಾಣಗಳು ಅವರ ಪಾಲಿಗೆ ಮನೆಗಳೇ ಅಗಿದ್ದವು. ಸುಮಾರು ಒಂದುವರೆ ವರ್ಷಗಳಷ್ಟು ಕಾಲಾವಧಿಯಲ್ಲಿಯ ಅವರೆಲ್ಲರ ಬದುಕು ಒಂದು ಬಗೆಯಲ್ಲಿ ಋಷಿಗಳಂತೆ ಇತ್ತು. ಅವರೆಲ್ಲರೂ ದೇಶಭಕ್ತಿಯಲ್ಲಿ, ನಾಡನಿಷ್ಠೆಯಲ್ಲಿ ಸಾಧಕರಾಗಿದ್ದರು. ಜೊತೆಗೆ ಎಚ್ಚರಿಕೆಯಿಂದಲೂ ಇರುತ್ತಿದ್ದರು. ಹಾಗಾಗಿ ತಮ್ಮ ಅಡಗು ತಾಣಗಳನ್ನು ಅಗಾಗ ಬದಲಿಸುತ್ತಿದ್ದರು. ಅದು ಅವರ ತಂಡಗಳ ವಿಶಿಷ್ಟ ವ್ಯವಸ್ಥೆಯ ಒಳಗುಟ್ಟು. ಜನತಾ ಬೆಂಬಲದ ಜೊತೆಗೆ ಜನತಾ ಪ್ರೀತಿಯ ಪರಿಣಾಮ."[೧೦] ರಾಯಣ್ಣನ ಪ್ರಮುಖ ಅಡಗು ತಾಣಗಳೆಂದರೆ ದೇಶನೂರು ಗುಡ್ಡ, ಕೌಲುಗುಡ್ಡ, ಬಾಳಗುದ್ದ ಬೆಟ್ಟ, ಹಂಡಿಬಡಗನಾಥ ಬೆಟ್ಟಗಳಾಗಿದ್ದವು ಇವು

ರಾಯಣ್ಣನ ಹೋರಾಟದ ಸಂದರ್ಭದಲ್ಲಿ ಬ್ರಿಟಿಷರ ದಾರಿ ತಪ್ಪಿಸಲು ತಾವಿರುವ ಅಡಗು ತಾಣಗಳನ್ನು ಅಗಾಗ ಬದಲಿಸುತ್ತಿದ್ದರು.

ಬ್ರಿಟಿಷರು ರಾಯಣ್ಣನ ದಾಳಿಗಳಿಂದ ಕಂಗೆಟ್ಟು ಹಿಡಿಯಲಾಗದೆ ಹೋದಾಗ ಹಾಗೂ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದ್ದ ರಾಯಣ್ಣನ ಹೋರಾಟದ ಹಿಂದೆ ಕಿತ್ತೂರು ಸಂಸ್ಥಾನದವರ ಪರೋಕ್ಷ ಬೆಂಬಲಗಳಿವೆ ಎಂದು ಊಹಿಸಿ, ಕಿತ್ತೂರು ಸಂಸ್ಥಾನದ ಕೊನೆಯ ರಾಣಿಯಾದ ವೀರಮ್ಮನನ್ನು ಬೈಲುಹೊಂಗಲದಿಂದ ಕುಸುಗಲ್ಲಿಗೆ ಸ್ಥಳಾಂತರಿಸಲಾಯಿತು. ವೀರಮ್ಮನನ್ನು ಸ್ಥಳಾಂತರಿಸುವ ವಿಷಯ ಕಿತ್ತೂರಿನ ಜನತೆಗೆ ದುಃಖದ ಜೊತೆಗೆ ಬ್ರಿಟಿಷರ ವಿರುದ್ಧ ಮತ್ತಷ್ಟು ದ್ವೇಷ ಭಾವನೆ ಬೆಳೆಯಿತು. ಆದರೆ ಕಿತ್ತೂರಿನ ಜನತೆ ನಿಸ್ಸಾಯಕರಾಗಿದ್ದರು. ಈ ವಿಷಯ ರಾಯಣ್ಣನಿಗೆ ತಿಳಿದು ರಾಣಿಯ ಸ್ಥಳಾಂತರವನ್ನು ತಪ್ಪಿಸಲು ತನ್ನ ಸಹಚರರೊಂದಿಗೆ ಬಂದಿದ್ದ. ರಾಯಣ್ಣ ಬರಬಹುದೆಂದು ಬ್ರಿಟಿಷರು ಮೊದಲೆ ಹೆಚ್ಚಿನ ಸೈನ್ಯದೊಂದಿಗೆ ವೀರಮ್ಮನನ್ನು ಸ್ಥಳಾಂತರಿಸಿದರು.

ದಿನದಿಂದ ದಿನಕ್ಕೆ ರಾಯಣ್ಣನ ದಾಳಿಗಳು ಹೆಚ್ಚಾಗಿ ಬ್ರಿಟಿಷರು, ರಾಯಣ್ಣನನ್ನು ಹಿಡಿಯಲೇಬೇಕೆಂದು ರಾಯಣ್ಣ ರಾತ್ರಿ ವೇಳೆಯಲ್ಲಿ ಅಡಗಿಕೊಳ್ಳುವ ತಾಣಗಳಿಗೆ ಹುಡುಕಿಕೊಂಡು ಹೊರಟರು. ಈ ವಿಷಯ ರಾಯಣ್ಣನಿಗೆ ತಿಳಿದು ತಂತ್ರಕ್ಕೆ ಪ್ರತಿತಂತ್ರವೆಂಬಂತೆ ರಾಯಣ್ಣನು ಬ್ರಿಟಿಷರಿಗೆ ದೂರದಲ್ಲಿ ನಾನಿರುವ ತಾಣವನ್ನು ತೋರಿಸುವಂತೆ ಮತ್ತು ಬ್ರಿಟಿಷರಿಗೆ ದಾರಿ ತಪ್ಪಿಸಲು ಅಡುಗೆ ಮಾಡುವ ಹಾಗೆ ಬೆಂಕಿಯನ್ನು ಹಚ್ಚಿ ಅಲ್ಲಿಂದ ದೂರ ಸರಿದರು. ಇದನ್ನು ಕಂಡ ಬ್ರಿಟಿಷ್ ಸೇನೆಯು ರಾಯಣ್ಣನ ತಂಡ ಇಲ್ಲಿಯೇ ಇದೆ ಎಂದು ಗುಂಡಿನ ಸುರಿಮಳೆ ಸುರಿಸುತ್ತಿದ್ದರು.

ಬ್ರಿಟಿಷರು ಭ್ರಮೆಯಿಂದ ರಾಯಣ್ಣನ ದಂಡು ಇದೆಯೆಂದು ಭಾವಿಸಿ ಮದ್ದು–ಗುಂಡುಗಳು ಕಾಲಿಯಾಗುವವರೆಗೆ ಹೊಡೆಯುತ್ತಾರೆ. ಗುಂಡುಗಳ ಶಬ್ದನಿಂತ ನಂತರ ರಾಯಣ್ಣ ಹಾಗೂ ಸಹಚರರು ಬ್ರಿಟಿಷ್ ಸೈನ್ಯದ ಸುತ್ತ ಸುತ್ತುವರೆದರು. ರಾಯಣ್ಣ ಹಾಗೂ ಆತನ ಸಹಚರರು ಅನಿರೀಕ್ಷಿತವಾಗಿ ಬಂದಿದ್ದರಿಂದ ವಿಚಲಿತರಾದ ಬ್ರಿಟಿಷ್ ಸೇನೆಯು ನಿರಾಯುಧನಾಗಿ ನಿಂತಿತ್ತು. ಇದೆ ಸರಿಯಾದ ಸಮಯವೆಂದು ರಾಯಣ್ಣನ ತಂಡವು ಮನಬಂದಂತೆ ಬ್ರಿಟಿಷ್ ಸೇನೆಯನ್ನು ತುಂಡರಿಸತೊಡಗಿತು. ಹೀಗೆ, ರಾಯಣ್ಣನು ತನ್ನ ಆಲೋಚನೆಯಿಂದ ಬ್ರಿಟಿಷ್ ಸೇನೆಯನ್ನು ಸೋಲಿಸಲು ಮಾಡಿದ ರಾಯಣ್ಣನ ಯುದ್ಧ ನೀತಿಯ ತಂತ್ರವಾಗಿತ್ತು. ಇದರಿಂದ ಬ್ರಿಟಿಷರು ರಾಯಣ್ಣನನ್ನು ನೇರವಾಗಿ ಹಿಡಿಯಲು ಸಾಧ್ಯವಿಲ್ಲವೆಂದು ಅರಿತು ಭಾರತದ್ಯಾಂತ ನಡೆಸಿದ ಕುತಂತ್ರದ ನೀತಿಯನ್ನು ಅನುಸರಿಸಿಲು ಮುಂದಾಗುತ್ತಾರೆ.

ಬ್ರಿಟಿಷರು ರಾಯಣ್ಣನನ್ನು ಹಿಡಿದು ಕೊಡುವುದಕ್ಕೆ ಆಸೆ ಅಕಾಂಕ್ಷೆಗಳನ್ನು ಒಡ್ಡಿದರು. ಆದರೆ ಕಿತ್ತೂರಿನ ಜನ ಯಾರೊಬ್ಬರು ಮುಂದೆ ಬಾರದ್ದನ್ನು ನೋಡಿ ಮತ್ತಷ್ಟು ಕಂಗಾಲಾದರು.

ಸಂಪಗಾವಿಯ ಅಮಲ್ದಾರನ ಮೇಲಿನ ಅಧಿಕಾರಿಗಳ ಒತ್ತಡದಿಂದ ರಾಯಣ್ಣನನ್ನು ಹೇಗಾದರು ಮಾಡಿ ಹಿಡಿದುಕೊಡಲೇಬೇಕೆಂದು ಯೋಚಿಸುತ್ತಿರುವ ಸಂದರ್ಭದಲ್ಲಿ ಕಿತ್ತೂರಿಗೆ ದತ್ತು ಪುತ್ರನನ್ನು ತೆಗೆದುಕೊಳ್ಳುವಾಗ ಖೊದನಪುರದ ಲಿಂಗನಗೌಡನಿಗೆ ತನ್ನ ಮಗನನ್ನು ದತ್ತು ಕೊಡಬೇಕೆಂಬ ಬಯಕೆಯಿತ್ತು. ಆದರೆ ರಾಣಿ ಚೆನ್ನಮ್ಮಳು ಇದಕ್ಕೆ ವ್ಯತಿರಿಕ್ತವಾಗಿ ಮಾಸ್ತಮರಡಿಯ ಶಿವಲಿಂಗಪ್ಪನನ್ನು ದತ್ತು ಪುತ್ರನನ್ನಾಗಿ ತೆಗೆದುಕೊಂಡಿದ್ದರಿಂದ ನಿಂಗನಗೌಡನಿಗೆ ಕಿತ್ತೂರು ಸಂಸ್ಥಾನದ ಮೇಲೆ ಅಸಮಾಧಾನವಿತ್ತು. ಇದನ್ನು ಗಮನಿಸದ ಕೃಷ್ಣರಾವನು ಲಿಂಗನಗೌಡನನ್ನು ಕರೆಯಿಸಿ, ನೀನು ರಾಯಣ್ಣನ ಹೋರಾಟಕ್ಕೆ ಬೆಂಬಲ ಕೊಡುತ್ತಿಯಾ ಎಂದು ಹೇಳಿ ಹೆದರಿಸಿದನು. ನಂತರ ಲಿಂಗನಗೌಡನಿಗೆ ರಾಯಣ್ಣನನ್ನು ಹಿಡಿದುಕೊಡಬೇಕು. ಹಿಡಿದುಕೊಟ್ಟರೆ ಬಹುಮಾನ ಕೊಡುವುದಾಗಿ ಆಸೆ-ಆಕಾಂಕ್ಷೆಗಳನ್ನು ತೋರಿಸಿದ. ಇದಕ್ಕೆ ಒಪ್ಪದಿದ್ದಾಗ ಬೆದರಿಕೆಯನ್ನು ಹಾಕಿ ಒಪ್ಪಿಸಿದ. ಲಿಂಗನಗೌಡನು ಭಯಪಡುತ್ತಿದ್ದ ಕಾರಣದಿಂದ ನೇಗಿನಹಾಳದ ವೆಂಕನಗೌಡನನ್ನು ಜೊತೆಗೆ ಒಪ್ಪಿಸಿ ರಾಯಣ್ಣನ ಹೋರಾಟಕ್ಕೆ ಸಹಾಯ ಹಾಗೂ ಪ್ರೋತ್ಸಾಹದ ಜೊತೆಗೆ ನಾವು ನಿಮ್ಮೊಂದಿಗೆ ಹೋರಾಟಕ್ಕೆ ಬರುತ್ತೆವೆಂದು ಹೇಳಿ ರಾಯಣ್ಣನ ತಂಡದೊಂದಿಗೆ ಸೇರಿಕೊಂಡು, ರಾಯಣ್ಣನನ್ನು ಹಿಡಿದುಕೊಡುವ ಪೂರ್ವ ಯೋಜನೆಯನ್ನು ಹಾಕಿಕೊಂರು. ಇವರಿಬ್ಬರ ಜೊತೆ ಕೃಷ್ಣರಾನುನು ಬ್ರಿಟಿಷ್ ಸೈನ್ಯವನ್ನು ಕಳುಹಿಸಿದನು. ರಾಯಣ್ಣ ಇವರಿಬ್ಬರ ಮೇಲೆ ನಂಬಿಕೆಯಿಟ್ಟು ತನ್ನ ತಂಡದೊಂದಿಗೆ ಸೇರಿಸಿಕೊಂಡನು. ರಾಯಣ್ಣನು ಮಾಡುತ್ತಿದ್ದ ಕೆಲ ದಾಳಿಗಳಲ್ಲಿ ಇವರು ರಾಯಣ್ಣನನ್ನು ನಂಬಿಸಲು ದಾಳಿಗಳಲ್ಲಿ ಭಾಗವಹಿಸುವ ಹಾಗೆ ಕಪಟ ನಾಟಕವಾಡಿದರು.

ಗೌಡರಿಬ್ಬರು ರಾಯಣ್ಣನನ್ನು ಹಿಡಿದುಕೊಡುವುದಕ್ಕೆ ಒಪ್ಪಿದ ನಂತರ ನೇಗಿನಹಾಳದ ಲಿಂಗನಗೌಡನ ಹಳಬನಾದ ಲಕ್ಕಪ್ಪನನ್ನು ತಮ್ಮೊಂದಿಗೆ ಸೇರಿಕೊಳ್ಳಲು ಹೇಳಿದರು. ಲಕ್ಕಪ್ಪ ಒಪ್ಪದಿದ್ದಾಗ ಹೆದರಿಸಿ ರಾಯಣ್ಣನನ್ನು ಹಿಡುದು ಕೊಡುವುದಕ್ಕೆ ಒಪ್ಪಿಸಿದರು. ಲಕ್ಕಪ್ಪ ರಾಯಣ್ಣನ ಸಂಬಂಧಿಯಾಗಿದ್ದರಿಂದ ತಮ್ಮ ಕೆಲಸ ಸುಲಬವಾಗುತ್ತದೆಂದು ಗೌಡರಿಬ್ಬರು ಲಕ್ಕಪ್ಪನನ್ನು ಅಸ್ತ್ರವನ್ನಾಗಿ ಬಳಸಿದರು.

ರಾಯಣ್ಣನ ಕೊನೆಯ ದಾಳಿ ಗಿಡದ ಹುಬ್ಬಳ್ಳಿಯ ಮೇಲೆ ಮಾಡಿದ ದಾಳಿಯಾಗಿದೆ. ಈ ದಾಳಿಯಲ್ಲಿ ಲಿಂಗನಗೌಡ ಹಾಗೂ ವೆಂಕನಗೌಡರೂ ಭಾಗವಹಿಸಿದ್ದರು. ಈ ದಾಳಿಯ ನಂತರ ರಾಯಣ್ಣನು ತನ್ನ ಅಡಗು ತಾಣಕ್ಕೆ ಹೋಗುವಾಗ ಗೌಡರಿಬ್ಬರೂ ಹಳ್ಳದಲ್ಲಿ ಸ್ನಾನ ಮಾಡಿಕೊಂಡು ಹೋಗುವುದೆಂದು ಹೇಳಿ ರಾಯಣ್ಣನನ್ನು ಹಿಂದೆ ಕರೆದುಕೊಂಡು ಹೊರಟರು. ಮೊದಲೆ ಸಂಚು ರೂಪಿಸಿಕೊಂಡು ಬಂದಿದ್ದ ಇವರಿಗೆ ಸ್ನಾನ ಮಾಡುವ ಸಮಯವೇ ರಾಯಣ್ಣನನ್ನು ಹಿಡಿಯಲು ಸೂಕ್ತ ಸಮಯವೆಂದು ಭಾವಿಸಿ, ಮೊದಲೆ ಸಂಚು ರೂಪಿಸಿಕೊಂಡು ಬಂದಂತೆ ತನ್ನ ಸೈನ್ಯವನ್ನು ಗಿಡ, ಮರ, ಪೊದೆಗಳಲ್ಲಿ ಕುಳಿತಿರಲು ಹೇಳಿ ಸ್ನಾನ ಮಾಡುವಾಗ ರಾಯಣ್ಣನಲ್ಲಿದ್ದ ಕತ್ತಿಯನ್ನು ಉಪಾಯವಾಗಿ ತೆಗೆದುಕೊಂಡು, ತನ್ನವರನ್ನು ಕರೆಯಿಸಿಕೊಂಡರು ನಿರಾಯುಧನಾಗಿದ್ದ ರಾಯಣ್ಣನ ಮೇಲೆ ಮುಗಿಬಿದ್ದು ಹಿಡಿದು ಕಟ್ಟಿದರು. ಹೀಗೆ ಮೋಸದ ಮೂಲಕ ರಾಯಣ್ಣನನ್ನು ಹಿಡಿದ

ನಂತರ ಲಕ್ಕಪ್ಪ ರಾಯಣ್ಣನ ಖಡ್ಗವನ್ನು ತೆಗೆದುಕೊಂಡು ಹೋಗಿ ರಾಯಣ್ಣನ ಸಂಗಡಿಗರಿಗೆ ತೋರಿಸಿ ಬ್ರಿಟಿಷರ ಸೈನ್ಯ ರಾಯಣ್ಣನನ್ನು ಹಿಡಿದುಕೊಂಡು ಹೋದರು. ರಾಯಣ್ಣ ನೀವು ತಪ್ಪಿಸಿಕೊಳ್ಳಬೇಕೆಂದು ಖಡ್ಗಕೊಟ್ಟಿರುವುದಾಗಿ ಹೇಳಿ ತೋರಿಸಿದನು. ಇದನ್ನು ಕಂಡ ರಾಯಣ್ಣನ ಸಂಗಡಿಗರು ಚಲ್ಲಾಪಿಲ್ಲಿಯಾಗಿ ಅರಣ್ಯದೊಳಗೆ ಓಡಿಹೋದರು. ಮತ್ತೆ ಕೆಲವರು ತಾವಾಗಿಯೇ ಬಂದು ಶರಣಾದರು.

ರಾಯಣ್ಣನ ಹಿಡಿದ ಸುದ್ಧಿ ಕಿತ್ತೂರಿನಾದ್ಯಂತ ತಿಳಿಯಿತು. ಕಿತ್ತೂರಿನ ಜನತೆ ದುಃಖಿತರಾದರು. ರಾಯಣ್ಣನನ್ನು ಧಾರವಾಡದ ಸೆರೆಮನೆಗೆ ಹಾಕಿ ವಿಚಾರಣೆಯನ್ನು ಮಾಡತೊಡಗಿದರು. ರಾಜದ್ರೋಹ, ಬಂಡುಕೋರ, ಸುಲಿಗೆ ಮಾಡಿದವನ ಹೀಗೆ ಅನೇಕ ಆರೋಪಗಳನ್ನು ರಾಯಣ್ಣನ ಮೇಲೆ ಹೇರಿ ವಿಚಾರಣೆಯ ನಾಟಕವಾಡಿ ಗಲ್ಲು ಶಿಕ್ಷೆಯನ್ನು ವಿಧಿಸಿರು. ರಾಯಣ್ಣನ ಜೊತೆಗೆ ೧೨ ಜನರನ್ನು ಬಂದಿಸಿ ಉಳಿದವರನ್ನು ಬಿಡುಗಡೆಗೊಳಿಸಿದರು. ರಾಯಣ್ಣ ಹಾಗೂ ಆರು ಜನರಿಗೆ ಗಲ್ಲು ಶಿಕ್ಷೆಯನ್ನು, ಇನ್ನೂಳಿದ ಆರು ಜನರಿಗೆ ಕರಿನೀರಿನ ಶಿಕ್ಷೆಯನ್ನು ವಿಧಿಸಿದರು.

**ರಾಯಣ್ಣನೊಂದಿಗೆ ಗಲ್ಲು ಶಿಕ್ಷೆಗೆ ಒಳಪಟ್ಟವರ ಹೆಸರುಗಳು ಈ ಕೆಳಗಿನಂತಿವೆ.**

**ಮರಣ ದಂಡನೆಗೆ ಒಳಪಟ್ಟವರು"**[೧೧]

| | ಹೆಸರು | ವಯಸ್ಸು | ಜಾತಿ | ಊರು |
|---|---|---|---|---|
| ೧. | ರಾಯಣ್ಣ ಬ ರೋಗಣ್ಣವರ | ೩೫ | ಕುರುಬ | ಸಂಗೊಳ್ಳಿ |
| ೨. | ಬಾಳನಾಯಕ ಮಲನಾಯಕ | ೫೦ | ಬೇಡ | ಬಸ್ತವಾಡ |
| ೩. | ಬಸಲಿಂಗಪ್ಪ | ೩೦ | ಲಿಂಗಾಯತ | ಹಣಬರಟ್ಟಿ |
| ೪. | ಕರಬಸಪ್ಪ | ೪೦ | ಲಿಂಗಾಯತ | ಬೆಳವಡಿ |
| ೫. | ಭೀಮಾ ಜಿಡ್ಡಿಮನಿ | ೪೦ | ಬೇಡ | ಹೊಗರ್ತಿ |
| ೬. | ಕೆಂಚಪ್ಪ | ೩೦ | ಬೇಡ | ಸಂಗ್ರೇಶಕೊಪ್ಪ |
| ೭. | ಅಪ್ಪೋಜಿ ನಾಯಕ | ೩೦ | ಬೇಡ | ಸುತಗಟ್ಟಿ |

**ಜೀವಾವಧಿಯ ಕರಿನೀರ ಶಿಕ್ಷೆಗೊಳಪಟ್ಟವರು**

| | ಹೆಸರು | ವಯಸ್ಸು | ಜಾತಿ | ಊರು |
|---|---|---|---|---|
| ೧. | ರುದ್ರನಾಯಕ ನೀಲನಾಯಕ | ೫೦ | ಬೇಡ | ಬೆಳವಡಿ |
| ೨. | ಯಲ್ಲನಾಯಕ | ೪೦ | ಬೇಡ | ಬೆಳವಡಿ |
| ೩. | ಅಪ್ಪೋಣಿ | ೪೦ | ಮುಸ್ಲಿಂ | ತಿಗಡೊಳ್ಳಿ |
| ೪. | ರಾಣೋಜಿ ಕೊಂಡ | ೩೦ | ಮರಾಠಾ | ಮಜ್ಜಿಗವಾಡ |
| ೫. | ಕೊನೇರಿ | ೪೦ | ನಾರ್ವೇಕರ | ತೋಪಿನಟ್ಟಿ |
| ೬. | ನೇಮಣ್ಣ | ೪೦ | ಜೈನ | ಕೊಡಚವಾಡ |

ರಾಯಣ್ಣನ ದಾಳಿಗಳು ನಂದಗಡದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡು ಬಂದಿದ್ದರಿಂದ ಮತ್ತೆ ಯಾರು ಹೋರಾಟ ಮಾಡಬಾರದೆಂಬ ಕಾರಣಕ್ಕಾಗಿ ರಾಯಣ್ಣನ್ನು ನಂದಗಡದಲ್ಲಿ ದಿನಾಂಕ ೨೬.೧.೧೮೩೧ ರಂದು ಗಲ್ಲಿಗೇರಿಸಲಾಯಿತು. ಸನ್ಯಾಸಿವೇಶದಲ್ಲಿ ತಲೆಮರೆಸಿಕೊಂಡಿದ್ದ ರಾಯಣ್ಣನ ಆಪ್ತ ಸ್ನೇಹಿತ ಬಿಚ್ಚುಗತ್ತಿ ಚೆನ್ನಬಸವ ರಾಯಣ್ಣನ ಸಮಾಧಿಯ ಮೇಲೆ ಒಂದು ಆಲದ ಮರವನ್ನು ನೆಟ್ಟನು. ದಿನಗಳೆದಂತೆ ಜನರು ರಾಯಣ್ಣನನ್ನು ಪೂಜಿಸತೊಡಗಿದರು. ಮಕ್ಕಳಾಗದವರು ಹರಕೆಯನ್ನು ಹೊತ್ತು ನಮಗೆ ರಾಯಣ್ಣನಂತಹ ಮಗುವಾಗಲೆಂದು ತೊಟ್ಟಿಲುಗಳನ್ನು ಕಟ್ಟಿ ಪೂಜಿಸತೊಡಗಿದರು. ಹೀಗೆ, ಒಬ್ಬ ಸಾಮಾನ್ಯನಾದ ರಾಯಣ್ಣನು ಹೋರಾಡಿ ಕಿತ್ತೂರು ಸೇರಿದಂತೆ ನಾಡಿನ ಮನೆ ಮನೆಯವರಿಗೆ ಚಿರಪರಿಚಿತನಾಗಿ ನಂತರ ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ಕರ್ನಾಟಕದ ಜನತೆಗೆ ಸ್ಫೂರ್ತಿಯಾಗಿ ರಾಯಣ್ಣನು ಅಮರನಾಗಿದ್ದಾನೆ. ಜನತೆಯು ರಾಯಣ್ಣನನ್ನು ದೈವತ್ವಕ್ಕೇರಿಸಿ ಪೂಜೆಮಾಡುತ್ತಿದ್ದಾರೆ. ಹಾಗೂ ಜಾತ್ರೆ, ಉತ್ಸವವನ್ನು ಪ್ರತಿವರ್ಷ ಮಾಡಿಕೊಂಡು ಬರುತ್ತಿರುವುದನ್ನು ಕಾಣುತ್ತೇವೆ.

**ಅಡಿ ಟಿಪ್ಪಣಿಗಳು**


೧. ಎನ್.ಪಿ. ಶಂಕರನಾರಾಯಣ, ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ಪುಟ-೪೨

೨. ಬಸವರಾಜ ಕಮತ, ಸಂಗೊಳ್ಳಿ ಬಂಡಾಯ ಚರಿತ್ರೆ ಮತ್ತು ಜಾನಪದ ನೆಲೆಯಲ್ಲಿ, ಪುಟ- ೫೬

೩. ಅ.ನ. ಕೃಷ್ಣರಾಯ, ಕಿತ್ತೂರು ರಾಣಿ ಚೆನ್ನಮ್ಮ, ಪುಟ-೧೩

೪. ಜ್ಯೋತಿ ಹೊಸುರ, ಸಂಗೊಳ್ಳಿ ರಾಯಣ್ಣ, ಚರಿತ್ರೆ ಸಂಶೋಧನೆ, ಪುಟ-೨೪

೫. ನಿಂಗಣ್ಣ ಸಣ್ಣಕ್ಕಿ, ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ, ಪುಟ-೨೪

೬. ಡಿ.ಎನ್. ಯೋಗಿಶ್ವರಪ್ಪ, ಕನ್ನಡಿಗರ ಬ್ರಿಟೀಷ್ ವಿರೋಧಿ ಸಶಸ್ತ್ರ ಬಂಡಾಯಗಳು, ಪುಟ-೧೧

೭. ತಿ.ತಾ. ಶರ್ಮ, ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ಪುಟ-೩೮

೮. ಶಶಿಕಾಂತ ಪಡಸಲಗಿ, ಸ. ರಾ. ಸುಳಕೂಡೆ, ಕಿತ್ತೂರು ಕಲಿಗಳು ಮತ್ತು ಸ್ವಾತಂತ್ರ್ಯ ಸಂಗ್ರಾಮ, ಪುಟ - ೬೬

೯. ಡಿ.ಎನ್. ಯೋಗಿಶ್ವರಪ್ಪ, ಕನ್ನಡಿಗರ ಬ್ರಿಟಿಷ್ ವಿರೋಧಿ ಸಶಸ್ತ್ರ ಬಂಡಾಯಗಳು, ಪುಟ-೧೭

೧೦. ಜ್ಯೋತಿ ಹೊಸೂರ, ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ, ಪುಟ-೯೪

೧೧. ಬಸವರಾಜ ಕಮತ, ಸಂಗೊಳ್ಳಿ ಬಂಡಾಯ ಚರಿತ್ರೆ ಮತ್ತು ಜಾನಪದ ನೆಲೆಯಲ್ಲಿ, ಪುಟ, ೪೭.

* * *

## ಅಧ್ಯಾಯ : ಮೂರು

# ಸಂಗೊಳ್ಳಿ ರಾಯಣ್ಣ : ನಾಟಕ ಸಾಹಿತ್ಯ

ಭಾರತಕ್ಕೆ ವ್ಯಾಪಾರಕ್ಕೆಂದು ಬಂದಂತಹ ವಿದೇಶಿಯರು ಸ್ಥಳೀಯರಲ್ಲಿನ ಲಾಭವನ್ನು ಪಡೆದುಕೊಂಡು ಭಾರತದಾದ್ಯಂತ ಅಧಿಕಾರವನ್ನು ಸ್ಥಾಪಿಸಿದರು. ಕ್ರೈಸ್ತ ಧರ್ಮದ ಪ್ರಚಾರಕ್ಕಾಗಿ ಸ್ಥಳೀಯ ಭಾಷೆಗಳನ್ನು ಕಲಿತು ಧರ್ಮ ಪ್ರಚಾರ ಮಾಡತೊಡಗಿದರು. ಇದರ ಜೊತೆಗೆ ಯುರೋಪಿನಲ್ಲಿ ನಡೆದಂತಹ ಕೈಗಾರಿಕಾ ಕ್ರಾಂತಿ ಹಾಗೂ ಆಧುನಿಕ ಶಿಕ್ಷಣ ಪಡೆದ ಭಾರತೀಯರಲ್ಲಿ ತಮ್ಮ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಹೋರಾಟ ಮಾಡುವಂತಹ, ಪ್ರತಿಭಟಿಸುವಂತಹ, ಅಸಹಕಾರ ಚಳುವಳಿಗಳಂತಹ ಹೋರಾಟಗಳಲ್ಲಿ ಭಾರತೀಯರು ಹೋರಾಟ ಮಾಡಿರುವುದನ್ನು ಕಾಣುತ್ತೇವೆ.

ಆರಂಭದಲ್ಲಿ ನಾಟಕ ಸಾಹಿತ್ಯವು ಐತಿಹಾಸಿಕ ನಾಟಕಗಳಿಗಿಂತ ಹೆಚ್ಚಾಗಿ ಪೌರಾಣಿಕ ನಾಟಕಗಳಿಗೆ ಹೆಚ್ಚಿನ ಮಹತ್ವವನ್ನು ಕೊಟ್ಟಿರುವುದು ಕಂಡುಬರುತ್ತದೆ. ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನಿಟ್ಟುಕೊಂಡು ಕನ್ನಡದಲ್ಲಿ ನಾಟಕಗಳು ರಚನೆಯಾದವು. ಐತಿಹಾಸಿಕ ನಾಟಕಗಳನ್ನು ರಚಿಸುವಾಗ ನಾಟಕಕಾರರು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ವ್ಯಕ್ತಿಯ, ವಸ್ತುವಿನ, ನಾಡು, ನುಡಿಯ ಬಗ್ಗೆ ಪೂರ್ಣ ಮಾಹಿತಿಯನ್ನು ಪಡೆದುಕೊಂಡು ನಾಟಕದ ರಚನೆಯನ್ನು ಮಾಡಬೇಕಾಗುತ್ತದೆ. "ಐತಿಹಾಸಿಕ ನಾಟಕಗಳು ತಡವಾದರು ವೃತ್ತಿ ರಂಗಭೂಮಿಯ ಮೇಲೆ ಕಾಣಿಸಿಕೊಂಡು ನಮ್ಮ ಜನತೆಯಲ್ಲಿ ನಾಡಾಭಿಮಾನ, ದೇಶಾಭಿಮಾನ, ಭಾಷಾಭಿಮಾನವನ್ನು, ಧರ್ಮಾಭಿಮಾನವನ್ನು ಪ್ರಚಾರಪಡಿಸಿ ಸ್ವಾತಂತ್ರ್ಯ ಚಳುವಳಿಯಲ್ಲಿ ದುಮುಕುವಂತೆ ಜನತೆಯನ್ನು ಹುರಿದುಂಬಿಸಿದವು. ಈ ದಿಸೆಯಲ್ಲಿ ಕಿತ್ತೂರ ಚೆನ್ನಮ್ಮ, ರಾಣಿ ರುದ್ರಮ್ಮ, ಟಿಪ್ಪು ಸುಲ್ತಾನ, ಸಂಗೊಳ್ಳಿ ರಾಯಣ್ಣ, ನರಗುಂದ ಬಾಬಾಸಾಹೇಬ, ಎಚ್ಚಮ್ಮನಾಯಕ ನಾಟಕಗಳು ರಂಗಭೂಮಿಯಲ್ಲಿ ಮಾಡಿದ ಕ್ರಾಂತಿ ಸಾಮಾನ್ಯವಾದುದಲ್ಲ."[೧] ಭಾರತದ ಸ್ವಾತಂತ್ರ್ಯ ಹೋರಾಟಗಾರರಿಗೆ ಇವರ ಹೋರಾಟಗಳು ಸ್ಫೂರ್ತಿಯಾಗಿದ್ದವು.

ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದಂತಹ ವೀರರ ಚರಿತ್ರೆಯನ್ನು ಆಧಾರವಾಗಿಟ್ಟುಕೊಂಡು ನಾಟಕಗಳನ್ನು ರಚಿಸಿ, ಜನರಿಗೆ ಸ್ವಾತಂತ್ರಕ್ಕಾಗಿ ನಾವೆಲ್ಲರೂ ಒಂದಾಗಬೇಕು ಎಂದು ಸಂದೇಶಗಳನ್ನು ಮುಟ್ಟಿಸುವ ಮಾಧ್ಯಮಗಳಲ್ಲಿ ನಾಟಕ ಪ್ರಮುಖವಾದುದು. ನಾಟಕಗಳ ಬರವಣಿಗೆಯ ಜೊತೆಗೆ ನಾಟಕಗಳನ್ನು ಪ್ರದರ್ಶಿಸಿ ಜನರಲ್ಲಿ ಸ್ವಾತಂತ್ರ್ಯಕ್ಕಾಗಿ ಜಾಗೃತಿಯನ್ನು ಮೂಡಿಸಿದರು. ನಾಟಕವೆಂದರೆ ಎಂದೂ ಒಮ್ಮೆ ನೋಡಿ ಮರೆತು ಬಿಡುವ ವಿಲಾಸ ಸಾಧನವಲ್ಲ, ನಾಟಕದ ಆದರ್ಶ ಭವ್ಯವಾದದ್ದು ಗುರುತರವಾದದು. ದೇಶದ ಸಂಸ್ಕೃತಿಯ ವಿಕಾಸನಕ್ಕೆ ನಾಟಕವು ಕೊಡುವಷ್ಟು ಇಂಬು ಬೇರೆ ಯಾವ ಸಾಧನವೂ ಕೊಡುವುದು ಸಾಧ್ಯವಿಲ್ಲ. ನಾಟಕವು ಮನಸ್ಸನ್ನು ಮುದಗೊಳಿಸುತ್ತದೆ. ವಿಚಾರದ ಹಾದಿಯಲ್ಲಿ ಮಾನವನ ವಿಕಾಸವನ್ನು ಸಾಧಿಸುವುದೇ ನಾಟಕ. ಭಾವನೆಗಳಿಂದ ತುಂಬಿ ತುಳುಕುವುದೇ ನಾಟಕ. ಎಂದು ಶ್ಯಾಮಸುಂದರ ಬಿದರಕುಂದಿ ಅವರ ಮಾತುಗಳು ನಾಟಕದ ವೈಶಿಷ್ಟ್ಯವನ್ನು ಹೇಳುತ್ತವೆ.

ಇತಿಹಾಸದ ವಸ್ತುವನ್ನು ಇಟ್ಟುಕೊಂಡು ಸಾಹಿತ್ಯದಲ್ಲಿ ನಾಟಕ, ಕಥೆ, ಕಾದಂಬರಿಗಳು ರಚನೆಗಳಾಗುತ್ತಿವೆ. ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರರ ಜೀವನ ಚರಿತ್ರೆಯನ್ನು ಆಧಾರವಾಗಿಟ್ಟುಕೊಂಡು ನಾಟಕಗಳು ಬಂದಿರುವುದನ್ನು ಕಾಣುತ್ತೇವೆ. ಇತಿಹಾಸದ ಕಥಾ ವಸ್ತುವನ್ನು ಆಧಾರವಾಗಿಟ್ಟುಕೊಂಡು ಸಮಕಾಲೀನ ಸಂದರ್ಭಕ್ಕೆ ಅಂದಿನ ಕಾಲದ ಸನ್ನಿವೇಶವನ್ನು ಬಿತ್ತರಿಸುವ ಹಲವಾರು ಮಾಧ್ಯಮಗಳಲ್ಲಿ ನಾಟಕವೂ ಒಂದಾಗಿದೆ. ಗತಕಾಲದಲ್ಲಿ ನಡೆದಂತಹ ಚಾರಿತ್ರಿಕ ಘಟನೆಗಳನ್ನು ಬಳಸಿಕೊಂಡು ನಾಟಕಗಳು ರಚನೆಗೊಳ್ಳುತ್ತವೆ. ನಾಟಕಗಳು ಅಂದಿನ ಕಾಲದ ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಮುಂತಾದ ಅಂಶಗಳನ್ನು ತಿಳಿಯಲು ಸಹಾಯಕವಾಗುತ್ತದೆ.

ಘಟನೆಯು ನಟನೆಯಾದಾಗ ನಾಟಕವಾಗುತ್ತದೆ. ನಮ್ಮಲ್ಲಿ ಭಾರತೀಯ ಮಹಾಕಾವ್ಯಗಳೆಂದು ಕರೆಯುವ, ಕರೆಯುತ್ತಿರುವ ರಾಮಾಯಣ, ಮಹಾಭಾರತಗಳು ಆರಂಭ ಕಾಲದಲ್ಲಿ ಇವುಗಳನ್ನು ಇಟ್ಟುಕೊಂಡು ನಾಟಕಗಳು ರಚನೆಯಾದವು. ನಂತರದ ಕಾಲದಲ್ಲಿ ಸಾಮಾಜಿಕ, ಐತಿಹಾಸಿಕ ಕೌಟುಂಬಿಕ ನಾಟಕಗಳು ರಚನೆಗೊಂಡವು. ಆರಂಭಕಾಲದಲ್ಲಿ ನಾಟಕಗಳು ಕೇವಲ ಮನರಂಜನೆಯ ಸಾಧನಗಳಾಗಿ ಗ್ರಾಮೀಣ ಪ್ರದೇಶಗಳಲ್ಲಿ ಜಾತ್ರೆ, ಉತ್ಸವ, ಹಬ್ಬ ಹರಿದಿನಗಳಲ್ಲಿ ತಮ್ಮ ಸಂತೋಷಕ್ಕಾಗಿ ಆಡುತ್ತಿದ್ದರು. ಈ ನಾಟಕಗಳು ಕಾಲದಿಂದ ಕಾಲಕ್ಕೆ ಬದಲಾವಣೆಗೊಂಡು ಮುಂದುವರೆಯುತ್ತಿವೆ.

ಸಾಹಿತ್ಯ ಪ್ರಕಾರಗಳಲ್ಲಿ ನಾಟಕವು ಸಮಾಜದಲ್ಲಿ ನಡೆಯುವ ಘಟನೆಗಳೊಂದಿಗೆ ಚಿತ್ರಿತವಾಗಿರುತ್ತದೆ. ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಹೋರಾಟ ಮಾಡಿದಂತಹ ವೀರರನ್ನು ಸ್ಫೂರ್ತಿಯಾಗಿ ಇಟ್ಟುಕೊಂಡು ಹಲವಾರು ನಾಟಕಗಳು ರಚನೆಯಾಗಿರುವುದನ್ನು ಕಾಣುತ್ತೇವೆ. ಭಾರತದ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ನಾಟಕದ ಪಾತ್ರ ತುಂಬಾ ಮಹತ್ವದ್ದಾಗಿದೆ. ಕನ್ನಡದಲ್ಲಿ ಐತಿಹಾಸಿಕ ನಾಟಕಗಳನ್ನು ರಚಿಸಿದವರಲ್ಲಿ ಸಂಸ ಅವರು ಅಗ್ರಮಾನ್ಯರು.

೧೮೫೭ರ ಭಾರತೀಯ ಸ್ವಾತಂತ್ರ್ಯ ಸಂಗ್ರಾಮಕ್ಕಿಂತ ಪೂರ್ವದಲ್ಲಿ ಬ್ರಿಟಿಷರ ವಿರುದ್ಧ ಅನೇಕ ಹೋರಾಟಗಳು ನಡೆದಿರುವುದು ಕಂಡುಬರುತ್ತದೆ. ಈ ಹೋರಾಟಗಳು ತಮ್ಮ ತಮ್ಮ ರಾಜ್ಯಗಳನ್ನು, ಸಂಸ್ಥಾನಗಳನ್ನು ಪಡೆಯುವುದಕ್ಕಾಗಿ ಮಾಡಿದಂತಹ ಹೋರಾಟಗಳಾಗಿದ್ದರು ಸಹ ಬ್ರಿಟಿಷರಿಂದ ಸ್ವಾತಂತ್ರ್ಯಕ್ಕಾಗಿ ಮಾಡಿದಂತಹ ಹೋರಾಟಗಳಾಗಿವೆ. ಹೈದರಾಲಿ, ಟಿಪ್ಪು ಸುಲ್ತಾನ್, ಕಿತ್ತೂರು ರಾಣಿ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ನರಗುಂದದ ಬಾಬಾಸಾಹೇಬ, ಸುರಪುರ ವೆಂಕಟಪ್ಪ ನಾಯಕರಲ್ಲದೆ ಇನ್ನೂ ಹಲವಾರು ಸಂಸ್ಥಾನಗಳು ಬ್ರಿಟಿಷರ ವಿರುದ್ಧ ಹೋರಾಟ ಮಾಡಿರುವುದನ್ನು ಕಾಣುತ್ತೇವೆ. ಈ ಹೋರಾಟಗಳು ತಮ್ಮ ಸಂಸ್ಥಾನದ ಸ್ವಾತಂತ್ರ್ಯಕ್ಕಾಗಿ ಮಾಡಿದಂತಹ ಹೋರಾಟಗಳಾಗಿದ್ದರೂ ಈ ಹೋರಾಟಗಳು ಮುಂದೆ ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಸ್ಫೂರ್ತಿಯಾಗಿವೆ.

ಭಾರತೀಯ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಕಿತ್ತೂರಿನ ಪಾತ್ರ ಅವಿಸ್ಮರಣೀಯವಾಗಿದೆ. ಕಿತ್ತೂರು ಸಂಸ್ಥಾನ ಚಿಕ್ಕ ಸಂಸ್ಥಾನವಾದರೂ ಸಹ ಭಾರತದಾದ್ಯಂತ ಅಧಿಕಾರ ಸ್ಥಾಪಿಸಿದಂತಹ ಬ್ರಿಟಿಷರ ಅಧೀನರಾಗಿರುವುದಕ್ಕೆ ಒಪ್ಪಿರಲಿಲ್ಲ. ಸ್ವಾತಂತ್ರ್ಯ ಸ್ವಾಭಿಮಾನವನ್ನು ಬಿಟ್ಟು ಬದುಕುವುದಿಲ್ಲವೆಂದು ೧೮೨೪ ರಲ್ಲಿ ಬ್ರಿಟಿಷರ ವಿರುದ್ದ ಕೆಚ್ಚೆದೆಯಿಂದ ಹೋರಾಟ ಮಾಡಿದಂತಹ ಸಂಸ್ಥಾನ ಕಿತ್ತೂರು. ಬಲಾಢ್ಯರಾದ ಬ್ರಿಟಿಷರು ಕುತಂತ್ರದ ಮೂಲಕ ಬ್ರಿಟಿಷರು ಕಿತ್ತೂರನ್ನು ವಶಪಡಿಸಿಕೊಳ್ಳುತ್ತಾರೆ. ಕಿತ್ತೂರು ಸಂಸ್ಥಾನದ ಪತನದ ನಂತರವೂ ಕಿತ್ತೂರಿನ ಸಾಮಾನ್ಯ ಸೈನಿಕನೊಬ್ಬ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಬೇಕೆಂದು ಹೋರಾಟ ಮಾಡುತ್ತಾನೆ. ಕಿತ್ತೂರು ಸ್ವಾಭಿಮಾನ ಹಾಗೂ ಸ್ವಾತಂತ್ರ್ಯದಿಂದಿರಬೇಕೆಂದು ರಾಯಣ್ಣನ ನೇತೃತ್ವದಲ್ಲಿ ಅನೇಕ ವೀರರು ಬ್ರಿಟಿಷರ ವಿರುದ್ಧ ಹೋರಾಟ ಮಾಡುತ್ತಾರೆ. ರಾಯಣ್ಣ ಕಿತ್ತೂರು ಸಂಸ್ಥಾನದ ಸಾಮಾನ್ಯ ಸೈನಿಕನಾಗಿದ್ದು, ಕಿತ್ತೂರು ಪತನವಾದಗ ಬ್ರಿಟಿಷರ ಸೆರೆಯಾಳಾಗಿ ಸೆರೆಮನೆ ಸೇರಿದ. ಬ್ರಿಟಿಷರು ಕೆಲವರನ್ನು ಅನುಕಂಪದ ಮೇಲೆ ಬಿಡುಗಡೆಗೊಳಿಸಿದರು. ಅಂಥವರಲ್ಲಿ ರಾಯಣ್ಣ ಬಿಡುಗಡೆ ಹೊಂದಿದನು. ಸೆರೆಮನೆಯಿಂದ ಬಿಡುಗಡೆಗೊಂಡ ಬಳಿಕ ಸಂಗೊಳ್ಳಿಯಲ್ಲಿ ವ್ಯವಸಾಯ ಹಾಗೂ ಮನೆತನದ ವೃತ್ತಿಯಾದ ವಾಲೀಕಾರಿಕೆಯನ್ನು ಮಾಡುತ್ತಾನೆ. ಇದರ ಜೊತೆ-ಜೊತೆಗೆ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಿ ದೇಸಾಯರ ಆಳ್ವಿಕೆಯನ್ನು ಮತ್ತೆ ತರಬೇಕೆಂದು ಬ್ರಿಟಿಷರ ವಿರುದ್ಧ ಗೆರಿಲ್ಲಾ ಯುದ್ಧವನ್ನು ಮಾಡುತ್ತಾನೆ. ರಾಯಣ್ಣನ ಗೆರಿಲ್ಲಾ ಯುದ್ಧದಿಂದ ಬ್ರಿಟಿಷರು ಕಂಗಾಲಾಗುತ್ತಾರೆ. ರಾಯಣ್ಣನನ್ನು ಬಂಧಿಸುವುದು ಬ್ರಿಟಿಷರಿಗೆ ತುಂಬಾ ಕಷ್ಟವಾದಾಗ ನಮ್ಮವರನ್ನೆ ಬಳಸಿಕೊಂಡು ಮೋಸದಿಂದ ರಾಯಣ್ಣನನ್ನು ಹಿಡಿದು ಗಲ್ಲಿಗೇರಿಸುತ್ತಾರೆ.

ಸಂಗೊಳ್ಳಿ ರಾಯಣ್ಣನ ಕುರಿತು ಹಲವಾರು ರೀತಿಯ ಸಾಹಿತ್ಯ ಕೃತಿಗಳು ರಚನೆಯಾಗಿವೆ. ನಾಟಕಗಳು ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ನಾಟಕಗಳ ಪಾತ್ರ ಬಹಳ ಮಹತ್ವದ್ದಾಗಿದೆ. ರಾಯಣ್ಣನ ಕುರಿತು ಹಲವಾರು ನಾಟಕಗಳು ರಚನೆಯಾಗಿವೆ. ಈ ನಾಟಕಗಳ ಮೂಲಕ

ಸಂಗೊಳ್ಳಿ ರಾಯಣ್ಣನ ಬಾಲ್ಯ, ವಿವಾಹ, ಜಾತಿ, ಕಿತ್ತೂರು ಸಂಸ್ಥಾನದಲ್ಲಿ ರಾಯಣ್ಣನ ಪಾತ್ರ, ಕಿತ್ತೂರಿನ ಪತನದ ನಂತರ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಲು ನಡೆಸಿದ ಹೋರಾಟ ಇತ್ಯಾದಿ ಅಂಶಗಳನ್ನು ತಿಳಿಯಲು ಹಾಗೂ ಭಾರತೀಯ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಹೋರಾಟಗಾರರಿಗೆ ರಾಯಣ್ಣ ಸ್ಫೂರ್ತಿಯಾಗಿರುವಂತಹ ಅಂಶಗಳನ್ನು ತಿಳಿಯಲು ನಾಟಕಗಳು ಸಹಾಯಕವಾಗುತ್ತವೆ.

ರಾಯಣ್ಣನ ಕುರಿತು ಬಂದಿರುವಂತಹ ನಾಟಕಗಳಲ್ಲಿ ಹಲವಾರು ಭಿನ್ನತೆಗಳಿರುವುದನ್ನು ನಾವು ಗುರುತಿಸಬಹುದು. ಅದರಲ್ಲಿ ವಿವಾಹ ಮತ್ತು ಮಗನನ್ನು ಕುರಿತು ಹೆಚ್ಚಾಗಿ ಭಿನ್ನತೆಗಳು ಇರುವುದನ್ನು ನಾವು ಕಾಣುತ್ತೇವೆ. 'ಸಂಗೊಳ್ಳಿ ರಾಯಣ್ಣನ ಹೆಂಡತಿಯ ಹೆಸರಿಗೆ ಸಂಬಂಧಿಸಿದಂತೆಯೇ ಹೆಚ್ಚಿನ ವ್ಯತ್ಯಾಸಗಳು ತೋರುತ್ತವೆ. ಇವುಗಳಲ್ಲದೆ ರಾಯಣ್ಣನಿಗೆ ಮದುವೆಯೇ ಅಗಿದ್ದಿಲ್ಲವೆಂದಾಗ ಹೆಂಡತಿಯ ಹೆಸರೆಲ್ಲಿಯದೆಂದು ವಾದಿಸಲಾಗುತ್ತದೆ. ಈ ದಿಶೆಯಲ್ಲಿಯ ಪ್ರಸ್ತಾಪಿತ ವ್ಯತ್ಯಾಸಗಳ ಕುರಿತು ಗಮನಿಸಬೇಕಾಗಿದೆ."[೨] ಇಂದು ರಾಯಣ್ಣನ ವಿವಾಹಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ಸೂಕ್ತ ದಾಖಲೆಗಳಿಲ್ಲ. ರಾಯಣ್ಣ ವಿವಾಹವಾಗಿದ್ದರೂ, ರಾಯಣ್ಣನ ಹೋರಾಟದ ಸಂದರ್ಭದಲ್ಲಿ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾಗಿದ್ದರಿಂದ ರಾಯಣ್ಣನನ್ನು ಬೆದರಿಸುವುದುಕ್ಕಾಗಿ ಬ್ರಿಟಿಷರು ಹೆಂಡತಿಯನ್ನು ಅಸ್ತ್ರವನ್ನಾಗಿ ಮಾಡಿಕೊಳ್ಳಬಹುದೆಂದು ನಮ್ಮ ಜನಪದಕಾರರು ರಾಯಣ್ಣನ ಹೆಂಡತಿಯ ಬಗ್ಗೆ ಹೆಚ್ಚಾಗಿ ಪ್ರಸ್ತಾಪ ಮಾಡಿಲ್ಲವೆಂದು ಊಹಿಸಬಹುದು.

ಸಂಗೊಳ್ಳಿ ರಾಯಣ್ಣನ ಕುರಿತ ಎಚ್ ಎನ್ ಹೂಗಾರ ಅವರ 'ಸ್ವಾತಂತ್ರ್ಯ ಹುಲಿ ಸಂಗೊಳ್ಳಿ ರಾಯಣ್ಣ', ಕವಿತಾಕೃಷ್ಣ ಅವರ 'ಸ್ವಾತಂತ್ರ ಹೋರಾಟಗಾರ ಸಂಗೊಳ್ಳಿ ರಾಯಣ್ಣ', ಮೈಸೂರು ಜಯರಾಮ್ ಅವರ 'ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ', ರಾಜಾನಂದ್ ಅವರ 'ಸಂಗೊಳ್ಳಿ ರಾಯಣ್ಣ', ಶಂಕರ ಲಮಾಣಿ ಅವರ 'ಹಾಲುಮತದ ವೀರಗಾಥೆ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ' ರಂಗಸಿಂಹ ಅವರ 'ಸಂಗೊಳ್ಳಿ ರಾಯಣ್ಣ' ಅಬ್ದುಲ್ ಬಷೀರ್ ಅವರ 'ಸಂಗೊಳ್ಳಿ ರಾಯಣ್ಣ' ಜೋಶಿ ಶಿರೀಷ್ ಅವರ 'ಮಿಂಚು' ಚಿಕ್ಕೋಡಿ ಶಿವಲಿಂಗಶಾಸ್ತ್ರಿ ಅವರ ಒಂದೇ ಖಡ್ಗ ನಾಟಕಗಳು ರಚನೆಯಾಗಿವೆ. ಅವುಗಳನ್ನು ಕುರಿತು ಸ್ಥೂಲವಾಗಿ ವಿವೇಚಿಸಲಾಗಿದೆ. ಈ ನಾಟಕಗಳು ಸಂಗೊಳ್ಳಿ ರಾಯಣ್ಣನ ಸಮಗ್ರ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುತ್ತವೆ. ನಾಟಕಗಳಲ್ಲಿ ಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ಸಾಮ್ಯತೆಗಳಿದ್ದರೆ ಇನ್ನೂ ಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ವ್ಯತ್ಯಾಸಗಳಿರುವುದನ್ನು ಕಾಣಬಹುದು. ಆದರೆ ಈ ನಾಟಕಗಳು ರಾಯಣ್ಣನ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುತ್ತದೆ.

**ಸ್ವಾತಂತ್ರ ಹೋರಾಟಗಾರ ಸಂಗೊಳ್ಳಿ ರಾಯಣ್ಣ**

ಕವಿತಾಕೃಷ್ಣ ಅವರ ಪರನಾರಿ ಸಹೋದರ ಮತ್ತು ಇತರ ನಾಟಕಗಳು ಎಂಬ ಕೃತಿಯಲ್ಲಿ 'ಸ್ವಾತಂತ್ರ ಹೋರಾಟಗಾರ ಸಂಗೊಳ್ಳಿ ರಾಯಣ್ಣ' ರಾಯಣ್ಣನ ಕುರಿತ ನಾಟಕವಾಗಿದೆ. ನಾಟಕದ

ಆರಂಭದಲ್ಲಿ ಕನ್ನಡಿಗರ ಶೌರ್ಯ ಸಾಹಸಗಳ ಕುರಿತು ಹಾಗೂ ಕಿತ್ತೂರು ಸಂಸ್ಥಾನ ಎಷ್ಟು ಬಲಿಷ್ಟತೆಯಿಂದ ಕೂಡಿತ್ತು ಎನ್ನುವುದಕ್ಕೆ 'ಅಯ್ಯೋ... ಕಿತ್ತೂರು ಕಿರಿಯ ಸಂಸ್ಥಾನ ವಾದರೂ ವಿಜಯನಗರ ಸಾಮ್ರಾಜ್ಯವೆಂಬಂತೆ ಬೆಳಗಿ ಹೇಳ ಹೆಸರಿಲ್ಲದಂತೆ ನಿರ್ನಾಮವಾಯಿತೆ? ಅರಮನೆಯಲ್ಲಿ ಬೇಕಾದ ಕಿತ್ತೂರ ಸಿಂಹಿಣಿ ಬೈಲಹೊಂಗಲದ ಸೆರೆಮನೆಯಲ್ಲಿ ಕೊಳೆಯಬೇಕಾಗಿ ಬಂತೇ? ಆಂಗ್ಲರ ಹಂಗಿನಲ್ಲಿ ಬಿದ್ದು ಹಿಡಿ ಅನ್ನಕ್ಕೆ ಕೈ ಒಡ್ಡುತ್ತಿರುವ ದೃಶ್ಯವನ್ನು ಕಂಡು, ಕಂಡು ನಿನ್ನ ಮಕ್ಕಳೇಕೆ ಮೌನಿಗಳಾದರು? ಅವರ ಕನ್ನಡ ಕಲಿತನ ಎಲ್ಲಿ ಹೋಯಿತು? ಅವರ ಪುರುಷತ್ವ ನುಸಿಯಾಯಿತೆ ಕೆಚ್ಚೆದೆಗಳು ಬೆಚ್ಚಿ ಹೋದವೆ? ಕ್ರಾಂತ್ರಿವೀರರಿಗೆ ಭ್ರಾಂತಿ ಮುಸುಕಿತೆ? ಅಯ್ಯೋ ರಾಯಣ್ಣ, ಕನ್ನಡದ ಕೆನ್ನೆತ್ತರು ನಿನ್ನ ಧಮನಿಧಮನಿಗಳಲ್ಲಿ ಹರಿಯುತ್ತಿರುವಾಗ ನೀನೇ ಜಡವಸ್ತುವಾದೆಯಾ? ಕನ್ನಡಕಲಿ, ಸಮರಸಿಂಹ ಎನಿಸಿಕೊಂಡ ನಿನ್ನ ನಾಡು ನುಡಿ ಪೇಮವೇನಾಯಿತು? ನಿನ್ನ ಕೆಚ್ಚಿಗೆ ಹುಚ್ಚು ಹಿಡಿಯಿತೆ? ರಾಯಣ್ಣ... ಕನ್ನಡಿಗರ ಆಶಾಸ್ವರೂಪನಾದ ನೀನು ಗುಡು ಗುಡಿಸಿ ಬೋರಿಟ್ಟು, ಕಿತ್ತೂರಿಗೆ ನುಗ್ಗಿ ಬ್ರಿಟಿಷರ ಬಗ್ಗು ಬಡಿದು ಸಗ್ಗದ ಹಾದಿ ತೋರಬೇಕಾದವನು ಮೌನಿಯಾದೆಯಾ? ಇದೋ ನಿನ್ನ ಪುರುಷತ್ವಕ್ಕೆ ಧಿಕ್ಕಾರ. ಬ್ರಿಟಿಷರ ಕಾಡುತ್ತಾ ನಾಡ ಮಕ್ಕಳ ಪೊರೆಯುತ್ತಾ ನಾಡಿನಿಂದೇನು, ಸಮಸ್ತ ಭಾರತದಿಂದಲೇ ಅವರನ್ನು ಓಡಿಸುವ ಬದಲು ಕೈ ಕಟ್ಟಿ ನಿಂತಿರುವ ನಿನ್ನ ಬಲಗೂಡಿದ ತೋಳ್‌ಗಳಿಗೆ ಧಿಕ್ಕಾರ. ಸ್ವೇಚ್ಛೆ ಬಂದಂತೆ ಕೆಚ್ಚಿನಿಂದ ಎದುರಾಳಿಗಳು ಮೆಚ್ಚುವಂತೆ ಮೆರೆದಾಡಬೇಕಾದ ಪುರುಷಸಿಂಹ''[೩] ಕಿತ್ತೂರು ಸಂಸ್ಥಾನ ವಿಜಯನಗರ ಸಾಮ್ರಾಜ್ಯದಷ್ಟೆ ಬಲಿಷ್ಠತೆಯಿಂದ ಕೂಡಿತ್ತೆಂದು ಹಾಗೂ ಕನ್ನಡಿಗರ ಸಾಹಸಗಳನ್ನು ಕುರಿತು ಈ ಮೇಲಿನ ಹೇಳಿಕೆಯಿಂದ ಮನವರಿಕೆಯಾಗುತ್ತದೆ.

ಈ ನಾಟಕವು ರಾಯಣ್ಣನ ಕೌಟುಂಬಿಕ ಜೀವನದ ಕುರಿತಾಗಿ ಮತ್ತು ಕಿತ್ತೂರು ಸಂಸ್ಥಾನದ ಕಡೆಗೆ ಹೆಚ್ಚಿನ ಗಮನ ಕೊಡದೆ, ಹೋರಾಟದ ಸಿದ್ಧತೆ ಮತ್ತು ಹೋರಾಟದ ಕುರಿತಂತೆ ಮಾಹಿತಿಯನ್ನು ನೀಡುತ್ತದೆ. ಬಾಳಪ್ಪ ಮತ್ತು ರಾಯಣ್ಣನಿಗೆ ವೈಮನಸ್ಸು ಇರುವುದು ಎಲ್ಲ ಕೃತಿಗಳಲ್ಲಿ ತಿಳಿದು ಬರುತ್ತದೆ. ಬಾಳಪ್ಪ ರಾಯಣ್ಣನನ್ನು ಹಿಂಸಿಸುತ್ತಿದ್ದ ನಿಜ. ಆದರೆ ರಾಯಣ್ಣನ ವಯಸ್ಸಾದ ತಾಯಿ ಕೆಂಚವ್ವಳಿಗೆ ಅವಮಾನ ಹಾಗೂ ಬೆನ್ನಿನ ಮೇಲೆ ಕಲ್ಲನ್ನು ಹೇರಿದ್ದನ್ನು ಕೇಳಿ ರಾಯಣ್ಣ ಬಾಳಪ್ಪನನ್ನ ಕೊಲ್ಲುವುದಕ್ಕೆ ಬರುತ್ತಾನೆ. ಆದರೆ ಭಾಳಪ್ಪನ ಹೆಂಡತಿಯು ಪತಿ ಭೀಕ್ಷೆಯನ್ನು ಬೇಡಿದ್ದಕ್ಕೆ ಕುಲಕರ್ಣಿಗೆ ಕೊನೆಯ ಎಚ್ಚರಿಕೆಯನ್ನು ಕೊಟ್ಟು ಸಂಗೊಳ್ಳಿಯನ್ನು ತೊರೆಯುತ್ತಾನೆ. ಆದರೆ ಈ ನಾಟಕದಲ್ಲಿ ರಾಯಣ್ಣನು ಸಂಗೊಳ್ಳಿ ಕುಲಕರ್ಣಿ ಬಾಳಪ್ಪನನ್ನು ಕೊಂದನೆಂದು, ಬಾಳಪ್ಪನ ಮಗ ವೀರಪ್ಪನ ಚಿತ್ರಣವನ್ನು ನೀಡಿದ್ದಾರೆ. ಶಂಭಯ್ಯ ಮತ್ತು ವೀರಪ್ಪರ ಸಂಭಾಷಣೆಯಲ್ಲಿ 'ವೀರಪ್ಪ ಅಂದರೆ ನಮ್ಮ ಶಾನುಭೋಗ. ಮನೆತನದ ಗುಲಾಮನಾಗಿರಬೇಕಾಗಿದ್ದ ರಾಯಣ್ಣ ಸರದಾರನಾಗಲು ಯತ್ನಿಸಿದ ಅದನ್ನು ಕಂಡು ಬುದ್ಧಿ ಹೇಳಲು ಹೋದ ನನ್ನ ತಂದೆಯ ರುಂಡವನ್ನೇ ಚಂಡಾಡಿದ. ನಿರಪರಾಧಿ ತಂದೆಯ ಜೀವ ತೆಗೆದ ನಂರಾಂತಕನಿಗೆ ನಾನು

ಸರಿಯಾಗಿ ಬುದ್ಧಿ ಕಲಿಸಬೇಕೆ? ಬ್ಯಾಡವೇ.?[೪] ಬಾಳಪ್ಪನನ್ನು ಕೊಂದಿರುವುದಕ್ಕೆ ಕಾರಣ ರಾಯಣ್ಣನಿಗೆ ಬುದ್ದಿ ಹೇಳುವುದಕ್ಕೆ ಬಂದಿದ್ದರಿಂದ ಕೊಂದಿದ್ದಾನೆಂದು ಹೇಳಿದ್ದಾರೆ. ನಾಟಕಕಾರರು ಅಂದಿನ ಜನಜೀವನದ ಕುರಿತು ಹೇಳುತ್ತಾ ಅಂದಿನ ಆಚರಣೆ ನಂಬಿಕೆ ಧಾರ್ಮಿಕ ನಂಬಿಕೆಗಳು ಜನಸಾಮಾನ್ಯರಲ್ಲಿ ಯಾವ ರೀತಿಯಲ್ಲಿದ್ದವು ಎನ್ನುವುದನ್ನು, ಸೆರೆಮನೆಯ ಕಾವಲುಗಾರ ಹನುಮಣ್ಣನ ಮೂಲಕ ಚಿತ್ರಿಸಲು ಪ್ರಯತ್ನಿಸಿದ್ದಾರೆ. ರಾಯಣ್ಣನಲ್ಲಿ ವೀರಗುಣ ಮತ್ತು ಮಾನವೀಯ ಗುಣವನ್ನು ಕಾಣಬಹುದು. ಲಕ್ಕಪ್ಪಗೌಡ ಸಂಚಿನಿಂದ ರಾಯಣ್ಣನನ್ನು ಕೊಲ್ಲಲು ಬಂದಾಗ ಇಬ್ಬರ ನಡುವೆ ಕದನವಾಗುತ್ತದೆ. ನಿರಾಯುಧನಾದಾಗ ರಾಯಣ್ಣ ಅವನನ್ನು ಕ್ಷಮಿಸಿ ಹೋಗಲು ಹೇಳುತ್ತಾನೆ. ಇದೇ ರಾಯಣ್ಣನಲ್ಲಿ ಗುರುವಯ್ಯಾ ತಂದಂತಹ ಸಮಾಚಾರ ೬೦ ಜನ ಪಿರಂಗಿ ಸೈನಿಕರು ಬಂದಿರುವ ವಿಷಯವನ್ನು ಹೇಳಿದಾಗ. ಚನ್ನಬಸವ 'ಅವುದೆ? ಅವರೆಲ್ಲರನ್ನು ಒಂದೇ ಕೊಣೆಗೆ ಕೂಡಿ ಬೆಂಕಿ ಇಟ್ಟು ಬಿಡಿ ಅವರ ಮಾರಣ ಹೋಮದಿಂದಲಾದರೂ ನಾಡದೇವಿಗೆ ನೆಮ್ಮದಿಯಾಗಲಿ.'[೫] ಎಂದು ಹೇಳಿದಾಗ ರಾಯಣ್ಣ ಚೆನ್ನಬಸವನ ಮಾತಿಗೆ ಯಾವುದೇ ರೀತಿಯ ಪ್ರತಿಕ್ರಿಯೆ ನೀಡದೆ ಇರುವುದು ಕಂಡುಬರುತ್ತದೆ.

ರಾಯಣ್ಣನು ಕಿತ್ತೂರು ಸಂಸ್ಥಾನವನ್ನು ಮತ್ತೆ ಸ್ವಾತಂತ್ರ್ಯಗೊಳಿಸಬೇಕೆಂದು ಹೋರಾಟವನ್ನು ಮಾಡಿದನು. ಆದರೆ ಬ್ರಿಟಿಷರ ವಶದಲ್ಲಿರುವ ಯಾವುದೇ ಪ್ರದೇಶವನ್ನು ರಾಯಣ್ಣನು ವಶಪಡಿಸಿಕೊಂಡಿರಲಿಲ್ಲ. ಈ ನಾಟಕದಲ್ಲಿ ರಾಯಣ್ಣನು ಬ್ರಿಟಿಷರ ವಶದಲ್ಲಿದ್ದಂತಹ ಪ್ರದೇಶಗಳನ್ನು ಪಡಿಸಿಕೊಂಡನೆಂದು ಹೇಳಿದ್ದಾರೆ. 'ಚನ್ನಬಸವ ಇನ್ನು ತಡವೇಕೆ ಹಲ್ಯಾಳ ಕೋಟೆ ನಮ್ಮ ತರುಣರ ಸಹಾಯದಿಂದ ಕೈವಶವಾಯಿತು. ಅಲ್ಲಿ ಹಾರಾಡುವ ಪರಂಗಿಯರ ಬಾವುಟ ಇಳಿಸಿ ಕನ್ನಡ ನಾಡಿನ ಕೇತನ ದಿಗಂತದಲ್ಲಿ ಹಾರಿಸಿ."[೬] ರಾಯಣ್ಣನು ಬ್ರಿಟಿಷರ ವಶದಲ್ಲಿದ್ದ ಹಲ್ಯಾಳ ಕೋಟೆಯನ್ನು ವಶಪಡಿಸಿಕೊಂಡು ಕಿತ್ತೂರಿನ ಬಾವುಟ ನಂದಿಧ್ವಜವನ್ನು ಕನ್ನಡಿಗರ ಭಾವುಟವೆಂದು ವರ್ಣಿಸಿರುವುದು ಕಂಡುಬರುತ್ತದೆ. ಈ ನಾಟಕದಲ್ಲಿ ಖೂದನಪುರದ ನಿಂಗನಗೌಡ ಮತ್ತು ನೇಗಿನಹಾಳದ ವೆಂಕನಗೌಡನ ಪಾತ್ರ ಬರುವುದಿಲ್ಲ.

"ಭಾರತಾಂಬೆಯ ಸುತೆಯಾದ ಕನ್ನಾಂಡಾಂಬೆಯ ಕರುಳ ಕುಡಿಗಳೇ, ಇಂದು ಕಿತ್ತೂರಿನ ಇತಿಹಾಸದಲ್ಲಿ ಬರೆದಿಡುವಂತಹ ದಿನ. ನಾಡಾಡಿಗಳಿಂದ ಪರಂಗಿಯರು ನಾಡನ್ನು ಕಬಳಿಸಿ, ಕನ್ನಡಿಗರನ್ನೇ ಗುಲಾಮರಾಗಿ ಮಾಡಿಕೊಳ್ಳಲು ಹವಣಿಸುತ್ತಿರುವ ಕಾಲದಲ್ಲಿ ಕನ್ನಡದ ಶಕ್ತಿಗಳೆಲ್ಲ ಒಂದುಗೂಡಿ ಮುಂದೆ ಬಂದಿರುವುದು ನನಗೆ ತುಂಬಾ ಹೆಮ್ಮೆಯನ್ನುಂಟು ಮಾಡಿದೆ. ನಿಮ್ಮಗಳಲ್ಲಿ ಹುದುಗಿರುವ ದೇಶಾಭಿಮಾನದ ಕೆಚ್ಚು ನಮ್ಮನ್ನು ಸ್ವಾತಂತ್ರ್ಯದೆಡೆಗೆ ಕೊಂಡೊಯ್ಯುತ್ತಿದೆ. ಈಗಾಗಲೇ ಸಂಪಗಾವಿ, ಖಾನಾಪುರ, ನಂದಗಡ, ಸೋಮೇಶ್ವರ ಘಡ, ಪ್ರತಾಪಘಡಗಳು ನಮ್ಮ ಕೈವಶವಾಗಿವೆ. ನಿನ್ನೆ ನಡೆದ ಯುದ್ಧದಲ್ಲಿ ಜಯ ನಮ್ಮದು ಆಗಿದೆ. ನನ್ನೊಲವಿನ ಮಿತ್ರರೆ.. ನಾವು ಅಡಿ ಇಟ್ಟಡೆ ಜಯದೇವಿ ನಮ್ಮನ್ನೇ ಒಲಿದಿದ್ದಾಳೆ. ಕನ್ನಡದ ಪತಾಕೆಗಳೇ ಎಲ್ಲೆಲ್ಲು ಹಾರಾಡಿತ್ತಿವೆ. ಆದರೆ

ನಾವಿಷ್ಟಕ್ಕೆ ಸಂತೃಪ್ತಿ ಪಡುವಂತಿಲ್ಲ. ರಾಣಿ ಚನ್ನಮ್ಮನವರ ಬಿಡುಗಡೆಯಾಗಬೇಕು. ಧಾರವಾಡದ ಸೆರೆಯಲ್ಲಿರುವ ಯುವರಾಜರ ಪಟ್ಟಾಭಿಷೇಕವಾಗಬೇಕು. ಕಿತ್ತೂರಿನ ಮೇಲೆ ಹಾರಾಡುತ್ತಿರುವ ನೆತ್ತರದಾಹದ ಪತಾಕೆ ಕೆಳಗಿಳಿದು ಕರ್ನಾಟಕದ ಪತಾಕೆ ಹಾರಾಡಬೇಕು. ನೀವೆಲ್ಲರು ನನ್ನ ಮನವಿಗೆ ಮನ ಮಾಡುವಿರಾ?"[೭] ರಾಯಣ್ಣ ಕಿತ್ತೂರಿನ ಯುವಕರಲ್ಲಿ ರಾಣಿಯ ಬಿಡುಗಡೆ ಹಾಗೂ ಸ್ವಾತಂತ್ರ್ಯದ ಕುರಿತು ಜಾಗೃತಿಯನ್ನು ಮೂಡಿಸುತ್ತಿರುವುದು.

ರಾಯಣ್ಣನನ್ನು ಸೆರೆಹಿಡಿಯುವುದು ಡೋರಿ ಹಳ್ಳದಲ್ಲಿ. ರಾಯಣ್ಣನ ಕೊನೆಯ ದಾಳಿಯಾದ ಗಿಡದ ಹುಬ್ಬಳ್ಳಿಯ ಮೇಲೆ ಮಾಡಿದಂತಹ ದಾಳಿಯಾಗಿದೆ. ರಾಯಣ್ಣ ದಾಳಿ ಮಾಡಿ ಗುಪ್ತ ಸ್ಥಳಕ್ಕೆ ಹೋಗುವ ಸಂದರ್ಭದಲ್ಲಿ, ರಾಯಣ್ಣ ಸ್ನಾನ ಮಾಡುವ ಸಂದರ್ಭದಲ್ಲಿ ಆದರೆ ಇಲ್ಲಿ ಈ ಸನ್ನಿವೇಶವನ್ನು ತಂದಿಲ್ಲ. ಲಕ್ಕಪ್ಪ ರಾಯಣ್ಣನನ್ನು ಸೆರೆ ಹಿಡಿಯುತ್ತಾನೆ. ರಾಯಣ್ಣನನ್ನು ಕುತಂತ್ರದ ಮೂಲಕ ಸೆರೆ ಹಿಡಿಯಲು ಬಂದವರಲ್ಲಿ ಲಕ್ಕಪ್ಪ ಎಂಬ ಹಳಬ ಬಂದಿರುತ್ತಾನೆ. ಈ ಹಳಬ ರಾಯಣ್ಣನ ಆಪ್ತ ಸ್ನೇಹಿತ ಹಾಗೂ ರಾಯಣ್ಣನ ಸಂಬಂಧಿಯೂ ಆಗಿರುತ್ತಾನೆ. ಆದರೆ ಈ ನಾಟಕದಲ್ಲಿ ಇವರ ಪಾತ್ರ ಎಲ್ಲಿಯೂ ಕಾಣಿಸಿಕೊಳ್ಳುವುದಿಲ್ಲ.

ರಾಯಣ್ಣನನ್ನು ಕುತಂತ್ರದ ಮೂಲಕ ಹಿಡಿದು ಸೆರೆಮನೆಗೆ ಹಾಕುತ್ತಾರೆ. ಬ್ರಿಟಿಷರು ವಿಚಾರಣೆಯ ನಾಟಕ ಮಾಡಿ ರಾಯಣ್ಣನಿಗೆ ಗಲ್ಲು ಶಿಕ್ಷೆಯನ್ನು ವಿಧಿಸುತ್ತಾರೆ. ಗಲ್ಲಿಗೇರಿಸುವುದಕ್ಕಿಂತ ಮೊದಲು ಕೊನೆಯ ಆಸೆ ಏನೆಂದು ಕೇಳಿದಾಗ 'ಚಾಂಪ್ಲಿನ್ ಸಾಹೇಬ ಕೇಳು ಯೋಗ್ಯರಾದ ಕನ್ನಡಿಗರಿಗೆ ಬಂದಿರುವ ಈ ಆಪತ್ತು ಅಯೋಗ್ಯರಾದ ಪರಂಗಿಯರಿಗೆ ಬಂದಿರುವ ಸಂಪತ್ತು ಎರೆಡು ಒಪ್ಪತ್ತು ಎಂಬುದನ್ನು ಮರೆಯಬೇಡಿ. ಪರಂಗಿರ ಸಾಮ್ರಾಜ್ಯ ಒಂದು ದಿನ ಒಡೆದು ನುಚ್ಚು ನೂರಾಗುತ್ತದೆ, ಮತ್ತೆ ಭಾರತೀಯರಿಗೆ ಸ್ವಾತಂತ್ರ್ಯ ಲಭಿಸಿಯೇ ಲಭಿಸುತ್ತದೆ. [ನೆಲದ ಪುಡಿ ಮಣ್ಣು ಇಡಿದು] ನಾನಾಡಿದ ಮಾತು ಕಿತ್ತೂರು ದೇವಿಯಾಣೆ ಸತ್ಯ'[೮] ರಾಯಣ್ಣನ ಈ ಮಾತುಗಳಲ್ಲಿ ಭಾರತೀಯರಿಗೆ ಇಂದಲ್ಲ ನಾಳೆ ಸ್ವಾತಂತ್ರ್ಯ ಸಿಕ್ಕೇ ಸಿಗುತ್ತದೆ ಎನ್ನುವ ಭರವಸೆ ಮೂಡಿತ್ತು. ಭಾರತೀಯ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಉತ್ತರ ಕರ್ನಾಟಕದ ಜನತೆಗೆ ರಾಯಣ್ಣನ ಕುರಿತು ಜನರ ನಾಲಿಗೆಗಳಲ್ಲಿದ್ದಂತಹ ಲಾವಣಿಗಳು ಹೋರಾಟಗಾರರಿಗೆ ಸ್ಫೂರ್ತಿಯಾಗಿರುವುದನ್ನು ಕಾಣುತ್ತೇವೆ.

ರಾಯಣ್ಣನನ್ನು ಮೋಸದಿಂದ ಹಿಡಿದು ಕೊಟ್ಟವರಿಗೆ ಬ್ರಿಟಿಷರು ಉಡುಗೊರೆಯನ್ನು ನೀಡಿದರು. ಲಕ್ಕಪ್ಪನಿಗೆ ಅಂತಹ ಉಡುಗೊರೆ ಎಂದರೆ ಸಾವು. ಬ್ರಿಟಿಷರು ನಿಮ್ಮವರಿಗೆ, ನಿಮ್ಮ ದೇಶಕ್ಕೆ ದ್ರೋಹ ಬಗೆದವರು ನಮಗೆ ದ್ರೋಹ ಬಗೆಯುವುದಿಲ್ಲ ಎನ್ನುವುದನ್ನು ನಾವು ನಂಬುವುದಿಲ್ಲ ಆದ್ದರಿಂದ ನಿನಗೆ ಸಾವೇ ಬಹುಮಾನ.

ಈ ನಾಟಕವು ಚರಿತ್ರೆಕಾರರು ಮತ್ತು ಜನಪದರು ತಿಳಿಸಿರುವ ರಾಯಣ್ಣನ ಚರಿತ್ರೆಗಿಂತ ಭಿನ್ನವಾಗಿದೆ. ರಾಯಣ್ಣನನ್ನು ಹಿಡಿಯುವುದಕ್ಕೆ ಬಂದಿರುವುದು ನೇಗಿನಹಾಳದ ಲಕ್ಕಪ್ಪಗೌಡ ಮಾತ್ರ

ಆದರೆ ಲಿಂಗನಗೌಡ ಮತ್ತು ವೆಂಕನಗೌಡನ ಪಾತ್ರ ಬಂದಿಲ್ಲ, ರಾಣಿ ಚೆನ್ನಮ್ಮಳು ಸಾವನ್ನಪ್ಪುವುದು ರಾಯಣ್ಣನನ್ನು ಹಿಡಿಯುವುದಕ್ಕಿಂತ ಮೊದಲು, ಆದರೆ ಈ ನಾಟಕದಲ್ಲಿ ಬ್ರಿಟಿಷರು ರಾಯಣ್ಣನನ್ನು ಸೆರೆಹಿಡಿದ ಸುದ್ದಿಯನ್ನು ಕೇಳಿ ಸಾವನ್ನಪ್ಪುತ್ತಾಳೆ. ನಾಟಕಕಾರರು ಗೌಡನ ಚಿತ್ರಣವನ್ನು ಪ್ರಸ್ತುತ ಸಂದರ್ಭಕ್ಕೆ ಹೆಚ್ಚು ಹೊಂದುವಂತೆ ಕಟ್ಟಿಕೊಟ್ಟಿದ್ದಾರೆ ಎಂದು ಹೇಳಬಹುದು.

**ಸಂಗೊಳ್ಳಿ ರಾಯಣ್ಣ**

ಎಚ್. ಎನ್. ಹೂಗಾರರ ಸಂಗೊಳ್ಳಿ ರಾಯಣ್ಣ ಐತಿಹಾಸಿಕ ನಾಟಕ ೧೯೭೫ ರಲ್ಲಿ ಪ್ರಕಟಗೊಂಡಿದೆ. ಈ ನಾಟಕದಲ್ಲಿ ೧೮ ದೃಶ್ಯಗಳಿದ್ದು, ನಾಟಕದ ಮೊದಲ ದೃಶ್ಯ ಕಿತ್ತೂರಿನ ಮೊದಲ ಯುದ್ಧದಲ್ಲಿ ಜಯಗಳಿಸಿದ ನಂತರ ನಡೆಯುವ ಘಟನೆಗಳಿಂದ ಆರಂಭವಾಗುತ್ತದೆ. ಈ ಕಿತ್ತೂರು ಸಂಸ್ಥಾನದವರು ಮಾಡಿದಂತಹ ಯುದ್ಧದಿಂದ ಭಾರತೀಯರೆಲ್ಲರು ಸೇರಿ ಬ್ರಿಟಿಷರ ವಿರುದ್ಧ ಹೋರಾಟಕ್ಕೆ ಸಜ್ಜುಗೊಳಿಸಬೇಕಾದಂತಹ ಸಂದೇಶವನ್ನು ನೀಡುತ್ತಾರೆ. ಕಿತ್ತೂರಿನ ಮೂಲಕ ಸ್ಥಾನಗಳಿಗೆ ಎಚ್ಚರಿಕೆ ಸಂದೇಶ ಎನ್ನುವುದಕ್ಕೆ 'ಸಂಪೂರ್ಣ ಯುದ್ಧ ಗೆದ್ದಿದ್ದೀರಾ ಎಂದು ಯಾರು ಹೇಳುತ್ತಾರೆ ಇಂದಿನ ಗೆಲುವು ಸ್ವಾತಂತ್ರ ಯುದ್ಧದ ನಾಂದಿಯಾಗಿದೆ. ಅಕ್ಕ ಪಕ್ಕದ ಸಂಸ್ಥಾನಗಳಿಗೆ ನೀವು ಸಿದ್ದರಾಗಿ ಎನ್ನುವುದಕ್ಕೆ ಬೆಳಕು ಬೀರಿದೆ' ಕಿತ್ತೂರಿಗೆ ಮೊದಲ ಹೋರಾಟದಲ್ಲಿ ಜಯಗಳಿಸಿದ ನಂತರದ ಸಂಭಾಷಣೆಯ ಈ ಮಾತುಗಳು ಮುಂದೆ ೧೮೫೭ರ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಸಮಯದಲ್ಲಿ ಹೋರಾಟಗಾರರಿಗೆ ಪ್ರಭಾವ ಬೀರಿರುವುದನ್ನು ಕಾಣಬಹುದು.

ಕಿತ್ತೂರಿನ ಸೈನಿಕರನ್ನು ಪರೀಕ್ಷಿಸುವುದಕ್ಕೆ ರಾಣಿ ಚೆನ್ನಮ್ಮಳ ಸೇವಕಿಯಾದ ಬಸಮ್ಮ ಕಿತ್ತೂರಿನ ಮೊದಲ ಯುದ್ಧದ ನಂತರ ಬ್ರಿಟಿಷರು ಮತ್ತೆ ಯುದ್ಧಕ್ಕೆ ಬರುತ್ತಾರೆಂದು, ಯುದ್ದದ ಸಿದ್ಧತೆಯಲ್ಲಿರುವ ಕಿತ್ತೂರಿನ ಸೈನಿಕರನ್ನು ಪರೀಕ್ಷಿಸುವುದಕ್ಕೆ ರಾತ್ರಿಯಲ್ಲಿ ಬ್ರಿಟಿಷರ ಹೆಣ್ಣಿನಂತೆ ಮಾರು ವೇಷದಲ್ಲಿ ಬರುತ್ತಾಳೆ. ರಾಯಣ್ಣ ಹಾಗೂ ಬಿಚ್ಚುಗತ್ತಿ ಚೆನ್ನಬಸವನಿಗೆ ಆಂಗ್ಲರ ಜೊತೆ ಕೈಜೋಡಿಸಿ ನಿಮಗೆ ಬೇಕಾದ್ದನ್ನು ಕೊಡುತ್ತೇವೆ ಎಂದು ಆಸೆ ಆಮಿಷಗಳನ್ನೊಡ್ಡುತ್ತಾಳೆ. ಆದರೆ ಅವರು ಒಪ್ಪಲಿಲ್ಲ. ಕಿತ್ತೂರಿನ ಸ್ವಾತಂತ್ಯ ಸಾಮಾನ್ಯ ಮಹಿಳೆಯರಲ್ಲಿ ಇತ್ತೆಂದು ಹೇಳುವುದಕ್ಕೆ ಬಸಮ್ಮ ಉದಾಹರಣೆ.

**ಬಸಮ್ಮ** – 'ನಾನೊಬ್ಬಳೇ ಅಲ್ಲಾಣ್ಣ ಕಿತ್ತೂರಿನ ಪ್ರತಿ ಹೆಣ್ಣು ಕಣ್ಣು ಪಿಳಿಕಿಸದೆ ಯುದ್ಧ ಕಹಳೆ ಮೊಳಗುವುದನ್ನೆ ಕಿವಿಗೊಟ್ಟು ಲಾಲಿಸುತ್ತಿದೆ. ಹಸಿವೆ ನೀರಡಿಕೆಯನ್ನು ಹತ್ತಿಕ್ಕಿಬಿಟ್ಟಿವೆ.

**ರಾಯಣ್ಣ** – ಅಂದರೆ, ಯುದ್ಧ ಪ್ರಾರಂಭವಾಯಿತೆಂದರೆ ಹೆಂಣುಮಕ್ಕಳು ನಿಲ್ಲತಾರ.

**ಬಸಮ್ಮ** – ಈಗಾಗಲೇ ಕೊನೆಯ ಆಶೆ, ಕೊನೆಯ ಸ್ಮರಣೆ, ಕೊನೆಯ ಪೂಜೆ ಕೊನೆಗಾಣಿಸೇ ನಿಂತಿದ್ದಾರೆ. ಚನ್ನಮ್ಮನವರ ಬಲಗೈ ಖಡ್ಗವಾಗಿ,

**ರಾಯಣ್ಣ** – ಭಲೇ ಭಲೇ .. ಚನ್ನ.. ಬಸಮ್ಮನ ಮಾತುಗಳು ಸಾವಿರ ಅನೆಯ ಬಲಾ ತರತೈತಿ. ತಂಗೀ ಕೋಟೆಯ ಬಾಗಿಲ ತೆಗೆಯೂದೊಂದೇ ತಡ ಕಂಣು ಮುಚ್ಚು ಕಂಣು ತೆಗೆಯೂದರೊಳಗ, ಫಿರಂಗಿಗಳನ್ನು ಮಣ್ಣು ಮುಕ್ಕಿಸಿ ಬಿಡ್ತಿವಿ. ನೀ ಚಿಂತಿ ಬಿಟ್ಟು ಬಿಡು ನಡುರಾತ್ರಿ ಬಹಳ ಆಗೈತಿ ಒಂದು ಘಂಟೆಯಾದರೂ ನಿದ್ರಿಮಾಡು.

**ಬಸಮ್ಮ** – ಉಂ ಹುಂ.. ಪ್ರತಿ ಮನೆಗೂ ಹೋಗಿ, ಅಕ್ಕ ತಂಗಿಯರಿಗೆ ಯುದ್ಧ ವೀಳೆ ಕೊಟ್ಟು ಬರುವದೊಂದೇ ನನ್ನ ಕಾರ್ಯ ನೀವು ನಡೀರಣ್ಣಾ ನಾನು ಬರ್ತೇನೆ.

**ರಾಯಣ್ಣ** – ಚನ್ನ ದೇವರು ನಮ್ಮ ಹೆಣ್ಣುಮಕ್ಕಳಿಗೆ ಜೋಡು ಗುಂಡಿಗೆ ಕೊಟ್ಟಿರಬೇಕು. ಅಂತೆಯೇ ನಮ್ಮೆದೆ ಕೂಡ ನಡಗಸ್ತಾರ"[೧೦] ಭಾರತದಲ್ಲಿ ಮಹಿಳೆಯರ ಸ್ಥಾನ–ಮಾನಗಳು ಮನೆಯೊಳಗಿನ ನಾಲ್ಕು ಕೋಣೆಗೆ ಸಿಮೀತ ಎಂಬಂತಿದ್ದ ಕಾಲವದು, ಅಂತಹ ಕಾಲದಲ್ಲೂ ಮಹಿಳೆಯರು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟದಲ್ಲಿ ಸಕ್ರಿಯವಾಗಿ ಹೋರಾಟ ಮಾಡಿರುವುದನ್ನು ಬಸಮ್ಮನ ಮೂಲಕ ನಾಟಕಕಾರರು ಚಿತ್ರಿಸಿದ್ದಾರೆ.

ಕಿತ್ತೂರಿನ ಎರಡನೆಯ ಯುದ್ಧದ ಸಂದರ್ಭದಲ್ಲಿ ರಾಯಣ್ಣನ ತಾಯಿ ಕೆಂಚವ್ವ ರಾಯಣ್ಣ ಮತ್ತು ರಾಯಣ್ಣನ ಸ್ನೇಹಿತರಿಂದ

**"ಕೆಂಚವ್ವ** – ಈ ಹಾಲು ನಿಮ್ಮ ತಾಯಿ ಹಾಲು ಅಂತಾ ತಿಳಕೊಂಡ ನನಗ ಭಾಷೆ ಕೊಡ್ರಿ. ನಾವು ಎಂಥಾ ಪ್ರಸಂಗ ಬಂದರೂ ಗೆಳೆತನ ಬಿಟ್ಟು ಅಗಲುವಂಗಿಲ್ಲ. ಒಂದೇ ತಾಯಿ ಮಕ್ಕಳಂತೆ ನಡಕೊತೀವಿ. ಈ ಯುದ್ಧ ಮುಗಿಯುವತನಕ, ಜಯ ಪಡೆಯುವತನಕ ಒಬ್ಬರುಳಿದರೂ ಕಡೆತನಕ ಹೋರಾಡ್ತೇವಿ. ಚೆನ್ನಮ್ಮನ ಹೆಸರು ತರತೀವಿ, ಆಕಿ ಒಂದು ಕೂದಲು ಕೊಂಕ ಆಗದಂಗ ಎಳ್ಳಷ್ಟು ಅವಮಾನ ಆಗದಂಗ ನೋಡಿ ಕೊಂತಿವಿ ನಮ್ಮ ನಿಜವಾದ ತಾಯಿ ಚನ್ನಮ್ಮನ ಅಂತಾ ಆಣಿ ಮಾಡಿ ಮಾಡಿ ಹೇಳ್ತಿವಿ.

**ರಾಯಣ್ಣ** – ಇಕಾ ಎವ್ವಾ, ನಿನ್ನ ಪಾದಾ ಮುಟ್ಟಿ ಪ್ರತಿಜ್ಞೆಮಾಡತೀನಿ ನಮ್ಮ ನಿಜವಾದ ತಾಯಿ ಚೆನ್ನಮ್ಮ. ಯುದ್ಧ ಮುಗಿಯುವತನಕ ಅವರ ಅಂಗ ರಕ್ಷಕನಾಗಿ ನನ್ನ ಪ್ರಾಣ ಇರುವವರೆಗೂ ಶರೀರದಾಗ ಒಂದು ಹನಿ ರಕ್ತ ಒಂದು ಕ್ಷಣ ಉಸಿರು ಇರುವವರೆಗೂ ನಮ್ಮ ಕಿತ್ತೂರಿನ ಮೇಲೆ ಸ್ವಾತಂತ್ರದ ಧ್ವಜ ಏರಾಕ ಹೋರಾಡ್ತೇನಿ ನಿನ್ನ ಪಾದಾ ಮುಟ್ಟಿ ಹೇಳತೀನಿ ತಪ್ಪಿದರ ನೀನು ಧಮ್ಮಿಂದ ಹಡೆದಿಲ್ಲಾ ಅಂತ ಜಗತ್ತು ಸಾರಿ ಬಿಡ್ಲಿ.

**ಕೆಂಚವ್ವ** – ರಾಯಾ ನಿನ್ನ ತಾಯಿ ಹೊಟ್ಟೆ ತಣ್ಣಗಿರಿಸಿತು. ನಿಮ್ಮ ಅಪ್ಪನ ಕೀರ್ತಿ ಕಳಸಾ ಇಟ್ಟಿ.

**ಎಲ್ಲರೂ** – ನಿನ್ನ ಮಗನ ಪ್ರತಿಜ್ಞೆನ ಈ ಎಲ್ಲಾ ಮಕ್ಕಳವು ಎಂದು ತಿಳಕೊಂಡು ಬಿಡು."[೧೧]

ಕಿತ್ತೂರಿನ ಎರಡನೆಯ ಯುದ್ಧದ ಸಂದರ್ಭದಲ್ಲಿ ರಾಯಣ್ಣನ ತಾಯಿ ಕೆಂಚವ್ವ ರಾಯಣ್ಣನೊಳಗೊಂಡಂತೆ ಕಿತ್ತೂರಿನ ಸೈನಿಕರಿಂದ ಭಾಷೆಯನ್ನು ತೆಗೆದುಕೊಂಡಳು. ಕಿತ್ತೂರಿನ ಎರಡನೆಯ ಯುದ್ಧದಲ್ಲಿ ಬ್ರಿಟಿಷರು ಕಿತ್ತೂರಿನವರನ್ನೇ ಬಳಸಿಕೊಂಡು ಮೋಸದಿಂದ ಕಿತ್ತೂರನ್ನು ವಶಪಡಿಸಿಕೊಳ್ಳುತ್ತಾರೆ. ಕಿತ್ತೂರು ಬ್ರಿಟಿಷರ ವಶವಾದ ನಂತರ ರಾಣಿ ಚೆನ್ನಮ್ಮ ಹಾಗೂ ಸೊಸೆಯರನ್ನು ಬೈಲುಹೊಂಗಲದ ಸೆರೆಮನೆಗೆ ಹಾಕುತ್ತಾರೆ. ಜೊತೆಗೆ ಕಿತ್ತೂರಿನ ಅನೇಕ ಸೈನಿಕರನ್ನು ಬಂಧಿಸಿದರು. ಅವರಲ್ಲಿ ರಾಯಣ್ಣನು ಒಬ್ಬನಾಗಿದ್ದ. ಬ್ರಿಟಿಷರು ಹಂತಹಂತವಾಗಿ ಕಿತ್ತೂರಿನ ಸೈನಿಕರನ್ನು ಅನುಕಂಪದ ಆಧಾರದ ಮೇಲೆ ಬಿಡುಗಡೆಗೊಳಿಸಿದರು. ಕೆಲವು ದಿನಗಳ ನಂತರ ರಾಯಣ್ಣನು ಬಿಡುಗಡೆಗೊಂಡು ಸಂಗೊಳ್ಳಿಯಲ್ಲಿ ಮನೆತನದ ವೃತ್ತಿಯಾದ ವಾಲೀಕಾರಿಕೆಯನ್ನು ಒಲ್ಲದ ಮನಸ್ಸಿನಿಂದ ಮಾಡುತ್ತಾನೆ. ಸಂಗೊಳ್ಳಿಯ ಕುಲಕರ್ಣಿ ಬಾಳಪ್ಪ ರಾಯಣ್ಣನ ಜಮೀನು ಅಳತೆ ಮಾಡಿ ಅಳತೆಗಿಂತ ಹೆಚ್ಚಾಗಿದ್ದ ಜಮೀನಿಗೆ ಹೆಚ್ಚಿನ ಕಂದಾಯವನ್ನು ಕೊಡಬೇಕೆಂದು ಹೇಳುತ್ತಾನೆ. ಕಂದಾಯ ಕೊಡುವುದನ್ನು ರಾಯಣ್ಣ ನಿರಾಕರಿಸುತ್ತಾನೆ. ಈ ಸಂದರ್ಭವನ್ನು ಸೂರ್ಯನಾಥ ಕಾಮತ ಅವರು 'ಇತಿಹಾದ ಆಚೆ–ಈಚೆ' ಎನ್ನುವ ಗ್ರಂಥದಲ್ಲಿ ಆತನು ತನ್ನ ಹಿರಿಯರಿಂದ ಬಂದ ರಕ್ತಮಾನ್ಯ ಜಮೀನಿನ ಮೇಲೆ ಕಂದಾಯ ಹೇರಿದಾಗ ಒಮ್ಮೆಗೆ ಜ್ವಾಲಾಮುಖಿಯಂತೆ ಸಿಡಿದು ಬ್ರಿಟಿಷರ ವಿರುದ್ಧ ಯುದ್ಧ ಹೂಡಲು ಸಿದ್ಧನಾದನು. ಈ ಘಟನೆಗಿಂತ ಪೂರ್ವದಲ್ಲಿ ನಡೆದ ಕೆಲವು ಘಟನೆಗಳು ಮತ್ತು ಈ ಘಟನೆಯ ನಂತರ ನಡೆದ ಘಟನೆಗಳು ರಾಯಣ್ಣನು ಕಿತ್ತೂರಿನ ಚರಿತ್ರೆಯಲ್ಲಿ ಹೊಸ ಅಧ್ಯಾಯಕ್ಕೆ ನಾಂದಿಯಾಯಿತು ಎಂದು ಹೇಳಬಹುದು. ರಾಯಣ್ಣನ ತಾಯಿಯನ್ನ ಕಂದಾಯದ ಹಣವನ್ನು ಕೇಳಿದ ಕುಲಕರ್ಣಿ ಬಾಳಪ್ಪನು ವಯಸ್ಸಾದ ಕೆಂಚವ್ವಳ ಮೇಲೆ ಕಲ್ಲನು ಹೇರಿ ಹಿಂಸೆಗೆ ಒಳಪಡಿಸುತ್ತಾನೆ. ಇಂತಹ ಘಟನೆಗಳಿಂದ ರಾಯಣ್ಣ ಬ್ರಿಟಿಷರ ವಿರುದ್ಧ ಹೋರಾಟ ಮಾಡಲು ಸಿದ್ಧನಾಗುತ್ತಾನೆ.

ರಾಯಣ್ಣ ಬ್ರಿಟಿಷರ ಚಲನವಲನಗಳನ್ನು ಕುಲಕರ್ಣಿಯ ಪ್ರೇಯಸಿಯಾದ ರತ್ನಳಿಂದ ತಿಳಿದುಕೊಳ್ಳುತ್ತಿದ್ದನು.

**ಚನ್ನಂಣ** – "ರಾಯಾ, ರತ್ನಕ್ಕ ನಮ್ಮ ಸೋದರಿಯರಲ್ಲಿಯೇ ಆದರ್ಶ ರತ್ನ. ನಿಜ ರತ್ನಕ್ಕ ಎಷ್ಟೇ ಆಗಲಿ ನೀವು ಸ್ತ್ರೀಯರು, ಪಾಪ ಹೋರಾಟದ ವನವಸಕ್ಕೆ..

**ಬಸಮ್ಮ** – ನಿಮಗಿಂತಲೂ ಹೆಚ್ಚೆ, ನೀವು ಶೂರತನದಲ್ಲಿ ಕಿತ್ತೂರ ಇತಿಹಾಸದಲ್ಲಿ ಎಳಿದರೂ, ನಾವು ಸ್ತ್ರೀಯರು, ಬುದ್ಧಿ ಕುಶಲತೆಗಾಗಿ ಹೆಸರುಳಿಸುತ್ತೇವೆ. ನಿಮ್ಮ ಮಾರ್ಗ ಮುನ್ನೆಡೆಗೆ ಇವಳೇ ದಾರಿದೀಪ.

**ರಾಯಣ್ಣ** – ಅಂದರೆ..?

**ಬಸಮ್ಮ** – ಕುಲಕರ್ಣಿಯ ಮನೆಯೇ ಆ ಫಿರಂಗಿಗಳ ಗುಪ್ತಾಲೋಚನೆಯ ಕಚೇರಿ, ಅಂದಾಗ ರತ್ನ ಅಲ್ಲಿದ್ದುಕೊಂಡು ನಟನೆಯ ವನಪು ವೈಯ್ಯಾರಗಳಿಂದ ಅವರ ಭಾವಕ್ಕೆ ಸರಿಯಾದ ಪಾತ್ರ ಮಾಡಿ ಅವರ ಮುಂದಿನ ಎಲ್ಲಾ ಕಾರ್ಯಗಳಿಗೆ ವಿಷಯ ಸಂಗ್ರಹಿಸಿ ನನಗೆ ತಿಳಿಸುತ್ತಾಳೆ. ನಿಮಗೆ ತಂದು ಮುಟ್ಟಿಸುತ್ತೇನೆ."[೨]

ಬ್ರಿಟಿಷರ ಪ್ರತಿಯೊಂದು ಚಲನವಲನಗಳ ಕುರಿತು ರಾಯಣ್ಣನಿಗೆ ಮಾಹಿತಿಗಳು ರವಾನೆಯಾಗುತ್ತಿದ್ದವು. ಹಾಗಾಗಿ ರಾಯಣ್ಣ ಬ್ರಿಟಿಷರು ರೂಪಿಸುವ ಯುದ್ಧ ತಂತ್ರಕ್ಕೆ ಪ್ರತಿ ತಂತ್ರವನ್ನು ರಾಯಣ್ಣ ಬಳಸುತ್ತಿದ್ದನು. ಈ ನಾಟಕದಲ್ಲಿ ಕುಲಕರ್ಣಿ ಹಾಗೂ ಸಂಪಗಾವಿಯ ಅಮಲ್ದಾರ ಕೃಷ್ಣರಾವ ಅವರು ರಾಯಣ್ಣನನ್ನು ಹಿಡಿಯುವ ಮಾರ್ಗಗಳನ್ನು ಕುರಿತು ಕುಲಕರ್ಣಿಯ ಮನೆಯೊಳಗೆ ನೆಡೆಯುತ್ತಿದ್ದಂತಹ ವಿಷಯಗಳನ್ನು ಕುಲಕರ್ಣಿಯ ಪ್ರೇಯಸಿ ರತ್ನಳಿಂದ ಬಸಮ್ಮ, ಬಸಮ್ಮನ ಮೂಲಕ ರಾಯಣ್ಣನಿಗೆ ಮಾಹಿತಿಗಳು ತಿಳಿಯುತ್ತಿದ್ದವು. 

ರಾಯಣ್ಣನು ಸಮಾನ ಮನಸ್ಕರೊಂದಿಗೆ ಸೇರಿ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಲು ಹೋರಾಟವನ್ನು ಮಾಡುತ್ತಾನೆ. ಬ್ರಿಟಿಷರ ಒಂದೊಂದೇ ಕಚೇರಿಗಳ ಮೇಲೆ ದಾಳಿ ಮಾಡಿ ಕಚೇರಿಯಲ್ಲಿದ್ದಂತಹ ಹಣವನ್ನು ವಶಪಡಿಸಿಕೊಂಡು ಕಾಗದ ಪತ್ರಗಳನ್ನೆಲ್ಲಾ ಸುಟ್ಟು ಹಾಕುತ್ತಾನೆ. ಇಂತಹ ರಾಯಣ್ಣನ ಹೋರಾಟದಿಂದ ಬ್ರಿಟಿಷರು ಕಂಗಾಲಾದರು. ರಾಯಣ್ಣನನ್ನು ನೇರವಾಗಿ ಹಿಡಿಯುವುದು ಸಾಧ್ಯವಿರಲಿಲ್ಲ. ಏಕೆಂದರೆ ರಾಯಣ್ಣನು ಗೆರಿಲ್ಲಾ ಯುದ್ಧದ ಮೂಲಕ ಯಾವಾಗ ಎಲ್ಲಿ? ಹೇಗೆ? ದಾಳಿ ಮಾಡುತ್ತಾನೆ ಎನ್ನುವುದು ಬ್ರಿಟಿಷರಿಗೆ ಗೊತ್ತಾಗುತ್ತಿರಲಿಲ್ಲ. ರಾಯಣ್ಣ ಹೇಳಿದ ಸ್ಥಳಕ್ಕೆ ಹೋಗುವ ಬದಲು ಬೇರೆ ಸ್ಥಳಕ್ಕೆ ಹೋಗಿ ದಾಳಿ ಮಾಡುತ್ತಿದ್ದನು. ಇಂತಹ ದಾಳಿಗಳಿಂದ ರಾಯಣ್ಣನನ್ನು ನೇರವಾಗಿ ಹಿಡಿಯಲು ಸಾಧ್ಯವಿಲ್ಲವೆಂದು ಮನಗೊಂಡರು. ಬ್ರಿಟಿಷರು ಕುತಂತ್ರದ ಮೂಲಕ ಹಿಡಿಯಲು ತಂತ್ರವನ್ನು ರೂಪಿಸುತ್ತಾರೆ. ಖೂದನಪುರದ ಲಿಂಗನಗೌಡ ಹಾಗೂ ನೇಗಿನಹಾಳದ ವೆಂಕನಗೌಡನನ್ನ ಬಳಸಿಕೊಂಡರೂ, ಇವರು ರಾಯಣ್ಣನ ಸೋದರ ಮಾವ ಲಕ್ಕನನ್ನು ಬೆದರಿಸಿ ರಾಯಣ್ಣನನ್ನು ಹಿಡಿದುಕೊಡಲು ಒಪ್ಪಿಸಿಕೊಳ್ಳುತ್ತಾರೆ.

ಲಕ್ಕಪ್ಪ ರಾಯಣ್ಣನ ತಾಯಿಯ ಅಣ್ಣ. ಈತ ನೇಗಿನಹಾಳದ ವೆಂಕನಗೌಡನ ಹಳಬನಾಗಿದ್ದ. ಇವನು ಬ್ರಿಟಿಷರಿಗೆ ರಾಯಣ್ಣನನ್ನು ಹಿಡಿದು ಕೊಡುವುದಕ್ಕೆ ಒಪ್ಪಿಕೊಳ್ಳಲಿಲ್ಲ, ಆದರೆ ಲಿಂಗನಗೌಡ ಮತ್ತು ವೆಂಕನಗೌಡರು ಲಕ್ಕಪ್ಪನಿಗೆ ಆಸೆ ಆಮಿಷಗಳನ್ನೊಡ್ಡುತ್ತಾರೆ. ಇದಕ್ಕೆ ಲಕ್ಕಪ್ಪ ಒಪ್ಪದಿದ್ದಾಗ ಬೆದರಿಸಿ ಒಪ್ಪಿಸುತ್ತಾರೆ. ಈ ಸನ್ನಿವೇಶವನ್ನು

**ಮಾಮ್ಲೇದಾರ** – ಕಣ್ತೆರೆದು ನೋಡು ಮಗನೇ ನಿನಗೆ ಜೀವ ಸಾಕಗಿದ್ರೆ.

**ಲಕ್ಕಂಣ** – ಸಾಹೇಬ್ರ ನನ್ನ ಪ್ರಾಣಾ ತಗೀರಿ ಸಂತೋಷವಾಗಿ ಸಾಯಿತೀನಿ ಆದ್ರ ನನ್ನ ರಾಯನ್ನ.. ನ್ನ ಮಗನ್ನ ಹಿಡಕೊಡಲಾರೆ.

**ಮಾಮ್ಲೇದಾರ** – ನಿನ್ನ ಪ್ರಾಣ ತೆಗೆಯುವುದರಲ್ಲೇನಿದೆ ಮಗನೇ ಇದೋ ನೀನು ಒಪ್ಪದಿದ್ದರೆ ನಿನ್ನ ಹೆಂಡತಿ, ಮಕ್ಕಳು–ಮರಿ, ದನ ಕರ ಎಲ್ಲವನ್ನು ನಡುಪೇಟೆಯಲ್ಲಿ ನಿಲ್ಲಿಸಿ ಸುಟ್ಟು ಹಾಕುತ್ತೇನೆ. ಒಬ್ಬನ ಪಾಪಕ್ಕೆ ಹತ್ತು ಜನದ ಪಾಪ ನಿನುಡಿಯಲ್ಲಿ ಕಟ್ಟಿಕೊಳ್ಳಬೇಕಾಗುತ್ತದೆ.'[೧೩]

ಎಂದು ಬೆದರಿಸುತ್ತಾರೆ. ಇಲ್ಲಿ ಬ್ರಿಟಿಷರ ಅನ್ಯಾಯ ದಬ್ಬಾಳಿಕೆ ದೌರ್ಜನ್ಯ ಶೋಷಣೆಯನ್ನು ಕಾಣುತ್ತೇವೆ. ಈ ರೀತಿಯಾಗಿ ಲಕ್ಕಪ್ಪನನ್ನು ಬೆದರಿಸಿ ರಾಯಣ್ಣನನ್ನು ಹಿಡಿದು ಕೊಡುವುದಕ್ಕೆ ಒಪ್ಪಿಸುತ್ತಾರೆ. ಹೀಗೆ ರಾಯಣ್ಣನನ್ನು ಕುತಂತ್ರದ ಮೂಲಕ ಹಿಡಿದು ವಿಚಾರಣೆಯ ನಾಟಕವಾಡಿ ಕೊನೆಗೆ ಗಲ್ಲಿಗೇರಿಸುತ್ತಾರೆ. ಈ ಸನ್ನಿವೇಶವನ್ನು ಚನ್ನಬಸವನಿಂದ "ಪುಣ್ಯಭೂಮಿಯೆಂದು ನಂಬಿದ ಕಿತ್ತೂರು ಕಡೆಗೂ ಕಣ್ದೆರೆಯಲಿಲ್ಲ. ಕಿತ್ತೂರ ತಾಯಿ ನಿನ್ನ ಹೋರಾಟದ ಕಥೆಗೆ ಮಂಗಲ ಹಾಡಿದೆ ಏನಮ್ಮಾ. ನಮ್ಮ ಮನೆ ಕನ್ನ ಒಡೆಯಲು ನಮ್ಮವರೇ ಕಳ್ಳರಿಗೆ ಒಳಬರಲು ದಾರಿ ತೋರಿಸಿ ಕೊಟ್ಟು ನಿಂತ ನಿನ್ನ ಮಕ್ಕಳೆಂದು ನೀ ನಂಬಿ ಮೃತ್ಯು ಭಾವಿಯನ್ನು ನೀನೆ ತೋಡಿಕೊಂಡೆ ಯಾವ ಜನ್ಮದ ಪಾಪ ಕರ್ಮಕ್ಕೆ ನಿನ್ನ ಕುಲಕ್ಕೆ ಕಲಂಕವಿಡುವ ಮಕ್ಕಳನ್ನು ಪಡೆದ ರಾಯಾ ವೈರಿಗನಸಿನಲಿ ಮೃತ್ಯು ಬೈರವನ ನಗೆಯಾಡಿದ ಧೀರರಾಯ ಕ್ಷುಲ್ಲಕ ವೈರಿಗಂಬ ನಿನ್ನ ಪ್ರಾಣ ಸೆಳೆದು ಕಿತ್ತೂರಿನವನು ಕಂಣೀರ ಹೊಳೆಯಲ್ಲಿ ಕೈವಿಟ್ಟು ಕೈ ತಟ್ಟಿ ನಗುತ್ತಿದೆಯೇ! ಅಲ್ಲ ಅದು ಗಲ್ಲುಗಂಭವಲ್ಲ ಅದು ನಮ್ಮ ಧೀರತನಕ್ಕೆ ಮೃತ್ಯುಗಂಬ ಎಲೇ ಮೃತ್ಯುಗಂಬವೇ"[೧೪] ಎಂದು ಕಿತ್ತೂರು ಸ್ವಾತಂತ್ರಕ್ಕಾಗಿ ಹೋರಾಟ ಮಾಡಿದ್ದಕ್ಕೆ ರಾಯಣ್ಣನಿಗೆ ಸಿಕ್ಕಂತಹ ಬಹುಮಾನ ಗಲ್ಲುಶಿಕ್ಷೆಯನ್ನು ಕಿತ್ತೂರಿನ ಹೋರಾಟಗಾರರು ಹಾಗೂ ಸ್ವಾತಂತ್ರ್ಯ ಹೋರಾಟಕ್ಕೆ ದೇಶಪ್ರೇಮಕ್ಕೆ ಸ್ವಾಭಿಮಾನಕ್ಕೆ ನಮಗಿದು ಗಲ್ಲುವಲ್ಲ ಮೃತ್ಯುಗಂಭವೆಂದು ಹೇಳುತ್ತಾರೆ.

ಎಚ್ ಎನ್ ಹೂಗಾರರ 'ಸ್ವಾತಂತ್ರ್ಯ ಹುಲಿ ಸಂಗೊಳ್ಳಿ ರಾಯಣ್ಣ' ನಾಟಕ ಕಿತ್ತೂರು ಸಂಸ್ಥಾನದ ಕೊನೆಯ ದೊರೆಯಾದ ಶಿವಲಿಂಗರುದ್ರಸರ್ಜನ ಮರಣದ ನಂತರ ನೆಡೆಯುವ ಘಟನೆಗಳಿಂದ ಆರಂಭವಾಗುತ್ತದೆ. ಬ್ರಿಟಿಷರ ಕಣ್ಣು ಕಿತ್ತೂರು ಸಂಸ್ಥಾನದ ಮೇಲೆ ಬಿದ್ದು ಕಿತ್ತೂರನ್ನು ವಶಪಡಿಸಿಕೊಳ್ಳಲು ನೆಪ ಹುಡುಕುತ್ತಿದ್ದರು. ಅಂತಹ ಸಂದರ್ಭದಲ್ಲಿ ಕಿತ್ತೂರಿಗೆ ಉತ್ತರಾಧಿಕಾರಿ ಇಲ್ಲವೆಂದು ಕಿತ್ತೂರನ್ನು ಆಕ್ರಮಿಸಿಕೊಳ್ಳಲು ಮುಂದಾದಾಗ ಸ್ವಾತಂತ್ರ್ಯ ಸ್ವಾಭಿಮಾನಿಗಳಾದ ಕಿತ್ತೂರಿನ ಜನರು ಹೋರಾಟ ಮಾಡುವುದಕ್ಕೆ ಮುಂದಾಗುತ್ತಾರೆ. ಭಾರತದ ಸ್ವಾತಂತ್ರ್ಯ ಹೋರಾಟದ ಇತಿಹಾಸದ ಚರಿತ್ರೆಯಲ್ಲಿ ರಾಣಿ ಚೆನ್ನಮ್ಮ ಮೊದಲಿಗಳು. ಬ್ರಿಟಿಷರ ಜೊತೆ ಕಿತ್ತೂರನ್ನು ಉಳಿಸಿಕೊಳ್ಳಲು ಎರಡು ಯುದ್ಧಗಳನ್ನು ಮಾಡಿ, ನಂತರ ನಮ್ಮವರ ಕುತಂತ್ರದಿಂದ ಬ್ರಿಟಿಷರು ಕಿತ್ತೂರನ್ನು

ವಶಪಡಿಸಿಕೊಳ್ಳುತ್ತಾರೆ. ಕಿತ್ತೂರನ್ನು ಮತ್ತೆ ಸ್ವತಂತ್ರಗೊಳಿಸಲು ಸಂಗೊಳ್ಳಿ ರಾಯಣ್ಣನು ಹೋರಾಟವನ್ನು ಮಾಡುತ್ತಾನೆ. ರಾಯಣ್ಣನ ಹೋರಾಟದ ಕುರಿತು ಹಾಗೂ ರಾಯಣ್ಣನ ಗೆರಿಲ್ಲಾ ಯುದ್ಧದ ಮೂಲಕ ಬ್ರಿಟಿಷರ ವಿರುದ್ದ ಹೋರಾಟ ಮಾಡಿ ಕೊನೆಗೆ ನಮ್ಮವರಿಂದಲೇ ಮೋಸಕ್ಕೆ ಒಳಾಗಾಗಿರುವುದನ್ನು ನಾಟಕಕಾರರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

**ಒಂದೇ ಖಡ್ಗ**

ಚಿಕ್ಕೋಡಿ ಶಿವಲಿಂಗ ಶಾಸ್ತ್ರಿಗಳು ಸಂಗೊಳ್ಳಿ ರಾಯಣ್ಣನ ಜೀವನ ವೃತ್ತಾಂತವನ್ನಾಧರಿಸಿ ರಚಿಸಿರುವ ಈ ನಾಟಕವು ಕಿತ್ತೂರು ರಾಣಿ ಚೆನ್ನಮ್ಮ ಹಾಗೂ ಸಂಗೊಳ್ಳಿ ರಾಯಣ್ಣನ ಹೋರಾಟದ ಕಾಥವಸ್ತುವನ್ನಿಟ್ಟುಕೊಂಡು ರಚನೆ ಮಾಡಿದ್ದಾರೆ. ಈ ನಾಟಕವು ರಾಯಣ್ಣನ ದೇಶಪ್ರೇಮ, ಸ್ವಾಭಿಮಾನ, ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ ಚಿತ್ರಣವನ್ನು ನೀಡಿದ್ದಾರೆ.

ಚಿಕ್ಕೋಡಿ ಶಿವಲಿಂಗ ಶಾಸ್ತ್ರಿಗಳು ಕಿತ್ತೂರು ಸಂಸ್ಥಾನವನ್ನು ಹಿನ್ನಲೆಯಾಗಿಟ್ಟುಕೊಂಡು ರಾಣಿ ರುದ್ರಮ್ಮ, ಕಿತ್ತೂರು ರಾಣಿ ಚೆನ್ನಮ್ಮ ಹಾಗೂ ಸಂಗೊಳ್ಳಿ ರಾಯಣ್ಣನ ಕುರಿತಾದ ಒಂದೇ ಖಡ್ಗ ಎನ್ನುವ ನಾಟಕಗಳನ್ನು ರಚಿಸಿದ್ದಾರೆ. "ರಾಯಣ್ಣನ ಹೋರಾಟವು ಭಾರತೀಯರಲ್ಲಿ ದೇಶಭಕ್ತಿಯನ್ನು ಧೈರ್ಯವನ್ನು ಏಕಕಾಲದಲ್ಲಿ ತುಂಬಲು ಸಹಾಯಕವಾಗುತ್ತಿತ್ತು. ರಾಯಣ್ಣನ ಆದರ್ಶಗಳನ್ನು ಆಳವಡಿಸಿಕೊಂಡ ಆನೇಕ ದೇಶಭಕ್ತರು ಮುಂದೆ ಸ್ವಾತಂತ್ರ್ಯ ಚಳುವಳಿಯಲ್ಲಿ ಸ್ವಯೋಪ್ರೇರಿತರಾಗಿ ಭಾಗವಹಿಸುವಂತೆ ಮಾಡುತ್ತಿತ್ತು. ನಾಟಕ ಅಂದು ರಂಗಭೂಮಿಯಲ್ಲಿ ದೊಡ್ಡ ಕ್ರಾಂತಿಯನ್ನೇ ಹುಟ್ಟು ಹಾಕಿತು. ಇದರಿಂದ ಪ್ರೇರಿತರಾದ ಜನ ಸ್ವಾತಂತ್ರ್ಯ ಚಳುವಳಿಗೆ ತೊಡಗಿಸಿಕೊಂಡಿದ್ದು ಇತಿಹಾಸ ಅಲ್ಲದೆ ಧೈರ್ಯ ಸಾಹಸ ಮೆರೆದ ರಾಯಣ್ಣನ ಹೆಸರನ್ನು ತಮ್ಮ ಮಕ್ಕಳಿಗಿಡುವಂತೆ ಪ್ರೋತ್ಸಹಿಸಿದ್ದು ವಿಶೇಷವಾಗಿದೆ."[೧೫] ಉತ್ತರ ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟಗಾರರು ಈ ನಾಟಕದ ಪ್ರದರ್ಶನದಿಂದ ಸ್ವಯಂ ಪ್ರೇರಿತರಾಗಿ ಚಳುವಳಿಯಲ್ಲಿ ಭಾಗಿಯಾಗಿದ್ದರೆಂದು ತಿಳಿದು ಬರುತ್ತದೆ.

**ಸಂಗೊಳ್ಳಿ ರಾಯಣ್ಣ(ಕನ್ನಡ ಐತಿಹಾಸಿಕ ನಾಟಕ)**

ಬಷೀರ್ ಅವರು ಸಂಗೊಳ್ಳಿ ರಾಯಣ್ಣನನ್ನು ಕುರಿತು ಬರೆದಿರುವ ಈ ನಾಟಕವು ರಾಯಣ್ಣನ ಜೀವನ ವೃತ್ತಾಂತವನ್ನು ತಿಳಿಯಲು ಸಹಾಯಕವಾಗುತ್ತದೆ. ಈ ನಾಟಕವು ಕಿತ್ತೂರು ಪತನದ ನಂತರ ನಡೆಯುವ ಘಟನೆಗಳು ಅಂದರೆ ಕಿತ್ತೂರು ಸಂಸ್ಥಾನವನ್ನು ಸ್ವಾತಂತ್ರ್ಯಗೊಳಿಸಲು ರಾಯಣ್ಣ ಹೋರಾಟಕ್ಕೆ ಸಿದ್ದತೆಗಳನ್ನು ಮಾಡಿಕೊಳ್ಳುವ ಅಂಶದೊಂದಿಗೆ ಆರಂಭವಾಗುತ್ತದೆ. ಈ ಸಮಯದಲ್ಲಿ ರಾಯಣ್ಣ ಹಾಗೂ ಸರದಾರ್ ವೀರಪ್ಪನ ನಡುವೆ ನಡೆಯುವ ಸಂಭಾಷಣೆ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸುವುದಕ್ಕಾಗಿ ಕಿತ್ತೂರಿನ ಜನತೆ ಬ್ರಿಟಿಷರ ವಿರುದ್ದ ಯುದ್ಧ ಮಾಡಬೇಕಾದರೆ

ತ್ಯಾಗ, ಬಲಿದಾನವನ್ನು ನೀಡುವುದಕ್ಕೆ ರಾಯಣ್ಣ ಹಾಗೂ ರಾಯಣ್ಣನಂತಹ ಆನೇಕ ವೀರರು ಸಿದ್ಧರಿರುವುದನ್ನು ಕಾಣುತ್ತೇವೆ.

**ರಾಯಣ್ಣ** : "ಸರದಾರ್ರೇ ಮಾಡು ಇಲ್ಲವೆ ಮಡಿ ಅನ್ನೋದು ನನ್ನ ಉಸಿರಿನ ಮಂತ್ರ..

**ಸರದಾರ್ ವೀರಪ್ಪ** : ಭೇಷ್..! ನಿನ್ನ ಈ ಧೈರ್ಯದ ಮಂತ್ರ ಕಿತ್ತೂರಿನ ದೇಶಪ್ರೇಮಿಗಳ ಜನಮಂತ್ರವಾಗಲಿ. ಅದಿರ್ಲಿ ಕ್ರಾಂತಿ ಚಾಲೂ ಮಾಡೋ ಧೀರರು ಯಾರಾರಿದಾರ..?

**ರಾಯಣ್ಣ** : ಯಪ್ಪಾ.. ಬಾಳ ಮಂದಿ ಇದ್ದಾರ್ರೀ.. ಬಿಚ್ಚುಗತ್ತಿ ಚನ್ನಬಸಪ್ಪ.. ಬೆಳವಡಿ ಎಲ್ಲನಾಯಕ, ಅಮಟೂರು ನೈದಾನಸಾಬರ ಮಗ ಬಾಳ, ಒಕ್ಕುಂಧದ ರುದ್ರನಾಯಕ, ದೇಗಾಂವಿಯ ಇಮಾಮಸಾಬ, ಯಕ್ಕುಂಡಿಯ ಜೇಡ್ಡಿಮನಿ ಪಕೀರ, ಬಳಕುಂದದ ಕಾಳಿಭೀಮ, ರಣಹಲಗಿ ಹನುಮಂತ, ಒಬ್ರ.. ಇಬ್ರ.. ಕಿತ್ತೂರಿನ ಕಂಕುಳದ ಕೂಸೂ ಕತ್ತಿ ಹಿಡಿದು ಯುದ್ಧ ಮಾಡ್ತೈತ್ರಿ..."[೧೬]

ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸುವುದಕ್ಕೆ ಕಿತ್ತೂರಿನ ಆನೇಕ ವೀರರು ಸಿದ್ದರಿರುವುದನ್ನು ಮನಗಂಡು ಬ್ರಿಟಿಷರ ವಿರುದ್ದ ಹೋರಾಟಕ್ಕೆ ಸಿದ್ದತೆಗಳನ್ನು ಮಾಡಿಕೊಳ್ಳುತ್ತಾರೆ.

ರಾಯಣ್ಣ ಸಂಗೊಳ್ಳಿಯನ್ನು ತೊರೆದ ನಂತರ ಕಿತ್ತೂರಿನ ಸ್ವಾತಂತ್ರ್ಯಕ್ಕೆ ಹೋರಾಟಮಾಡಬೇಕೆನ್ನುವ ಹಲವಾರು ಹೋರಾಟಗಾರರ ಜೊತೆ ಸೇರಿಕೊಂಡು ಬ್ರಿಟಿಷರ ವಿರುದ್ದ ಹೋರಾಟಕ್ಕೆ ಯೋಜನೆಗಳನ್ನು ರೂಪಿಸಿಕೊಳ್ಳುತ್ತಾರೆ. ಕಿತ್ತೂರಿನ ಜನರ ಸಹಾಯ ಹಾಗೂ ಸಹಕಾರಕ್ಕಾಗಿ ಕಿತ್ತೂರಿನ ಕೊನೆಯ ದೊರೆಯಾದ ದತ್ತು ಪುತ್ರ ಸವಾಯಿ ಮಲ್ಲಸರ್ಜನನ್ನು ಅಧಿಕಾರಕ್ಕೆ ಕೂರಿಸಬೇಕೆಂದು ಸೈನ್ಯವನ್ನು ಸಂಘಟಿಸಿದ ನಂತರ ಬ್ರಿಟಿಷರ ಅನ್ಯಾಯ, ಶೋಷಣೆಯನ್ನು ಸಹಿಸಲು ಸಾದ್ಯವಿಲ್ಲವೆಂದು ಹೇಳುತ್ತಾನೆ.

**ರಾಯಣ್ಣ** : "ಇನ್ನು ಸುಮ್ನೆ ಇರೋದು ಬೇಡ ಸರದಾರ್ರೇ ಜನರ ಸುಖ, ಶಾಂತಿ ನೋಡ್ಕೊಂಡು ಅರಮನೇಲಿ ಅರಾಮಾಗಿ ಇರಬೇಕಾದ ವೀರರಾಣಿ ಚೆನ್ನಮ್ಮನವರು ಇವತ್ತು ರಾಜಕೀಯ ಖೈದಿಗಳಾಗಿದ್ದಾರೆ. ಐದು ವರ್ಷ ಕಳೆದ್ ಹೋದ್ರೂ ಯಾವ ಬದ್ಲಾವನೇನೂ ಆಗಲಿಲ್ಲ. ದಿನೇ ದಿನೇ ಆಂಗ್ಲರ ಖಾರಸ್ತಾನ ಕಿತ್ತೂರಿನ ಜನರಲ್ಲಿ ಹಾಹಾಕಾರ ಎಬ್ಬಿಸೈತಿ.

**ಸರದಾರ್ ವೀರಪ್ಪ** : ಹೌದು ರಾಯ ನೀನ್ ಹೇಳೋದೆಲ್ಲಾ ದಿಟಾ.

**ರಾಯಣ್ಣ** : ದಿಟಾ ಗೊತ್ತಿದ್ರೂ ಯಾಕ ಸನ್ಯಾಸಿ ಹಂಗ ಸುಮ್ನಾ ಇರ್ಬೇಕು ಕಣ್ಣಿದ್ದು ಕುರುಡರಂಗ ಕೈಕಟ್ಟಿಕೊಂಡ್ ಕಲ್ಲು ಬೊಂಬೆ ಹಂಗ ಯಾಕ ಕುಂತಿರಬೇಕು..?

> ಕಿತ್ತೂರು ಸಂಸ್ಥಾನದ ಶೂರರ ನರಗಳಾಗ ಹರಿತಿರೋ ಪೌರುಷದ ರಕ್ತ ಪೂರಾ ಗಟ್ಟಿ ಹೋದ ಮ್ಯಾಗ ನಾವು ಏನು ಸಾಧನೆ ಮಾಡೋ ಹಾಂಗಿಲ್ಲ. ಬಲದ ಬೆದರಿಕೆಗೆ ಭಯಪಟ್ಟು ಮುತ್ತಿರೋ ಭ್ರಾಂತಿ ಮರ್ರು ಮೊದಲು ಹೊಡೆದಾಡೋಣು. ಎಚ್ಚರ ಅಗೋಣ. ಕತ್ತಿ ಹಿಡಿಯೋಣು, ಕ್ರಾಂತಿ ಮಾಡೋಣು ಆಂಗ್ರೇಜರ ಆಡಿಯಾಳುಗಳು ನಾವಲ್ಲ. ನಮ್ಮ ಶೂರತನದ ಪ್ರಜ್ಞೆ ತಿಳಿಯದ ಅವಿವೇಕಿಗಳು ನಾವಲ್ಲ. ಈ ದೇಶ, ಈ ನೆಲ, ನಮ್ಮದು ನಮ್ಮವರು ನಾವು ಆಳಬಲ್ಲವರೂಂತ ಮಾಡಿ ತೋರ್ಸೋಣು ಸರದಾರ್ರೇ.."[೧೭] ಸ್ವಾತಂತ್ರ್ಯ ಸ್ವಾಭಿಮಾನವನ್ನು ನಾವು ಎಂದಿಗೂ ಬಿಟ್ಟು ಕೊಡುವುದಿಲ್ಲವೆಂದು ರಾಯಣ್ಣ ಈ ಮಾತುಗಳಿಂದ ತಿಳಿದು ಬರುತ್ತದೆ.

ಬೀಡಿ ಕಚೇರಿಯ ಮೇಲೆ ದಾಳಿ ಮಾಡುವುದರೊಂದಿಗೆ ರಾಯಣ್ಣನ ಹೋರಾಟ ಆರಂಭವಾಗುತ್ತದೆ. ರಾಯಣ್ಣನಿಗೆ ಬೀಡಿ ಕಚೇರಿಯಲ್ಲಿ ಸಾಕಷ್ಟು ಹಣವಿದೆ ಎನ್ನುವ ವಿಷಯವನ್ನು ತಿಳಿದು ದಾಳಿ ಮಾಡುತ್ತಾನೆ. ರಾಯಣ್ಣ ಹಾಗೂ ತಂಡದವರು ಬ್ರಿಟಿಷರ ಕಚೇರಿಗಳ ಮೇಲೆ ದಾಳಿ ಮಾಡಿದಂತಹ ಸಂದರ್ಭದಲ್ಲಿ ಹಣ, ಸರ್ಕಾರಿ ಕಾಗದ ಪತ್ರಗಳ ನಾಶ, ಮದ್ದು ಗುಂಡುಗಳನ್ನು ತೆಗೆದುಕೊಳ್ಳುವುದು ಹಾಗೂ ಬ್ರಿಟಿಷ್ ನೌಕರರನ್ನು ಬೆದರಿಸುವ ಕೆಲಸಗಳನ್ನು ಮಾಡುತ್ತಿದ್ದರು. "ಬ್ರಿಟೀಷರು ಮಾತ್ರ ನಮ್ಮ ವೈರಿಗಳಲ್ಲ. ರಾಣಿಯವರ ರಾಜ್ಯದಲ್ಲಿ ಸಂಸ್ಥಾನದ ಸಂಪತ್ತು ಕದ್ದು ಕಲೆ ಹಾಕಿರೋ ದೇಸೀ ಅಧಿಕಾರಿಗಳೂ ನಮ್ಮ ಶತೃಗಳೇ. ಸ್ವತಂತ್ರ ಸೇನೆ ಕಟ್ಟಲು ಆ ಸಂಪತ್ತನ್ನು ಅವರಿಂದ ಕಕ್ಕಿಸಬೇಕು. ಇಲ್ಲದ್ದಿದ್ರೆ ಅವರ ಮನೆಗಳನ್ನು ಲೂಟೀ ಮಾಡಬೇಕು. ಪರದೇಶಿಯರ ಗುಲಾಮರಾಗಿ ದೇಶಪ್ರೇಮಿಗಳ ಮೇಲೆ ಅತ್ತಯಾಚಾರ ಮಾಡ್ತಾಯಿರೋ ದೇಶದ್ರೋಹಿಗಳೇ ನಮ್ಮ ವೈರಿಗಳು. ಅವರನ್ನು ಮುಗಿಸಬೇಕು. ಆ ಕೆಂಪುಕೋತಿಗಳ ಹತ್ತಿರವಿರುವ ರೊಕ್ಕ ಮಾತ್ರವಲ್ಲ ಆಯುಧಗಳು, ಮದ್ದು ಗುಂಡು ಲೂಟಿ ಮಾಡಬೇಕು. ಅವರ ಆಡಳಿತ ಸೂತ್ರವನ್ನೇ ಕಡಿದು ಹಾಕಬೇಕು. ರಾತ್ರಿ ಹಗಲು ಭಯದ ವಾತಾವರಣದಲ್ಲಿ ಅವರು ಜೀವಿಸುವಂತಾಗಬೇಕು. ಕಿತ್ತೂರಿನಿಂದ ತಾವಾಗಿಯೇ ಕಾಲು ಕೀಳುವಂತೆ ಒತ್ತಡ ತರಬೇಕು."[೧೮] ಕಿತ್ತೂರಿನಿಂದ ಬ್ರಿಟಿಷರನ್ನು ಹೊರಹಾಕಲು ರಾಯಣ್ಣ ಹಾಗೂ ರಾಯಣ್ಣನ ಸಹಚರರು ಹಗಲು ರಾತ್ರಿಗಳೆನ್ನದೆ ಬ್ರಿಟಿಷರ ವಿರುದ್ಧ ದಾಳಿಗಳನ್ನು ಮಾಡುತ್ತಿದ್ದರು. ದಾಳಿ ಮಾಡಿದಂತಹ ಸಂದರ್ಭದಲ್ಲಿ ಖಜನೆಯಲ್ಲಿದ್ದಂತಹ ಹಣ, ಮದ್ದು ಗುಂಡುಗಳು, ಕಾಗದ ಪತ್ರಗಳ ನಾಶ ಈ ರೀತಿಯಲ್ಲಿ ಬ್ರಿಟಿಷರಿಗೆ ಕಾಡತೊಡಗುತ್ತಾನೆ.

ಬಷೀರ್ ಅವರ ಈ ನಾಟಕದಲ್ಲಿ ಸಂಗೊಳ್ಳಿ ರಾಯಣ್ಣ ಕಿತ್ತೂರು ಕೋಟೆಯನ್ನು ವಶಪಡಿಸಿಕೊಳ್ಳುವುದಕ್ಕೆ ಬಂದಿದ್ದನೆಂದು ಹೇಳಿದ್ದಾರೆ. ರಾಯಣ್ಣ ಯಾವುದೇ ಪ್ರದೇಶವನ್ನಾಗಲಿ,

ಕೋಟೆಯನ್ನಾಗಲಿ ವಶಪಡಿಸಿಕೊಂಡಿರಲಿಲ್ಲ. "ಕ್ರಾಂತಿವೀರರೆ, ದೇಶಪ್ರೇಮಿಗಳೇ ನಾವೀಗ ಕಿತ್ತೂರ ಬಳಿ ಬಂದಿದ್ದೇವೆ. ಕಿತ್ತೂರು ಕೋಟೆ ನಮ್ಮದಾಗಬೇಕು. ಜಯದ ಬಾವುಟ ಹಾರಿಸಬೇಕು. ಇದು ನಮ್ಮ ಗುರಿ. ಅಂಗ್ರೇಜರ ದೊಡ್ಡ ದಂಡು ಕೋಟೆ ಕಾಯೋಕೆ ಸಿದ್ದ ಆಗಿ ನಿಂತದ. ನೋಡ್ರಿ ಅಲ್ಲಿ ನಾವು ಓಡಾಡಿದ, ವೈಭವದಲ್ಲಿ ಮೆರೆದಾಡಿದ ಕೆಚ್ಚೆದೆಗೆ, ದಿಟ್ಟತನಕ್ಕೆ ಸಾಕ್ಷಿಯಾಗಿ ನಿಂತಿರುವ ಶಿಥಿಲವಾದ ಕಿತ್ತೂರಿನ ಕೋಟೆ ನಮ್ಮ ಎಲುಬು ಮಾಂಸ ಖಂಡ ರಕ್ತದಿಂದ ಈ ಬಿದ್ದು ಹೋದ ಕೋಟೆಯನ್ನು ಮತ್ತೆ ಕಟ್ಟಬೇಕು. ಅಲ್ಲಿ ಮುರಿದ ಗೋಪುರ ಪಾಳು ದೇಗುಲಗಳು ರಾಜ ಬೀದಿಗಳು ನೋಡಿದ್ರ ದು:ಖ ರೋಷ ಬರತೈತಿ. ಕಿತ್ತೂರಿನ ಮೊದಲನೆ ಯುದ್ಧದಲ್ಲಿ ಧಾರವಾಡದ ಕಲೆಕ್ಟರ್ ಥ್ಯಾಕರೆ ಸೈನ್ಯ ನಿಲ್ಲಿಸಿ ಕೂಡಲೇ ಶರಣಾಗಬೇಕಾಗಿ ಎಂದು ಸಾರಿದಾಗ ರಾಣಿ ಚೆನ್ನಮ್ಮನವರು ರಣಚಂಡಿಯಾಗಿ ದಂಡನ್ನುದ್ದೇಶಿಸಿ ಮಾಡಿದ ಘರ್ಜನೆ."[೧೯] ಕಿತ್ತೂರಿನ ಕೋಟೆಯನ್ನು ವಶಪಡಿಸಿಕೊಳ್ಳುವುದಕ್ಕೆ ಬಂದಂತಹ ಸನ್ನಿವೇಶವೆಂದು ನಾಟಕಕಾರರು ಹೇಳಿದ್ದಾರೆ. ರಾಯಣ್ಣನನ್ನು ವೈಭವೀಕರಿಸುವುದಕ್ಕೆ ಈ ರೀತಿಯಲ್ಲಿ ಹೇಳಿದ್ದಾರೆ.

ಬಷೀರ್ ಅವರ ಸಂಗೊಳ್ಳಿ ರಾಯಣ್ಣ ನಾಟಕವು ರಾಯಣ್ಣನ ಹೋರಾಟದ ಹಾಗೂ ರಾಯಣ್ಣನ ಸ್ನೇಹಿತರ ಕುರಿತು ತಿಳಿಯಲು ಸಹಾಯಕವಾಗುತ್ತದೆ. ಕಿತ್ತೂರು ಸಂಸ್ಥಾನವನ್ನು ಸ್ವಾತಂತ್ರ್ಯಗೊಳಿಸುವುದಕ್ಕೆ ಹೋರಾಟ ಮಾಡಿದ ರಾಯಣ್ಣನ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ.

**ಸಂಗೊಳ್ಳಿ ರಾಯಣ್ಣ**

ರಾಜಾನಂದ್ ಅವರ ಸ್ವಾತಂತ್ರ್ಯ ಸಂಗ್ರಾಮದ ಚಾರಿತ್ರಿಕ ನಾಟಕ ಸಂಗೊಳ್ಳಿ ರಾಯಣ್ಣ ಕಿತ್ತೂರ ಸಂಸ್ಥಾನ ಬ್ರಿಟಿಷರ ವಶವಾದ ನಂತರದ ಘಟನೆಗಳಿಂದ ಹಾಗೂ ರಾಣಿ ಚೆನ್ನಮ್ಮಳ ಸೆರೆಮನೆಯ ದೃಶ್ಯದಿಂದ ನಾಟಕವು ಆರಂಭವಾಗುತ್ತದೆ. ಕನ್ನಡ ನಾಡು-ನುಡಿ ಕನ್ನಡಿಗರ ಧೈರ್ಯ ಸಾಹಸಗಳಂತಹ ಮಾತುಗಳ ಜೊತೆಗೆ ಕಿತ್ತೂರಿನ ಪತನಕ್ಕೆ ಕಾರಣವಾದಂತಹ ದೇಶದ್ರೋಹಿಗಳ ಬಗ್ಗೆ, ದ್ರೋಹಿಗಳು ಬ್ರಿಟಿಷರ ಜೊತೆ ಸೇರಿ ಕಿತ್ತೂರಿಗೆ ಮಾಡಿದ ಅನ್ಯಾಯವನ್ನು ಹೇಳುತ್ತದೆ. ರಾಯಣ್ಣನ ಕುರಿತು ಮಾಹಿತಿಯನ್ನು ತಿಳಿಯಲು ಸಹಾಯಕವಾಗುತ್ತದೆ. ರಾಯಣ್ಣನ ಹೋರಾಟ ಕೊನೆಗೂ ಸಹ ಅನ್ಯಾಯದ ಮೂಲಕ ಸೆರೆಹಿಡಿದು ಗಲ್ಲಿಗೇರಿಸುವುದರ ಮೂಲಕ ನಾಟಕ ಕೊನೆಗೊಳ್ಳುತ್ತದೆ.

ಕಿತ್ತೂರು ಪತನಗೊಂಡ ನಂತರ ರಾಯಣ್ಣ ಮತ್ತೆ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಬೇಕೆಂದು ಸೆರೆಮನೆಯಲ್ಲಿರುವಂತಹ ರಾಣಿ ಚೆನ್ನಮ್ಮಳನ್ನು ಮಾರುವೇಶದಲ್ಲಿ ಸಂಧಿಸಿ, ಕಿತ್ತೂರಿನ ಅನೇಕ ವೀರರ ಜೊತೆ ಸೇರಿ ಮತ್ತೆ ಕಿತ್ತೂರನ್ನು ಸ್ವಾತಂತ್ರಗೊಳಿಸುತ್ತೇನೆಂದು ಹೇಳುತ್ತಾನೆ. ರಾಣಿ ಚೆನ್ನಮ್ಮ ಕಿತ್ತೂರಿನ ಬಿಡುಗಡೆಯ ಕನಸನ್ನು ಕಾಣುತ್ತಾ ಸೆರೆಮನೆಯಲ್ಲಿ ಜೀವನವನ್ನು ಸಾಗಿಸುತ್ತಾಳೆ. ರಾಯಣ್ಣ ಸೈನ್ಯವನ್ನು ಸಂಘಟಿಸುವ ಸಂದರ್ಭದಲ್ಲಿ ಚನ್ನಬಸವ ಸ್ವಾತಂತ್ರ್ಯ ಸ್ವಾಭಿಮಾನವನ್ನು ಕುರಿತು

**ರಾಯಣ್ಣ** – ಹಾಳು ಮಾಡಿದ ಖೂಳರನ್ನು ಈಗ ಬೀಳ ಹೊಯ್ದು ಅವರ ಕರುಳ ಕಿತ್ತು ನೆತ್ತರ ಹರಿಸಿ ಬಿಡುತ್ತೇನೆ ಪ್ರಭು. ಅಂಧಕಾರದ ಅಳಲಿನಲ್ಲಿ ತೊಳಲುತ್ತಿರುವ ಕನ್ನಡಿಗರನ್ನು ಹಡೆದೆಬ್ಬಿಸಿ, ಕೆಚ್ಚಿನಿಂದ ಕಾದಾಡುವ ಕಲಿಗಳನ್ನಾಗಿ ಮಾಡಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಿದ್ಧ ಮಾಡಿದ್ದೇನೆ. ಎಲ್ಲರೂ ಹಿರಿದ ಖಡ್ಗಗಳಿಂದ ಬಿಳಿಯರ ತಲೆಗಳನ್ನು ತುಂಡರಿಸಲು ತವಕಿಸುತ್ತಿದ್ದಾರೆ. ಹೀಗಿರುವಲ್ಲಿ ತಾವು ನಮ್ಮ ಪರಿಪಾಲನೆಯ ಪ್ರಭುಗಳಾಗಿರಲು ಒಪ್ಪಬೇಕು ಪ್ರಭು–ಒಪ್ಪಲೇಬೇಕು.

**ಬಿಚ್ಚುಗತ್ತಿ** – ಅಹುದು ಪ್ರಭುಗಳೆ. ವೀರ ಕನ್ನಡಿಗರ ಬಾಹುಬಲ ಪ್ರದರ್ಶನಕ್ಕೆ ಇದೊಂದು ಪರ್ವಕಾಲ. ನಮ್ಮನ್ನು ವಂಚಿಸಿದವರನ್ನು ಸಂಚು ಹೂಡಿ ಸದೆಬಡಿಯಬೇಕು, ವಿದ್ರೋಹ ನಡೆಸಿದವರನ್ನ ಛಿದ್ರಛಿದ್ರವಾಗಿ ಕತ್ತರಿಸಬೇಕು. ವೈರಿಗಳನ್ನು ಕುಟ್ಟಿ ಅವರ ಎದೆ ಮೆಟ್ಟಿ ದಿಟ್ಟ ಹೃದಯದಿಂದ ಕಟ್ಟ ಕಡೆಯವರೆಗೂ ಒಟ್ಟಿಗೆ ಹೋರಾಟ ನಡೆಸಲು ವೀರ ಕನ್ನಡಿಗರು ಸಿದ್ದರಿರುವಾಗ ತಾವು ಸಾಧ್ಯವಿಲ್ಲ ಎನ್ನಲಾಗದು ತಮಗಾಗಿ, ಈ ಕಿತ್ತೂರ ನೆಲಕ್ಕಾಗಿ ನಾವು ತಲೆಗೊಡಲು ಸಿದ್ದರಿದ್ದೇವೆ. ಒಪ್ಪಿಕೊಳ್ಳಿ ದೊರೆಗಳೆ ಒಪ್ಪಿಕೊಳ್ಳಿ.

**ರಾಯಣ್ಣ** – ದೊರೆಗಳೆ, ಕನ್ನಡಿಗರಾಳಿದ ಈ ಕಲ್ಯಾಣ ಭೂಮಿಯನ್ನು ಕುಹಕ ಕರ್ಮಿಗಳಾದ ಪರಕೀಯರ ಪಾಲು ಮಾಡಲು ಮುತ್ಸದ್ದಿತನ ಮಾಡಿದ ಮನೆ ಮುರುಕರು ಮೂರು ಜನರಾದರೆ, ಎದೇ ನಾಡಿನ ಹಿರಿಮೆಯನ್ನು ಗುರುಯಾಗಿಸಿಕ್ಕೊಂಡು, ಈ ಮಣ್ಣಿನ ಮಮತೆಗಾಗಿ ತಮ್ಮ ದೇಹಗಳನ್ನು ಮುಡುಪಾಗಿರಿಸಿ ಮರಣ ಹೊಂದಿದವರು ಮೂರು ಸಾವಿರಕ್ಕೂ ಮೀಗಿಲಾಗಿದ್ದಾರೆ. ಕಿತ್ತೂರಿನ ಕೀರ್ತಿ ಧ್ವಜವನ್ನು ಕೆಳಗಿಳಿಸಬಾರದೆಂದು ಕಡೆಯವರೆಗೂ ಕಲಿಯಂತೆ ಛಲದಿಂದ ಹೋರಾಡಿದ ಹಿರಿಯ ಸೇನಾಪತಿ ಗುರುಸಿದ್ದಪ್ಪನ ಗಂಡೆದೆಗೆ ಗುಂಡಿಟ್ಟು ಕೊಂದರಂತೆ. ಕನ್ನಡಿಗರು ಕಲಿಗಳಾಗಿ ಹುಲಿಗಳಂತೆ ಕಾದಾಡಿ ಎಂದಿಗೆ ಕಿತ್ತೂರ ಕೋಟೆಯ ಮೇಲೆ ಕನ್ನಡ ಧ್ವಜವನ್ನು ಸ್ಥಾಪಿಸುವರೋ ಎಂದು ಕನಸಿನ ಕಣ್ಣೀರಿನ ಕಡಲಲ್ಲಿ ಕೊಚ್ಚಿ ಹೋಗುತ್ತಿದ್ದಾಳೆ. ಕಿತ್ತೂರಿನರಸಿ ಚೆನ್ನಮ್ಮ ತಾಯಿ. ಇದೆಲ್ಲವನ್ನು ಸ್ಮರಿಸಿಯಾದರು, ತಾವು ನಮ್ಮ ದಣಿಯಾಗಿರಲು ದಯೆ ತೋರಿ ಪ್ರಭು ದಯೆ ತೋರಿ"[೨೦]

ಕಿತ್ತೂರಿನ ಜನತೆ ಸ್ವಾತಂತ್ರ್ಯ ಸ್ವಾಭಿಮಾನದಿಂದ ಕೂಡಿದ್ದರೆನ್ನುವುದಕ್ಕೆ ಹಾಗೂ ಕಿತ್ತೂರು ಸಂಸ್ಥಾನದ ಪತನಕ್ಕೆ ಕಾರಣವಾದಂತಹ ದ್ರೋಹಿಗಳನ್ನು ಸದೆಬಡಿಯುವುದಕ್ಕೆ ವೀರರಿಗೆ ಇದು ಒಳ್ಳೆಯ ಸಮಯ ಎಂದು ರಾಯಣ್ಣನಿಗೆ ಚನ್ನಬಸವ ಹೇಳುತ್ತಾನೆ.

ರಾಯಣ್ಣನ ಹೋರಾಟದ ಸಿದ್ಧತೆಯ ಸಂದರ್ಭದಲ್ಲಿ ಸಮಾನ ಮನಸ್ಕರೊಂದಿಗೆ ಸೇರಿ, ಸ್ನೇಹಿತರ ಜೊತೆ ಚರ್ಚಿಸಿ ಮುಂದಿನ ಯೋಜನೆಗಳನ್ನು ರೂಪಿಸಿಕೊಳ್ಳುತ್ತಾನೆ. ಕಿತ್ತೂರಿನ ಜನತೆಯ ಸಹಾಯ ಹಾಗೂ ಸಹಕಾರ ದೊರೆಯಬೇಕಾದರೆ ನಾವು ಕಿತ್ತೂರು ಸಂಸ್ಥಾನಕ್ಕೆ ದತ್ತು ತೆಗೆದುಕೊಂಡಿದ್ದ ಮಾಸ್ತಮರಡಿಯ ಬಾಳಪ್ಪ ಗೌಡರ ಮಗ ಶಿವಲಿಂಗಪ್ಪ [ಸವಾಯಿ ಮಲ್ಲಸರ್ಜ]ನನ್ನು ಮುಂದಿಟ್ಟುಕೊಂಡು ಹೋರಾಟ ಮಾಡಬೇಕೆಂದು ಹೇಳುತ್ತಾನೆ. ನಂತರದ ಸಂದರ್ಭದಲ್ಲಿ ಸವಾಯಿ ಮಲ್ಲಸರ್ಜನ ಹೆಸರಿನಲ್ಲಿ ಹೋರಾಟವನ್ನು ಮಾಡುತ್ತಾರೆ. ದತ್ತು ಪುತ್ರನಾದ ಸವಾಯಿ ಮಲ್ಲಸರ್ಜನು ಚಿಕ್ಕವನಾಗಿದ್ದರಿಂದ ಅವನ ರಕ್ಷಣೆಗಾಗಿ ಹಂಡಿಬಡಗನಾಥ ಬೆಟ್ಟದಲ್ಲಿ ಇರುವಂತಹ ನಾಥಪಂಥದವರ ಬಳಿ ಇಟ್ಟಿರುತ್ತಾರೆ. ಈ ವಿಷಯದ ಕುರಿತು ರಾಯಣ್ಣನು 'ವೈರಿಗಳು ನಮ್ಮ ನೆಲೆ ಹುಡುಕುವ ಪ್ರಯತ್ನಗಳನ್ನು ನಡೆಸುತ್ತಿರುವುದರಿಂದ ಕಿತ್ತೂರಿನ ಸುವರ್ಣ ಸಿಂಹಾಸನಕ್ಕೆ ಅಧಿಪತಿಯಾಗಬೇಕಿರುವ ತಮ್ಮನ್ನು ನಾಥಪಂಥದ ಗುರುಗಳಾದ ಶ್ರೀ ಶ್ರೀ ಶ್ರೀ ಹಂಡಿಬಡಗನಾಥರ ಗುಡ್ಡದ ಮಠದಲ್ಲಿ ಮರೆಯಾಗಿಸಬೇಕೆಂದು ತೀರ್ಮಾನಿಸಿದ್ದೇನೆ. ಕಾದಾಡಲು ಬಿಚ್ಚುಗತ್ತಿಗಳೊಡನೆ ಸಿದ್ಧರಾಗಿರುವ ವೀರ ಯೋಧರು ಅದೇ ಗುಡ್ಡದಲ್ಲಿ ಕಾದಿದ್ದಾರೆ. ತಮ್ಮನ್ನು ಸುರಕ್ಷಿತವಾಗಿ ನೋಡಿಕೊಳ್ಳಲು ವೀರ ಹುಲಿಗಳು ಸಿದ್ಧವಾಗಿವೆ.'[೨೧] ಕಿತ್ತೂರಿನ ಮುಂದಿನ ದೊರೆಯಾಗುವ ಶಿವಲಿಂಗಪ್ಪನನ್ನು ರಾಯಣ್ಣನು ತಾವಿರುವಂತಹ ಪ್ರದೇಶದಲ್ಲಿನ ನಾಥಪಂಥದ ಗುರುಗಳ ಹತ್ತಿರ ಸುರಕ್ಷಿತವಾಗಿಟ್ಟಿದ್ದರು. ಹಂಡಿಬಡಗನಾಥ ಬೆಟ್ಟವು ರಾಯಣ್ಣನ ಅಡಗು ತಾಣಗಳಲ್ಲಿ ಒಂದಾಗಿತ್ತು. ಹಾಗೆಯೇ ರಾಯಣ್ಣನ ಹೋರಾಟಕ್ಕೆ ಸಲಹೆ ಸೂಚನೆಗಳನ್ನು ನೀಡುತ್ತಿದ್ದರು. ಕಿತ್ತೂರಿನ ದತ್ತು ಪುತ್ರನಾದ ಶಿವಲಿಂಗಪ್ಪ (ಸವಾಯಿ ಮಲ್ಲಸರ್ಜ)ನನ್ನು ರಾಯಣ್ಣನು ಈ ಹಂಡಿ ಬಡಗನಾಥ ಬೆಟ್ಟದ ನಾಥ ಪಂಥದ ಗುರುಗಳಾದ ಶ್ರೀ, ಶ್ರೀ, ಶ್ರೀ ಹಂಡಿಬಡಗನಾಥರ ಹತ್ತಿರ ಸುರಕ್ಷಿತವಾಗಿರಿಸಿ ಕಿತ್ತೂರಿನ ಜನತೆಯಿಂದ ಸಹಾಯ ಸಹಕಾರಗಳನ್ನು ಪಡೆದುಕೊಳ್ಳುತ್ತಾರೆ. ರಾಯಣ್ಣನು ಹೋರಾಟದ ಸಿದ್ಧತೆಗಳನ್ನು ಮಾಡಿಕೊಂಡು ರಾಣಿ ಚೆನ್ನಮ್ಮಳನ್ನು ಜಂಗಮ ವೇಶಧರಿಸಿಕೊಂಡು ಹೋಗಿ ಹೋರಾಟದ ಸಿದ್ಧತೆಗಳನ್ನು ಹೇಳಿ, ಆಶೀರ್ವಾದವನ್ನು ಪಡೆದು ಬರುತ್ತಾನೆ. ಸೈನ್ಯವನ್ನು ಸಂಘಟಿಸಿ ಬ್ರಿಟಿಷರ ಕಚೇರಿಗಳ ಮೇಲೆ ದಾಳಿಯನ್ನು ಮಾಡುತ್ತಾನೆ. ಕಚೇರಿಯಲ್ಲಿದ್ದ ಹಣವನ್ನು ತೆಗೆದುಕೊಂಡು ಕಾಗದ ಪತ್ರಗಳನ್ನೆಲ್ಲ ಸುಟ್ಟು ಹಾಕುತ್ತಾನೆ.

ರಾಯಣ್ಣನ ದಾಳಿಗಳಿಂದ ಬ್ರಿಟಿಷರು ಕಂಗೆಟ್ಟು ರಾಯಣ್ಣನನ್ನು ಬಂಧಿಸುವುದರ ಕುರಿತು ಸಂಚನ್ನು ರೂಪಿಸುತ್ತಾರೆ. ಈ ನಾಟಕದಲ್ಲಿ ಸಂಗೊಳ್ಳಿ ಕುಲಕರ್ಣಿ ಹಾಗೂ ಕೃಷ್ಣರಾವ್ ಅವರ ಪಾತ್ರವು ಬಹಳ ಮುಖ್ಯವಾಗುತ್ತದೆ. ನಾಟಕದ ಪ್ರತಿಯೊಂದು ಸಂದರ್ಭದಲ್ಲಿಯೂ ರಾಯಣ್ಣನನ್ನು ಸೆರೆಯಿಡಿಯುವುದರ ಕುರಿತು ಸಂಚನ್ನು ರೂಪಿಸುತ್ತಾರೆ. ನೇಗಿನಹಾಳದ ವೆಂಕನಗೌಡನನ್ನು ಭೇಟಿಯಾಗಿ ರಾಯಣ್ಣನನ್ನು ಹಿಡಿದುಕೊಡಬೇಕೆಂದು ಆಸೆ, ಆಮಿಷಗಳನ್ನೊಡ್ಡುತ್ತಾರೆ. ನೇಗಿನಹಾಳದ ಓಲೆಕಾರನಾದ ಲಕ್ಕಪ್ಪನನ್ನು ಜೊತೆಗೆ ಸೇರಿಸಿಕೊಳ್ಳುತ್ತಾರೆ. ಲಕ್ಕಪ್ಪ ರಾಯಣ್ಣನ ಸೋದರ ಮಾವ. ತಂಗಿಯ

ಗಂಡನನ್ನು ವೆಂಕನಗೌಡ ರಾಯಣ್ಣನನ್ನು ಹಿಡಿಯುವುದಕ್ಕೆ ಕೆಲವು ಸಿಪಾಯಿಗಳನ್ನು ಲಕ್ಕಪ್ಪನ ಮನೆಯ ಸುತ್ತಲೂ ಬಿಟ್ಟಿರುತ್ತಾನೆ. ಅಂದು ವಿಜಯದಶಮಿಯ ದಿನ ರಾಯಣ್ಣನು ತಂಗಿಯನ್ನು ಮಾತನಾಡಿಸುವುದಕ್ಕೆ ಮನೆಗೆ ಬಂದಿರುತ್ತಾನೆ. ಬಂದ ಸಂದರ್ಭದಲ್ಲಿ ಆಂಗ್ಲ ಸಿಪಾಯಿಗಳು ರಾಯಣ್ಣನಿಗೆ ಗುಂಡು ಹಾರಿಸುತ್ತಾರೆ. ಆಗ ತಂಗಿ ರಾಯಣ್ಣನನ್ನು ಉಳಿಸಿ ತಾನು ಸಾವನ್ನಪ್ಪುತ್ತಾಳೆ.

**ರಾಯಣ್ಣ** – "ಆಹ ನನ್ನಮ್ಮ ನನ್ನೆದುರು ನೀನೆ ಜಗನ್ಮಾತೆಯಂತೆ ಕಾಣುತ್ತಿರುವೆಯಮ್ಮ ನಿನ್ನಂತಹ ಅಕ್ಕರೆಯ ತಂಗಿಯನ್ನು ಪಡೆದ ನಾನೆ ಭಾಗ್ಯಶಾಲಿ ಎಂದು ಅಪ್ಪಿಕೊಳ್ಳುವನು. ಮಾಯವ್ವ ತಟ್ಟನೆ ನೋಡಿ ಅಣ್ಣಾ ಎಂದು ಅಡ್ಡ ಬರುವಷ್ಟರಲ್ಲಿ ಗುಂಡುಗಳು ದನ್ ದನ್ ಎಂದು ಹಾರುತ್ತವೆ. ರಾಯಣ್ಣ ಮಾಯವ್ವ ಎಂದು ಚೀರುತ್ತಾನೆ. ಮಾಯವ್ವ ಪೆಟ್ಟುತಾಗಿ ಕೆಳಗುರುತ್ತಾಳೆ

**ರಾಯಣ್ಣ** – ತಂಗೀ ನಾಲಿಗೆ ಹಿಡಿಯುತ್ತಿದೆ. (ಉಕ್ಕುತ್ತಿರುವ ದು:ಖದಿಂದ) ವೀರಸ್ವರ್ಗದಲ್ಲಿರುವ ಚೆನ್ನಮ್ಮನನ್ನು ಕಂಡು, ರಾಯ ಸ್ವಾತಂತ್ರ್ಯತೆಗಾಗಿ ಸೆಣೆಸುತ್ತಿದ್ದಾನೆ, ಅವನನ್ನು ಅಲ್ಲಿಂದಲೇ ಆಶೀರ್ವದಿಸಬೇಕಂತೆ ಎಂದು ಹೇಳಮ್ಮ (ಎದ್ದು ಬಂದು) ಗಂಡಸುತನವಿಲ್ಲದ ಗುಂಡಿಗೆ ಹೊತ್ತ ಷಂಡ ನನ್ನ ಮಕ್ಕಳು ಮರೆಯಲ್ಲಿ ನಿಂತು ಗುಂಡು ಹಾಕಿದ ಭಂಡರು ನನಗೆದುರಾಗಿದ್ದರೆ ಅವರ ಎದೆ ಬಗೆದು ಅವರ ಬಿಸಿ ರಕ್ತದಿಂದ ನನ್ನ ತಂಗಿಯ ಆತ್ಮಕ್ಕೆ ಶಾಂತಿ ಸ್ನಾನಮಾಡಿಸುತ್ತಿದ್ದೆ."[೨೨]

ರಾಯಣ್ಣನ ತಂಗಿಯ ಕುರಿತು ಎಲ್ಲಿಯೂ ದಾಖಲೆಗಳಿಲ್ಲ. ಆದರೆ ಜನಪದ ಸಾಹಿತ್ಯದಲ್ಲಿ ಕೆಲವೇ ಕೆಲವು ಹಾಡುಗಳಲ್ಲಿ ಮಾತ್ರ ತಂಗಿಯ ಪ್ರಸ್ತಾಪ ಬರುತ್ತದೆ. ಈ ನಾಟಕದಲ್ಲಿ ರಾಯಣ್ಣನ ತಂಗಿಯ ಚಿತ್ರಣವನ್ನು ನೀಡಿದ್ದಾರೆ. ಬ್ರಿಟಿಷರು ರಾಯಣ್ಣನನ್ನು ಹಿಡಿಯಲು ಹಗಲು ರಾತ್ರಿ ಹುಡುಕುತ್ತಿರುವ ಸಂದರ್ಭದಲ್ಲಿ ನಡೆಯುವ ಈ ಘಟನೆಯಲ್ಲಿ ಮಾಯವ್ವ ರಾಯಣ್ಣನನ್ನು ಉಳಿಸಿ ತಾನು ಸಾವನ್ನಪ್ಪುತ್ತಾಳೆ.

ರಾಯಣ್ಣನನ್ನು ಬಾಲಾಜಿಯು ಬ್ರಿಟಿಷರಿಗೆ ಹಿಡಿದು ಕೊಡುತ್ತೇನೆ ಎಂದು ಹೇಳಿದಾಗ ಬಾಲಾಜಿಯ ಪ್ರೇಯಸಿಯಾದ ಮೀನಾಕ್ಷಿಯು 'ನೀವು ಕುಡಿದು ಕೆಡೋದು ಅಲ್ಲದೆ ಅ ಬಿಳಿಯರ ಬೆನ್ನುಹತ್ತಿ ಅವರ ಬೂಟುಕಾಲು ಬೆರೆಸಿ ನಮ್ಮ ಜನನ ಬೇಯಿಸಬೇಕು ಅಂತ ಬಗೆದಿದ್ದೀರಿ. ನಿಮ್ಮ ಎದೆ ಬಗೆಯೊಕೆ ರಾಯಣ್ಣ ಕಾದಿದ್ದಾನೆ.'[೨೩] ಎಂದು ಹಂಗಿಸುತ್ತಾಳೆ. ಮುಂದುವರೆದು 'ಇಲ್ಲಿ ನೋಡಿ ಇಂಗ್ಲಿಷ್ನೋರ ಎಂಜಲು ತಿನ್ನೊ ನಾಯಿ ನರಿಗಳಿಗೆ ಸೊಪ್ಪು ಹಾಕೊ ಹೆಣ್ಣಲ್ಲ ನಾನು'[೨೪] ಎಂದು ಬಾಲಾಜಿಯನ್ನು ದಬಾಯಿಸುತ್ತಾಳೆ. ಬ್ರಿಟಿಷರ ಅನ್ಯಾಯ, ದೌರ್ಜನ್ಯವನ್ನು ಅಂತ್ಯ ಮಾಡುವುದಕ್ಕೆ ರಾಯಣ್ಣ ಹೋರಾಟ ಮಾಡುತ್ತಾನೆ. ಮೀನಾಕ್ಷಿಯಲ್ಲಿಯೂ ಕಿತ್ತೂರು ನಾಡಿನ ಸ್ವಾತಂತ್ರ್ಯ ಪ್ರೇಮ, ಅಭಿಮಾನವಿರುವುದನ್ನ ನಾವಿಲ್ಲಿ ಕಾಣುತ್ತೇವೆ.

ರಾಯಣ್ಣ ಯುದ್ಧದ ಮೂಲಕ ದೇಶನೂರು ಕೋಟೆಯನ್ನು ವಶಪಡಿಸಿಕೊಂಡಿರುವುದರ ಕುರಿತು ಮಾಹಿತಿ ಉಲ್ಲೇಖಗೊಂಡಿದೆ.

**ಗಜವೀರ** – (ಓಡಿಬಂದು) ಕೈಲಾಗದ ಆಂಗ್ಲರ ಕುಹಕದಿಂದ ಹೋರಾಡುತ್ತಾರೆ. ಎದುರಾಗುವ ಎದೆಗಾರಿಕೆ ಅವರಿಗಿಲ್ಲ. ಹಿಡಿಯಿರಿ ಕಡಿಯಿರಿ ಕೆನ್ನೀರಿನಕೋಡಿ ಹರಿಸಿರೀ, ಕಿತ್ತೂರನ್ನಾಕ್ರಮಿಸಿದ ಕೇಡಿಗರ ನೆತ್ತರು ನೀರಿನಂತೆ ಹರಿಯಲೀ..

**ಕ್ಯಾಪ್ಟನ್** – (ಗಜವೀರನಿಗೆದುರಾಗಿ) you black ನೀಗ್ರೋ I will butcher you ಣಿಣ್ಣನ್ನು ಕೊಲ್ಲುಟ್ಟಾನೆ.

**ರಾಯಣ್ಣ** – (ಅವನ ಹಿಂದೆ ಬಂದು) ಅದು ನಿಮ್ಮಪ್ಪನ ಕೈಯಲ್ಲೂ ಸಾಧ್ಯವಿಲ್ಲ. ಕನ್ನಡ ಭೂಮಿಯನ್ನು ತುಳಿದು ಕಲುಷಿತಮಾಡುತ್ತಿರುವ ಕುನ್ನಿಗಳೇ – ನಿಮ್ಮ ಕತ್ತುಗಳನ್ನು ಕತ್ತರಿಸಿ ರಣ ಮಾರಿಗೆ ರುಧಿರದೌತಣ ಮಾಡುತ್ತೇನೆ.

**ಕ್ಯಾಪ್ಟನ್** – You rogue Rayanna ಣಿಣ್ಣ ಗೋಣು ಮುರಿಯುಟ್ಟಾನೆ. You soldiers vacate desoor fort, ಡೇಸೂರು ಕೋಟೆ ಖಾಲಿ ಮಾಡಿ ಓಡೀ.. Rayanna Captured desoor fort, com on run.

**ರಾಯಣ್ಣ** – ಗಜವೀರಣ್ಣ? ದೇಸೂರು ಕೋಟೆಯನ್ನು ಬಿಟ್ಟು ಬಿಳಿಯರು ಓಡುತ್ತಿದ್ದಾರೆ. ವೀರ ಕನ್ನಡಿಗರ ಶೌರ್ಯಶ್ಲಾಘನೀಯ. ದೇಸೂರು ಕೋಟೆ ನಮ್ಮ ಪಾಲಾಯಿತು.

**ಬಿಚ್ಚುಗತ್ತಿ** – ರಾಯಣ್ಣ ಎದುರಾದ ಬಿಳಿಯರನ್ನು ಓಡಿಸಿ ಓಡಿಸಿ ಕೊಂದೆ.

**ರಾಯಣ್ಣ** – ಹಾರಿಸಿ ದೇಸೂರು ಕೋಟೆಯ ಮೇಲೆ ವೀರಕನ್ನಡಿಗರ ನಂದೀಧ್ವಜವನ್ನು."[೨೫]

ಬಾಲಾಜಿ, ಕೃಷ್ಣರಾವ್, ವೆಂಕನಗೌಡ, ಲಕ್ಕಪ್ಪ ಇವರು ರಾಯಣ್ಣನನ್ನು ಬಂಧಿಸುವುದಾಗಿ ೨೦೦ ಜನ ಆಂಗ್ಲ ಸೈನಿಕರೊಂದಿಗೆ ರಾಯಣ್ಣನಿರುವ ಪ್ರದೇಶಕ್ಕೆ ಬಂದು ಸಂಚನ್ನು ರೂಪಿಸಿಕೊಳ್ಳುತ್ತಾರೆ. ರಾಯಣ್ಣ ನಿರಾಯುಧನಾಗಿ ಸ್ನಾನ ಮಾಡುವಾಗ ಆಂಗ್ಲ ಸೈನಿಕರು ರಾಯಣ್ಣನಿಗೆ ಒಮ್ಮೆಲೆ ಮುಗಿಬಿದ್ದು ರಾಯಣ್ಣನನ್ನು ಬಂಧಿಸುತ್ತಾರೆ. ನಂತರ ವಿಚಾರಣೆಯ ನಾಟಕವಾಡಿ ಕೊನೆಗೆ ನಂದಗಡದಲ್ಲಿ ಗಲ್ಲಿಗೇರಿಸುತ್ತಾರೆ.

ರಾಜಾನಂದ ಅವರ ಸಂಗೊಳ್ಳಿ ರಾಯಣ್ಣ ನಾಟಕವು ಸಂಗೊಳ್ಳಿ ರಾಯಣ್ಣನ ಹೋರಾಟದ ಕುರಿತು ತಿಳಿಯಲು ಹೆಚ್ಚು ಸಹಾಯಕವಾಗುತ್ತದೆ. ಈ ನಾಟಕದಲ್ಲಿ ಲೇಖಕರು ಕೆಲವು ಹೊಸ ಪಾತ್ರಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಸಂಗೊಳ್ಳಿಯ ಕುಲಕರ್ಣಿ ಬಾಳಪ್ಪನ ಹೆಸರಿನಲ್ಲಿ ಬಾಲಾಜಿಯಿದ್ದಾನೆ. ಈ ಬಾಲಾಜಿಯ ಪೂರ್ವಪರ ಕುರಿತು ಯಾವುದೇ ಮಾಹಿತಿಗಳಿಲ್ಲ. ಹಾಗೂ ಯಾವುದೇ

ರೀತಿಯ ದಾಖಲೆಗಳನ್ನು ಒದಗಿಸಿಲ್ಲ. ರಾಯಣ್ಣನನ್ನು ಹಿಡಿಯುವುದಕ್ಕೆ ಲಿಂಗನಗೌಡ ಹಾಗೂ ವೆಂಕನಗೌಡ ಪಾತ್ರದ ಚಿತ್ರಣದ ಬದಲು ಇಲ್ಲಿ ವೆಂಕನಗೌಡನನ್ನ ಮಾತ್ರ ಆಯ್ಕೆ ಮಾಡಿಕೊಂಡಿದ್ದಾರೆ. ಇದಕ್ಕೆ ಕಾರಣವೇನು ಎಂಬುದು ಕಂಡುಬಂದಿಲ್ಲ.

ರಾಯಣ್ಣನ ತಂಗಿಯ ಮಾಹಿತಿ ದೊರೆಯುವುದು ಅತಿ ವಿರಳ ಹಾಗೂ ಸಾವಿನ ಕುರಿತು ಎಲ್ಲಿಯೂ ಪ್ರಸ್ತಾಪ ಬರುವುದಿಲ್ಲ. ಲೇಖಕರು ರಾಯಣ್ಣನನ್ನು ಹೆಚ್ಚು ವೈಭವೀಕರಿಸುವ ಬರದಲ್ಲಿ, ರಾಯಣ್ಣನು ತಂಗಿಯನ್ನು ನೋಡಲು ಬಂದಂತಹ ಸಂದರ್ಭದಲ್ಲಿ ಕೆಲವರು ಸಂಚನ್ನು ಹೂಡಿರುತ್ತಾರೆ. ಆದರೆ ಅ ಸಂಚಿಗೆ ಮಾಯವ್ವ ಬಲಿಯಾಗುತ್ತಾಳೆ. ಇಂತಹ ಕೆಲವು ಚಾರಿತ್ರಿಕ ಭಿನ್ನತೆಗಳಿದ್ದರೂ ಸಹ ಈ ನಾಟಕವು ರಾಯಣ್ಣನನ್ನು ಕುರಿತ ನಾಟಕಗಳಲ್ಲಿ ಪ್ರಮುಖವಾದುದಾಗಿದೆ.

**ಹಾಲು ಮತದ ವೀರಗಾಥೆ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ**

ಶಂಕರ ಲಮಾಣಿ ಅವರ 'ಹಾಲು ಮತದ ವೀರಗಾಥೆ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ' ನಾಟಕವು ೪೯ ದೃಶ್ಯಗಳಿಂದ ಕೂಡಿದ್ದು, ಕಿತ್ತೂರು ಸಂಸ್ಥಾನದ ಬಗ್ಗೆ ಸಂಕ್ಷಿಪ್ತವಾಗಿ ಹೇಳುತ್ತಾ, ರಾಯಣ್ಣನ ಕುರಿತು ವಿವರವಾಗಿ ಚಿತ್ರಿಸಲಾಗಿದೆ. ಕಿತ್ತೂರು ಸಂಸ್ಥಾನದ ಸಂಕ್ಷಿಪ್ತ ಚಿತ್ರಣದೊಂದಿಗೆ ಸಂಗೊಳ್ಳಿ ರಾಯಣ್ಣನ ಕುರಿತ ಸಂಪೂರ್ಣ ಮಾಹಿತಿಯನ್ನು ತಿಳಿಯಲು ಈ ನಾಟಕ ಸಹಾಯಕವಾಗುತ್ತದೆ. ನಾಟಕಕಾರರು ಪ್ರತಿಯೊಂದು ದೃಶ್ಯದ ಆರಂಭದಲ್ಲಿ ರಾಯಣ್ಣನ ಕುರಿತು ಇರುವ ಮೌಖಿಕ ಸಾಹಿತ್ಯದ ಪ್ರಕಾರವಾದ ತ್ರಿಪದಿಯ ಮೂಲಕ ಅ ದೃಶ್ಯದ ಕುರಿತು, ಸನ್ನಿವೇಶದ ಕುರಿತಂತಹ ತ್ರಿಪದಿಯನ್ನು ಬಳಸಿಕೊಂಡಿದ್ದಾರೆ.

ರಾಯಣ್ಣನ ವಂಶ, ಜಾತಿ ಹಾಗೂ ವಿವಾಹದ ಕುರಿತು ಬಹಳ ಸಂಕ್ಷಿಪ್ತವಾಗಿ ಹೇಳಿರುವುದನ್ನು ಕಾಣುತ್ತೇವೆ.

**೨ನೆಯವ** : "ಹೌದ, ಕಿತ್ತೂರಿನಿಂದ ೧೪ಕಿಲೋ ಮೀಟರ ದೂರದಲ್ಲಿ ಮಲಪ್ರಭಾನದಿ ದಂಡೆಮೇಲೆ ಸಂಗೊಳ್ಳಿ ಎಂಬ ಸಣ್ಣಹಳ್ಳಿ, ಆ ಹಳ್ಳಿಯೊಳಗ..

**೧ನೆಯವ** : ರೋಗಣ್ಣನವರ, ಭರಮಣ್ಣಾ, ಕೆಂಚಾವ್ವಾ ಅನ್ನುವ ಹಾಲುಮತದ ಕುರುಬ ದಂಪತಿಗಳು ಸಾತ್ವಿಕರಾಗಿ ಬಾಳೆ ಮಾಡಿಕೊಂತ ಇದ್ರು.

**೨ನೆಯವ** : ರೋಗಣ್ಣನವರ ಭರಮಣ್ಣ ತಂದಿ ರಾಘಣ್ಣ ವೀರಪ್ಪ ದೇಸಾಯರ ಸಮಯದಲ್ಲಿ ಚಿಣಗಿ ಕೊವಾಡ ಯುದ್ಧದಲ್ಲಿ ಅಪ್ರತಿಮ ಸಾಹಸ ತೋರಿಸಿದ್ದಕ್ಕಾಗಿ ಇವರ ಮನೆತನಕ್ಕೆ ಸಾವಿರ ಒಂಟಿ ಸರದಾರರು ಅಂತ ಬಿರುದು ಬಂದಿತ್ತು.

**೧ನೆಯವ** : ರಾಘಣ್ಣ ಆಯುರ್ವೇದಿಕ ಪಡಿಂತನಾಗಿದ್ದು, ಗಿಡಮೂಲಕಿ ಔಷಧಿ ಕೊಟ್ಟು ಎಂತೆಂಥಾ ರೋಗಗಳನ್ನ ಗುಣ ಮಾಡುತ್ತಿದ್ದ. ಹಿಂಗಾಗಿ ಇವರ ಮನೆತನಕ್ಕ ರೋಗಣ್ಣನವರು ಅಂತ ಹೆಸರು ಬಂದಿತ್ತ.

**೨ನೆಯವ** : ರಾಘಣ್ಣನಂತೆ ಭರಮಣ್ಣನು ಧರ್ಯಶಾಲಿ ವೀರನಾಗಿದ್ದ. ಒಂದು ಸಲ ನಿಚ್ಚಳೀಕೆ ಗ್ರಾಮದಲ್ಲಿ ಮಲ್ಲಸರ್ಜ ದೊರೆಯ ತೋಟದಲ್ಲಿ ನುಗ್ಗಿದ ಹುಲಿಯನ್ನು ಅಟ್ಟಾಡಿಸಿ ಭರಮಣ್ಣ ಕೊಂದು ಹಾಕಿದ. ಇದಕ್ಕಾಗಿ ದೊರೆಗಳು ಇಪ್ಪತ್ತನಾಲ್ಕು ಎಕರೆ ರಕ್ತದ ಮಾನೆಹೊಲಾ ಅಂತ ಕೊಟ್ಟಿದ್ರು.

**೧ನೆಯವ** : ಭರಮಣ್ಣ ವೃತ್ತಿಯಿಂದ ವಾಲಿಕಾರ. ಇದಕ್ಕೆ ಕಿತ್ತೂರಿನ ರಾಜ್ರು ವತನಿ ಜಮೀನ ಕೊಟ್ಟಿದ್ರು, ಅಲ್ಲದೆ ಮನೆತನದ ಮೂಲ ಕಸಬು ಕುರಿ ಸಾಕ್ತಿದ್ರು.

**೨ನೆಯವ** : ಭರಮಣ್ಣ ಕೆಂಚವ್ವರಿಗೆ ಜೇಷ್ಠ ಪುತ್ರನಾಗಿ ಸಿದ್ದಣ್ಣ ಹುಟ್ಟಿದ. ನಮ್ಮ ಕಥಾ ನಾಯಕ ರಾಯಣ್ಣ ದ್ವಿತೀಯ ಪುತ್ರನಾಗಿ ೧೭೯೬ ಆಗಷ್ಟ ೧೫ರಂದು ಸಂಗೊಳ್ಳಿ ಊರಾಗ ಜನಿಸಿದ ನೋಡ್ರಿ. ರಾಯಣ್ಣ ಹುಟ್ಟಿದ ದಿನ ಆಗಷ್ಟ ೧೫ ನಮಗ ಸ್ವಾತಂತ್ರ್ಯ ಸಿಕ್ಕ ದಿನಾ."[೨೬]

ಹೀಗೆ ಸಂಗೊಳ್ಳಿ ರಾಯಣ್ಣನ ಮನೆತನದ ಕುರಿತು, ತಾತ, ತಂದೆ, ತಾಯಿ, ವೃತ್ತಿ ಜಾತಿಯ ಕುರಿತಂತೆ ಈ ಮೇಲಿನ ಸನ್ನಿವೇಶದ ಮೂಲಕ ರಾಯಣ್ಣನ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.

"ಮದುವೆ ಆಗ್ಯಾರ ಇಬ್ಬರು ಸೋದರರು।
ಹೊಸಬಾಳ ಹೆಜ್ಜೆ ಇಟ್ಟಾರು। ಇಬ್ಬರು।
ತಾಯಿಯ ಮಾತಂತೆ ನಡೆದಾರು॥

**೧ನೆಯವ** : ಹಿಂಗಿಬ್ರು ಅಣ್ಣ ತಮ್ಮರಿಗ ಮದುವ್ಯಾತು. ಹೊಸ ಸಂಸಾರ ಬೆನ್ನಿಗ ಬಿತ್ತ. ಎರಡು ಕೈ ನಾಕಾದು

**೨ನೆಯವ** : ಮರಳಿ ವರುಷ ಅನ್ನೂದ್ರೊಳಗ ರಾಯಣ್ಣಗ ಒಂದ ಗಂಡು ಸಿದ್ದಣ್ಣಗ ಒಂದು ಹೆಣ್ಣ ಮಗು ಹುಟ್ಟಿತು. ಯುದ್ಧದ ಸದ್ದಿಲ್ಲ ಸುಖವಾಗಿನ ಇದ್ರು."[೨೭] ರಾಯಣ್ಣನಿಗೆ ವಿವಾಹವಾಗಿತ್ತು ಹಾಗೂ ಗಂಡು ಮಗನಿರುವ ಕುರಿತು ಹೆಳಿದ್ದಾರೆ. ಆದರೆ ದಾಖಲೆಗಳ ಪ್ರಕಾರ ರಾಯಣ್ಣನಿಗೆ ಈ ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ಮಾಹಿತಿಗಳು ಲಭ್ಯವಿಲ್ಲ.

ರಾಯಣ್ಣನ ವಿವಾಹದ ಕುರಿತು ಈ ನಾಟಕದಲ್ಲಿ ಮಾಹಿತಿಯು ದೊರೆಯುತ್ತದೆ. ರಾಯಣ್ಣ ಹಾಗೂ ರಾಯಣ್ಣನ ಅಣ್ಣನೆಂದು ಹೇಳುವ ಸಿದ್ಧಣ್ಣ ಇವರಿಬ್ಬರಿಗೂ ಒಮ್ಮೊಯೇ ವಿವಾಹವಾಗುತ್ತಾರೆಂದು ನಾಟಕಕಾರರು ಹಾಳಿದ್ದಾರೆ. ಜೊತೆಗೆ ರಾಯಣ್ಣನಿಗೆ ಗಂಡು ಮಗ ಜನಿಸಿದನೆಂದು ಸಹ ಹೇಳಿದ್ದಾರೆ. ರಾಯಣ್ಣನ ವಿವಾಹದ ಬಗ್ಗೆ ಯಾವುದೇ ರೀತಿಯ ದಾಖಲೆಗಳು ದೊರೆಯುವುದಿಲ್ಲ.

೨ನೆಯವ : "ರಾಯನ ಗೆಳೆಯರು ಸಂಪಗಾವಿ ವಿಜಯದ ಸಂಕೇತವಾಗಿ ಮತ್ತು ಈ ದೇಸೂರ ಕಿಲ್ಲಾ ವಶವಾದ ಸಂತೋಷಕ್ಕಾಗಿ.

೧ನೆಯವ : ರಾಯಣ್ಣ ಅಂದ ದಿನಾಂಕ ೧೩-೧-೧೮೩೧ರಂದು ನಾಡ ಬಸವ ದ್ವಜಾ ಕಿಲ್ಲಾದ ಮ್ಯಾಲ ಏರ್‍ಸಿದಾ."[೨೮] ರಾಯಣ್ಣನು ಹೋರಾಟದ ಸಂದರ್ಭದಲ್ಲಿ ಕಚೇರಿಗಳ ಮೇಲೆ ದಾಳಿ ಮಾಡಿರುವುದು ತಿಳಿದು ಬರುತ್ತದೆ. ಆದರೆ ರಾಯಣ್ಣನು ಯಾವುದೇ ಪ್ರದೇಶ, ಕೋಟೆಯನ್ನು ವಶಪಡಿಸಿಕೊಂಡಿರುವುದರ ಕುರಿತು ಎಲ್ಲಿಯು ಮಾಹಿತಿ ದೊರೆಯುವುದಿಲ್ಲ.

ಈ ವಿಚಾರದ ಕುರಿತು ಎಲ್ಲಿಯೂ ಮಾಹಿತಿ ಸಿಗುವುದಿಲ್ಲ. ರಾಯಣ್ಣ ದೇಶನೂರು ಕೋಟೆಯ ಮೇಲೆ ದಾಳಿ ಮಾಡಿದ್ದನು. ಆದರೆ ಈ ಕೋಟೆಯ ವಶಪಡಿಸಿಕೊಂಡಿರಲಿಲ್ಲ. ಹಾಗೂ ಈ ಕೋಟೆಯ ಮೇಲೆ ಕಿತ್ತೂರಿನ ನಾಡ ನಂದಿ ದ್ವಜವನ್ನು ಎಲ್ಲಿಯೂ ಹಾರಿಸಿರಲಿಲ್ಲ.

ಬ್ರಿಟಿಷರ ವಿರುದ್ಧ ಹೋರಾಟ ಆರಂಭಿಸಿದ ಮೇಲೆ ರಾಯಣ್ಣ ದಟ್ಟವಾದ ಅರಣ್ಯ ಪ್ರದೇಶಗಳಲ್ಲಿರತೊಡಗಿದ. ರಾಯಣ್ಣನಿಗೆ ಹಾಗೂ ಸಹಚರರಿಗೆ ಒಂದು ನಿರ್ದಿಷ್ಟವಾದ ನೆಲೆಯಲ್ಲಿ ನಿಲ್ಲದೆ ತನ್ನ ತಾಣಗಳನ್ನು ಬದಲಿಸುತ್ತಿದ್ದ. ಇದರ ಜೊತೆಗೆ ಕಿತ್ತೂರಿನ ಜನಸಾಮಾನ್ಯರ ಸಹಕಾರವು ರಾಯಣ್ಣನಿಗಿತ್ತು.

೨ನೆಯವ – ಕಿತ್ತೂರಿ ಕಮಾಂಡಿಂಗ ಅಫೀಸರ ಮೇಜರ್ ಪಿಕರಿಂಗ ಸಾಹೇಬ್ರು ಮೇಜರ ರಾಸಸಾಹೇಬ್ರು ರಾಯಣ್ಣನ ಅಡಗು ತಾಣ ಹುಕಿದ್ರು, ಕಾಡು ಮೇಡು ತಿರುಗಿದ್ರು ರಾಯಣ್ಣ ಸಿಗಲಿಲ್ಲ.

೧ನೆಯವ – ಈ ವಿಷಯ ಹುಜೂರ ಮುನಸಿ ಅಣ್ಣಾಜಿ ರಾಯರು ಬ್ರಿಟಿಷ್ ಸರಕಾರಕ್ಕೆ ೧೮ನೇ ಜನವರಿ ೧೮೩೦ ರಂದು ಒಂದು ಪತ್ರ ಬರದ್ರು. ಇಲ್ಲಿ ಹಳ್ಳಿಗರು ನಮಗೆ ಸಹಕಾರ ಕೊಡುತ್ತಿಲ್ಲ. ರಾಯಣ್ಣನ ಅಡಗು ತಾಣದ ಬಗ್ಗೆ ಇಲ್ಲವೆ ರಾಯಣ್ಣ ಲೂಟಿಮಾಡಿ ಬೆಂಕಿ ಹಚ್ಚಿದ ಬಗ್ಗೆ ಯಾರೂ ಹೇಳುತ್ತಿಲ್ಲ. ಎಲ್ಲೆಡೆ ಗುಂಡಾಗಿರಿ, ಅಶಾಂತಿ.

೨ನೆಯವ – ರಾಯಣ್ಣ ಇವತ್ತ ಇಲ್ಲಿ ಬಂದಾನಂದ್ರ ಮರುದಿನ ಮೂವತ್ತ ನಾಲ್ವತ್ತ ಮೈಲ ದೂರ ಹೋಗಿ ಬ್ರಿಟಿಷ ಸರಕಾರದ ಖಜಾನಿ ಲೂಟಿ ಮಾಡಿರತಾನೆ. ಅಂಚೆ ಸುಟ್ಟಿರುತಾನ.

೧ನೆಯವ – ರಾತ್ರಿ ಒಂದು ಕಡೆಯಿಂದ ಸಪ್ಪಳ ಮಾಡಿದಾಗ ರಾಯಣ್ಣಾ ಬಂದಾ ಅಂತ ಆ ಸಪ್ಪಳದಾಗ ಹುಡುಕಾಕ ಹೋದಾ, ಮತ್ತೊಂದು ಕಡೆಯಿಂದ ಬಂದ ಎದಕ್ಕಾರ ಬೆಂಕಿ ಇಟ್ಟ ಪಾರಾಗಿರ್‍ತಾನ ಅಂತ ಪತ್ರ ಬರದ್ರು.

**ವಿನೆಯವ** – ಅಲ್ಲದ ಗೆರಿಲ್ಲಾ ತರದ ಯುದ್ಧ ತಂತ್ರಾರಾಯಾ ಆಗ ಮಾಡಿ ತೋರಸಿದ್ಯಾ ತತ್ತರಿಸಿ ಹೋದ."[೨೯]

ರಾಯಣ್ಣನು ಹೋರಾಟ ಮಾಡಿದ ನಂತರ ಅರಣ್ಯ ಪ್ರದೇಶದ ತಮ್ಮ ಅಡಗು ತಾಣಗಳಿಗೆ ಕಣ್ಮರೆಯಾಗುತ್ತಿದ್ದ. ರಾಯಣ್ಣನ ಮುಖ್ಯ ಅಡಗು ತಾಣಗಳೆಂದರೆ, ದೇಶನೂರು ಗುಡ್ಡ, ಹಂಡಿಬಡಗನಾಥ ಬೆಟ್ಟ, ಕೌಲಗುಡ್ಡ ಮುಂತಾದವುಗಳು ರಾಯಣ್ಣನ ಗೆರಿಲ್ಲಾ ಯುದ್ಧ ತಂತ್ರದ ಮೂಲಕ ದಾಳಿಯನ್ನು ಮಾಡುತ್ತಿದ್ದನು.

ಶಂಕರ ಲಮಾಣಿ ಅವರ ಹಾಲು ಮತದ ವೀರಗಾಥೆ ಕ್ರಾಂತಿ ವೀರ ಸಂಗೊಳ್ಳಿ ರಾಯಣ್ಣ ನಾಟಕವು ರಾಯಣ್ಣನ ಕುರಿತು ಮಾಹಿತಿಯನ್ನು ತಿಳಿಯಲು ಹೆಚ್ಚು ಸಹಾಯಕವಾಗುತ್ತದೆ.

**ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ**

ಮೈಸೂರು ಆರ್. ಜಯರಾಂ ಅವರ ನಾಲ್ಕು ನಾಟಕಗಳು ಎಂಬ ಕೃತಿಯಲ್ಲಿ ಸಂಗೊಳ್ಳಿ ರಾಯಣ್ಣನ ಕುರಿತಾದ 'ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ' ಎಂಬ ನಾಟಕದವು ಒಂದಾಗಿದೆ. ಇದರಲ್ಲಿ ಸಂಗೊಳ್ಳಿ ರಾಯಣ್ಣನ ಜೀವನವನ್ನು ಸಂಕ್ಷಿಪ್ತವಾಗಿ ಚಿತ್ರಿಸಿದ್ದಾರೆ. ಈ ನಾಟಕವು ೧೧ ದೃಶ್ಯಗಳಿಂದ ಕೂಡಿದೆ. ನಾಟಕಕಾರರು ಚರಿತ್ರೆಯಲ್ಲಿ ಬರುವ ವ್ಯಕ್ತಿಗಳ ಬದಲು ಕೆಲವು ಹೊಸ ಪಾತ್ರಗಳನ್ನು ಬಳಸಿಕೊಂಡ್ಡಿದ್ದಾರೆ. ನಾಟಕವು ರಾಯಣ್ಣ ಬ್ರಿಟಿಷರ ವಿರುದ್ಧ ಹೋರಾಟವನ್ನು ಆರಂಭಿಸಿದ ನಂತರದ ಘಟನೆಗಳಿಂದ ಆರಂಭವಾಗುತ್ತದೆ.

ರಾಯಣ್ಣ ಹಾಗೂ ಸ್ನೇಹಿತರು ಬ್ರಿಟಿಷರ ವಿರುದ್ದ ಹೋರಾಟವನ್ನು ಮಾಡುವಾಗ ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ನಾವೆಲ್ಲರು ಒಮ್ಮತದಿಂದ ಹೋರಾಟ ಮಾಡಬೇಕು. ಕಿತ್ತೂರು ರಾಣಿ ಚೆನ್ನಮ್ಮ ಆರಂಭಿಸಿರುವ ಈ ಹೋರಾಟವನ್ನು ನಿಲ್ಲಿಸುವುದು ಬೇಡ ನಾವು ಈ ಹೋರಾಟವನ್ನು ಮುಂದುವರೆಸೋಣ. ಈ ಹೋರಾಟದಿಂದ ನಮಗೆ ಮೃತ್ಯು ಬಂದರೆ ಬರಲಿ ಹೋರಾಟದಿಂದ ಹಿಂದೆ ಸರಿಯುವುದು ಬೇಡ. ಬ್ರಿಟಿಷರ ಅನ್ಯಾಯ, ದೌರ್ಜನ್ಯ, ಶೋಷಣೆ ಹಾಗೂ ಕಿತ್ತೂರಿನ ಸ್ವಾತಂತ್ರ್ಯ ನಮ್ಮ ಉಸಿರಾಗಬೇಕು.

**ನಾಗರಕಟ್ಟಿ** : "ಈ ನಾಡಿನ ಸ್ವಾತಂತ್ರ್ಯಕ್ಕಾಗಿ ನಾವು ವೀರ ಕಂಕಣವನ್ನು ಧರಿಸಿದ್ದೀವಿ.

**ರಾಯಣ್ಣ** : ಎಲ್ಲರು ನನ್ನ ಮಾತನ್ನು ಕೇಳಿ. ನಾವು ನಿರಾರ್ಥಕವಾಗಿ ಬದುಕುವುದು ಬೇಡ. ಬಂಡಾಯವನ್ನು ಮುಂದುವರಿಸೋಣ. ಸಾವು ಬಂದರೆ ಸಂತೋಷವಾಗಿ ಆಲಂಗಿಸೋಣ. ಹೇಡಿಗಳಾಗಿ ಹಿಂದೆ ಸರಿಯುವುದು ಬೇಡ. ವೀರರಾಗಿ ಅಲ್ಪಕಾಲ ಬದುಕೋಣ.

**ಜನರು** : ಭಲೇ ಭಲೇ ರಾಯಣ್ಣ ನಿನ್ನ ಮಾತೇ ನಮ್ಮ ಮಾತು.

**ನಾಗರಕಟ್ಟಿ** : ಈ ಸಭೆ ಕರೆದ ಉದ್ದೇಶ ಸಫಲವಾಯಿತು. ಇನ್ನೂ ನಮ್ಮ ಈ ಮಾತು. ಇನ್ನೂ ಈ ವೀರ ಸಂಕಲ್ಪವು, ದಶ ದಿಕ್ಕುಗಳಲ್ಲಿ ಪ್ರತಿಧ್ವನಿಸಿ ಮುಗಿಲು ಮುಟ್ಟಲಿ.

**ಬಾಳನಾಯಕ** : ಹೌದ್ರಪ! ನಾವು ಇನ್ನು ಮುಂದೆ ಕಂಪನಿ ಸರಕಾರದ ಹಂಗಿನ ಕೂಳಿಗೆ ಕೈ ಚಾಚಿ ತಿರುಪೇಬೇಡೋದು ಬೇಡ. ನಮ್ಮ ನೆಲ ನಮ್ಮ ಜಲ ಕೇಳೊದಕ್ಕೆ, ಕೊಡೊದಕ್ಕೆ ಅವರಿಗೆ ಹಕ್ಕು ಎಲ್ಲಿದೆ?

**ರಾಯಣ್ಣ** : ಸತ್ಯ. ಅಕ್ಷರಶಃ ಸತ್ಯ. ನಾವು ಬ್ರಿಟಿಷರ ಆಜ್ಞೆಗೆ ತಲೆ ಬಾಗುವುದು ಬೇಡ. ಈ ಬಂಡಾಯದಿಂದ ತಕ್ಕ ಪಾಠ ಕಲಿಸೋಣ. ಸ್ವಾತಂತ್ರ್ಯವೇ ನಮ್ಮ ಜನ್ಮಸಿದ್ಧಹಕ್ಕು ಅನ್ನುವುದನ್ನು ಮನವರಿಕೆ ಮಾಡೋಣ."[೩೦]

ಬ್ರಿಟಿಷರ ಯಾವುದೇ ರೀತಿಯ ಬೆದರಿಕೆಗಳಿಗಾಗಿ ನಾವು ಹೋರಾಟದಿಂದ ಹಿಂದೆ ಸರಿಯುವುದಿಲ್ಲ ಎನ್ನುವ ರಾಯಣ್ಣ ಹಾಗೂ ರಾಯಣ್ಣನ ಸಹಚರರು ಯುದ್ಧದ ಕುರಿತ ಈ ಮಾತುಗಳು ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ತಮ್ಮ ತನು, ಮನಗಳನ್ನು ಅರ್ಪಿಸಿರುವುದನ್ನು ನಾವು ಕಾಣುತ್ತೇವೆ. ರಾಯಣ್ಣ ಹಾಗೂ ತಂಡದವರು ಬ್ರಿಟಿಷರಿಗೆ ಎಂದಿಗೂ ತಲೆಭಾಗಬಾರದೆಂದು ಹೋರಾಟಕ್ಕೆ ಮುಂದಾಗಿ, ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಲು ಹೋರಾಟವನ್ನು ಮಾಡುತ್ತಾರೆ.

**ಚೆನ್ನಮ್ಮ** : ನಿಮ್ಮ ಮಾತು ಸತ್ಯ, ಹಾಗಾಗಿ ಈ ಸೆರೆಯಲ್ಲಿ, ನಾನು ಕೊಳೆಯುತ್ತಿರುವುದು. ನನ್ನನ್ನು ಆಸೆಯು ಹುರಿದುಂಬಿಸುತ್ತಿದೆ. ಮುಕ್ತವಾದ ನಾಡನ್ನು ಕಾಣುಯೆಂದು ಯಾವುದೋ ಒಂದು ವಾಣಿ ನಿರಂತರವಾಗಿ ನನ್ನನ್ನು ಪೀಡಿಸುತ್ತಿದೆ. ನಾಡ ಮಕ್ಕಳ ಕಲ್ಯಾಣ ಮಾರ್ಗ ಹುಡುಕೆಂದು ನನ್ನನ್ನು ಆಜ್ಞಾಪಿಸಿ, ಚೀತ್ಕರೀಸುತ್ತಿದೆ. ನೀನೊಂದು ಶಕ್ತಿಯಾಗು, ಈ ಬಂಧನದಿಂದ ಹೊರಗೆ ಬಾ, ಮಿಂಚುವ ಬಿಳಿಗುದುರೆಯ ಹೆಗಲೇರಿ, ಖಡ್ಗ ಹಿರಿದು, ವೈರಿ ರುಂಡಗಳನ್ನು ಚಂಡಾಡಿ ಬರಿದಾಗಿರುವ ಕಿತ್ತೂರ ಸಿಂಹಾಸನವನ್ನು ರಕ್ಷಿಸೆಂದು.

**ಜಂಗಮ:** (ಮೈಮರೆತು ಘರ್ಜಿಸುವನು) ಹರಹರ ಮಹಾದೇವ (ಚೆನ್ನಮ್ಮ ಬೆರಗಾಗುವಳು ರಾಯಣ್ಣ ಎಚ್ಚೆತ್ತು) ಶಿವ! ಶಿವ, ತಾಯೇ! ನಾವು ಶಿವನಾಣತಿಯಂತೆ ಇಲ್ಲಿಗೆ ಬಂದಿದ್ದೇವೆ. ತಮಗೆ ರಹಸ್ಯದ ವಿಷಯವನ್ನು ಅರುಹಬೇಕೆಂದು ಅವನ ಸಂಕಲ್ಪ.

**ಚೆನ್ನಮ್ಮ** : ಶಿವ ಪೂಜೆ ಮುಗಿಯುವತನಕ ಜಂಗಮರನ್ನು ಬಿಟ್ಟು ಇಲ್ಲಿ ಬೇರೆ ಯಾರಿಗೂ ಪ್ರವೇಶವಿಲ್ಲ. ಆಂಗ್ಲರು ನನ್ನ ನಿಯಮವನ್ನು ಮುರಿದರೆ ನಾನು ಅಂದೇ ಉಪವಾಸ ವ್ರತಗೈದು ಪ್ರಾಣಾರ್ಪಣೆ ಮಾಡುವುದಾಗಿ ತಿಳಿಸಿದ್ದೇನೆ. ಆದ್ದರಿಂದ ತಾವು

ರಹಸ್ಯದ ವಿಷಯವನ್ನು ಧೈರ್ಯವಾಗಿ ಹೇಳಬಹುದು.

(ರಾಯಣ್ಣ ಅನುಮಾನದಿಂದ ಅತ್ತಿತ್ತ ನೋಡುವನು)

ಸ್ವಾಮಿ! ತಾವು ಅನ್ಯತಾ ಭಾವಿಸದಿದ್ದರೆ. ನನ್ನ ಸಂದೇಹವನ್ನು ಪರಿಹರಿಸಬೇಕು.

**ಜಂಗಮ** : ಅದೇನು ಹೇಳಿ, ತಿಳಿದ ಸಂಗತಿಯಾದರೆ, ನಿಮ್ಮ ಸಂದೇಹವನ್ನು ಪರಿಹರಿಸುತ್ತೇನೆ.

**ಚೆನ್ನಮ್ಮ** : ಕಾಷಾಯ ವಸ್ತ್ರಧಾರಿತ ಸುಳ್ಳಾಡರೆಂಬ ನನ್ನ ನಂಬಿಕೆಯನ್ನು ತಾವು ಹುಸಿ ಮಾಡಬಾರದು. ತಾವು ಯಾರು? ನಿಜವಾದ ವಿಷಯವನ್ನು

**ಜಂಗಮ** : (ಕೃತಕ ಗಡ್ಡ ತೆಗೆದು) ನಾನು ತಾಯೇ! ನಿಮ್ಮ ಭಂಟ ರಾಯಣ್ಣ

**ಚೆನ್ನಮ್ಮ** : ರಾಯಣ್ಣನೇ, ನನ್ನೆದುರು ಜಂಗಮರ ವೇಷ ತೊಟ್ಟಿರುವವನು ರಾಯಣ್ಣನೇ. ನಾನು ಕನಸಿನ ಲೋಕದಲ್ಲಿ ಸಂಚರಿಸುತ್ತಿರುವೆನೆ? ಇಲ್ಲ ವಾಸ್ತವ ಜಗದಲ್ಲಿದ್ದು ನಿನ್ನನ್ನು ನೋಡುತ್ತಿದ್ದೇನೆಯೇ? ಇದು ಸತ್ಯವೇ? ಸುಳ್ಳಲ್ಲ ತಾನೇ ಕಂದಾ?"[೩೧]

ರಾಯಣ್ಣ ಹೋರಾಟದ ಸಿದ್ದತೆಗಳನ್ನು ಮಾಡಿಕೊಂಡ ನಂತರ ಬೈಲಹೊಂಗಲದ ಸೆರೆಮನೆಯಲ್ಲಿರುವ ರಾಣಿ ಚೆನ್ನಮ್ಮಳನ್ನು ಕಂಡು ತಾವು ಮಾಡಬೇಕೆಂದುಕೊಂಡಿರುವ ಹೋರಾಟದ ವಿಷಯವನ್ನು ತಿಳಿಸಿ ಅವರಿಂದ ಆಶೀರ್ವಾದವನ್ನು ಪಡೆಯಬೇಕೆಂದುಕೊಂಡಾಗ, ಸೆರೆಮನೆಯೊಳಗೆ ಜೋಗಿ, ಜಂಗಮರಿಗೆ ಮಾತ್ರ ರಾಣಿಯವರ ಭೇಟಿಗೆ ಅವಕಾಶವಿದೆ ಎಂದು ತಿಳಿದುಕೊಂಡು ರಾಯಣ್ಣ ಜಂಗಮರ ವೇಶಧರಿಸಿಕೊಂಡು ರಾಣಿ ಚೆನ್ನಮ್ಮಳನ್ನು ಭೇಟಿಯಾಗುತ್ತಾನೆ.

ರಾಯಣ್ಣ ರಾಣಿ ಚೆನ್ನಮ್ಮಳನ್ನು ಭೇಟಿಯಾಗಿ ಹೋದ ನಂತರ ಬ್ರಿಟಿಷ್ ಅಧಿಕಾರಿಯಾದ ಚಾಪ್ಲಿನ್ ಅವರಿಗೆ ತಿಳಿದು ರಾಣಿಯ ಜೊತೆ ನಡೆಯುವ ಸಂಭಾಷಣೆ ಈ ಕೆಳಗಿಂತಿದೆ.

**ಚಾಪ್ಲಿನ್** : ರಾಣಿಸಾಹೇಬರೇ ನಿಮ್ಮ ಉದ್ಧಟತನ ಹೀಗೆಯೆ ಮುಂದುವರೆದರೆ, ನಿಮ್ಮನ್ನು ಗಡಿಪಾರು ಮಾಡಬೇಕಾಗುವುದು, ಎಚ್ಚರವಿರಲಿ.

**ಚೆನ್ನಮ್ಮ** : ಇಂದಲ್ಲ, ನಾಳೆ ಈ ನಾಡಿನಿಂದ ಗಡಿಪಾರಾಗಬೇಕಾದವರು ನಾವಲ್ಲ ನೀವು. ಆ ಮುನ್ನೆಚ್ಚರಿಕೆ ನಿಮಗಿರಲಿ.

**ಚಾಪ್ಲಿನ್** : ಕಿತ್ತೂರು ರಾಣಿಯವರೆ,

**ಚೆನ್ನಮ್ಮ** : ಚಾಪ್ಲಿನ್ ಸಾಹೇಬರೆ, ನನ್ನ ತಾಯಿನಾಡನ್ನು ನೀವು ನಿಮ್ಮ ಜನ್ಮ ಭೂಮಿಯೆಂದು ಒಪ್ಪಿ ಗೌರವ ನೀಡುತ್ತೀರೇನು?

**ಚಾಪ್ಲಿನ್** : O, what ಅಸಂಬದ್ಧ ಪ್ರಲಾಪ? ನಾವು ನಿಮ್ಮ ನಾಡನ್ನು ಆಳಲು ಬಂದಿರುವ ಸಾರ್ವಭೌಮರು..

**ಚೆನ್ನಮ್ಮ** : ಹಾಗೆಂದು ನಿಮಗೆ ನೀವೆ ಹೇಳಿಕೊಂಡು ಖುಷಿ ಪಡಬೇಕಷ್ಟೆ. ನಾವು ಮಾತ್ರ ನಿಮ್ಮನ್ನು ಎಂದೆಂದಿಗೂ ಆಧಿರಾಜರೆಂದು ಮನ್ನಿಸಲಾರೆವು.

**ಚಾಪ್ಲಿನ್** : Stop it! ಸಾಕು ನಿಲ್ಲಿಸಿ ನಿಮ್ಮ ಒಣ ಹರಟೆ, ನಾವು ಬಂದ ಉದ್ದೇಶವೆ ಬೇರೆ. ರಾಯಣ್ಣ ನಿಮ್ಮನ್ನು ಕಂಡು ಹೋದದ್ದು ನಿಜವೇ ಹೇಳಿ?

**ಚೆನ್ನಮ್ಮ** : ಈ ಪ್ರಶ್ನೆಗೆ ಉತ್ತರಿಸಬೇಕಾಗಿರುವುದು, ನಾನಲ್ಲ, ನಿಮ್ಮ ಸೆರೆಮನೆಯ ಅಧಿಕಾರಿ ತಿಳಿಯಿತೇ?

**ಚಾಪ್ಲಿನ್** : ಅದು ನಮಗೆ ಚೆನ್ನಾಗಿಯೇ ತಿಳಿದಿದೆ. ಆ ಮುನ್ನೆಚ್ಚರಿಕೆಯಿಂದಲೇ ನಾವು ನಿಮ್ಮ ಸೊಸೆಯಾದ ವೀರವ್ವ ರಾಣಿ ಹಾಗೂ ಚಿಕ್ಕ ದೇಸಾಯಿಯನ್ನು ಕುಸುಗಲ್ಲಿಯ ಸೆರೆಮನೆಗೆ ಸಾಗಿಸಿರುವುದು."೨

ರಾಯಣ್ಣ ಚೆನ್ನಮ್ಮ ರಾಣಿಯನ್ನು ಭೇಟಿಯಾದ ನಂತರ ಚಾಪ್ಲಿನ್ ರಾಣಿಯನ್ನು ಈಗ ಬಂದಂತಹ ಜಂಗಮ ವ್ಯಕ್ತಿ ರಾಯಣ್ಣನೆಂದು ಮಾಹಿತಿಯನ್ನು ಪಡೆದುಕೊಂಡು ಬಂದಿರುತ್ತಾನೆ. ರಾಯಣ್ಣನ ಹೋರಾಟಕ್ಕೆ ರಾಣಿಯ ಸಹಕಾರವಿದೆಯೆಂದು ತಿಳಿದು ರಾಣಿ ಚೆನ್ನಮ್ಮಳಿಗೆ ಭದ್ರವಾದ ಕಾವಲು ಪಡೆಯನ್ನು ನೇಮಿಸುತ್ತಾರೆ.

ರಾಣಿ ಚೆನ್ನಮ್ಮ ಸೆರೆಮನೆಯಲ್ಲಿ ಇರಬೇಕಾದರೆ ಆಂಗ್ಲ ಅಧಿಕಾರಿಯೊಂದಿಗೆ ನಡೆಯುವ ಸಂಭಾಷಣೆ. ಚೆನ್ನಮ್ಮ ಯಾವತ್ತಿಗೂ ಬ್ರಿಟಿಷರ ಅಧಿಪತ್ಯವನ್ನು ಒಪ್ಪಿಕೊಳ್ಳುವುದಿಲ್ಲ.

ರಾಯಣ್ಣನನ್ನು ಸೆರೆಹಿಡಿಯುವ ಸಂದರ್ಭ ಈ ನಾಟಕದಲ್ಲಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಲಾಗಿದೆ.

**ಲಿಂಗನಗೌಡ** : ಸ್ನಾನ ಮಾಡುವಾಗಲು, ಈ ಕತ್ತಿ ನಿನ್ನ ಬಳಿ ಇರಲೇಬೇಕೇನು?

**ರಾಯಣ್ಣ** : ಇದು ನನ್ನ ಜೀವನದ ಸಂಗಾತಿ, ಒಂದು ಕ್ಷಣವೂ ಅಗಲುವುದಕ್ಕೆ ನನ್ನ ಮನಸ್ಸು ಒಪ್ಪುವುದಿಲ್ಲ ಗೌಡ್ರೆ!

**ವೆಂಕನಗೌಡ** : ಅಪ್ಪಾ! ರಾಯಣ್ಣ ನಿನ್ನ ಜೀವನದ ಸಂಗಾತಿಯನ್ನ ಸ್ವಲ್ಪ ಹೊತ್ತಾದರು ಕಳೆಚಿಟ್ಟು, ಅದಕ್ಕೆ ವಿಶ್ರಾಂತಿಕೊಡು. ನಾವು ಸ್ವಲ್ಪ ಹೊತ್ತು ಸಂತೋಷವಾಗಿ ಕಾಲ ಕಳೆಯೋಣ.

**ರಾಯಣ್ಣ** : ಆಯಿತು ಗೌಡ್ರೆ! ನಾವು ಸ್ನಾನಮಾಡಿ ಬರುವ ತನಕ ಈ ಖಡ್ಗ ಇಲ್ಲೇ

ಇರಲಿ.

(ಖಡ್ಗ ಬಿಚ್ಚಿಡುವನು) ನಡೀರಿ ಹೋಗೋಣ."[೩೩]

ಪೂರ್ವ ಯೋಜನೆಯನ್ನು ಹಾಕಿಕೊಂಡೆ ರಾಯಣ್ಣನ ಜೊತೆ ಸೇರಿದ ಲಿಂಗನಗೌಡ ಮತ್ತು ವೆಂಕನಗೌಡರು ರಾಯಣ್ಣ ಸ್ನಾನ ಮಾಡುವ ಸಂದರ್ಭದಲ್ಲಿ ಕೈಯಲ್ಲಿ ಕತ್ತಿ ಹಿಡಿದಿರುವುದನ್ನು ಕಂಡು ಗೇಲಿ ಮಾಡುತ್ತಾ ಉಪಾಯವಾಗಿ ರಾಯಣ್ಣನಲ್ಲಿದ್ದಂತಹ ಕತ್ತಿಯನ್ನು ದೂರವಿರಿಸುತ್ತಾರೆ. ಆಗ ಅ ಗೌಡರಿಬ್ಬರಿಗೆ ರಾಯಣ್ಣನನ್ನು ಸೆರೆಹಿಡಿಯುವುದಕ್ಕೆ ಇದೆ ಸರಿಯಾದ ಸಮಯವೆಂದು ತಿಳಿದು ರಾಯಣ್ಣನನ್ನು ಸೆರೆಹಿಡಿಯುತ್ತಾರೆ.

ರಾಯಣ್ಣನನ್ನು ಲಿಂಗನಗೌಡ ಮತ್ತು ವೆಂಕನಗೌಡ ಮೋಸದ ಮೂಲಕ ಹಿಡಿಯುವ ಸಂದರ್ಭ ಇದಾಗಿದೆ. ರಾಯಣ್ಣ ನಿರಾಯುಧನಾಗಿರುವಾಗ ಕುತಂತ್ರದ ಮೂಲಕ ಹಿಡಿದು ಗಲ್ಲಿಗೇರಿಸುತ್ತಾರೆ.

ಮೋಸದಿಂದ ನಮ್ಮವರಿಂದಲೆ ಬಂಧಿಸಿದ ಬ್ರಿಟಿಷರು ರಾಯಣ್ಣನನ್ನು ವಿಚಾರಣೆಗೊಳಪಡಿಸಿದರು. ವಿಚಾರಣೆಯ ಸಂದರ್ಭದಲ್ಲಿ ರಾಯಣ್ಣ ಹಾಗೂ ನಿಸ್ಬತ್‌ರ ಮದ್ಯ ನಡೆಯುವ ಸಂಭಾಷಣೆ

**ನಿಸ್ಬತ್** : "ರಾಯಣ್ಣ! ನಮ್ಮ ಬ್ರಿಟಿಷ್ ಸರಕಾರವನ್ನು ಧಿಕ್ಕರಿಸಿ ನಡೆದ ಪುಂಡರಿಗೆ ನಾವು ಕೊಡುವ ಪುರಸ್ಕಾರ ನಿನಗೀಗಾಲೇ ಅರಿವಾಗಿರಬೇಕು.

**ರಾಯಣ್ಣ** : ಓ.. ನಿನ್ನ ಬ್ರಟೀಷ್ ಸರಕಾರದ ಯೋಗ್ಯತೆಯ ಮಾನದಂಡ ಹೀಗೆಂದು ನನಗೇನು? ಎಲ್ಲರಿಗೂ ಅರಿವಾಗಿ ಹೋಗಿದೆ. ನಿಸ್ಬತ್ ಸಾಹೇಬ, ನನಗೆ ಸತ್ಕರಿಸಿ ತೊಡಿಸಿರುವ ಈ ಸಂಕೋಲೆಯು, ತಾಯಿನಾಡಿಗಾಗಿ ಹೋರಾಡಿ ಮಡಿವ ವೀರನ ಕೊರಳಿಗೆ ಹಾರವನ್ನು ತೊಡಿಸಿ ಗೌರವಿಸಿದಂತೆ ಬಲ್ಲೆಯೇನು?

**ನಿಸ್ಬತ್** : (ಕುಪಿತನಾಗಿ) ಹುಂ ಬಲ್ಲೆ, ನಾವು ನಿಮ್ಮ ನಾಡಿಗೆ ತಕ್ಕಡಿಯನ್ನು ಹಿಡಿದು ಬಂದ ಮಂದಿ. ವ್ಯಕ್ತಿಯ ಯೋಗ್ಯತೆಯನ್ನು ತೂಗಿ ನೋಡಿ ಅದಕ್ಕೆ ತಕ್ಕಂತೆ ಗೌರವಿಸಿ ಅನಂತರ ಅವರಿಗೆ ನೀಡುತ್ತೇವೆ ನಮ್ಮ ಸತ್ಕಾರ. ನಿನ್ನಂಥ ಬಂಡುಕೋರನಿಗೆ ಇದುವೇ ಸರಿಯಾದ ಅಲಂಕಾರ.

**ರಾಯಣ್ಣ** : ನನಗೆ ತೊಡಿಸಿರುವ ಈ ಕಬ್ಬಿಣದ ಅಲಂಕಾರದ ಸದ್ದು ಕಿತ್ತೂರನ್ನು ಎಚ್ಚರಿಸುತ್ತಿದೆ. "ಏಳಿ ಏದ್ದೇಳಿ ನನ್ನ ಜನರೇ ತಲೆ ಎತ್ತಿ. ನಾಡ ನಂದಿ ಧ್ವಜವನ್ನು ಹಿಡಿದೆತ್ತಿ. ಎದುರು ಬಿದ್ದವರ ರುಂಡವನ್ನು ಭೂಮಿಗೆ ತುಳಿದೊತ್ತಿ ಹಾಡಿ. ನೀವು, ಈ ನಾಡು ಸ್ವಾತಂತ್ರ್ಯವೆಂದು ಕೊರಳೆತ್ತಿ."[೩೪]

'ರಾಯಣ್ಣನನ್ನು ಬ್ರಿಟಿಷರು ಸೆರೆ ಹಿಡಿದ ನಂತರ ನಡೆಯುವ ಸಂಭಾಷಣೆಯಲ್ಲಿ ರಾಯಣ್ಣನ ಮಾತುಗಳಿವು. ನಾಟಕಕಾರರು ಇಲ್ಲಿ ರಾಯಣ್ಣನ ಅಂತ್ಯದ ಮೂಲಕ ಕಿತ್ತೂರಿನಾದ್ಯಂತ ಇನ್ನೂ ಮುಂದೆ ಅನೇಕ ರಾಯಣ್ಣನಂತವರು ಹುಟ್ಟಿ ಬರುತ್ತಾರೆ. ಈ ಸಂದೇಶದ ಮೂಲಕ ಭಾರತದ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ರಾಯಣ್ಣನು ಉತ್ತರ ಕರ್ನಾಟಕದ ಜನತೆಗೆ ಸ್ಫೂರ್ತಿಯಾಗಿದ್ದಾನೆ.

**ಮಿಂಚು**

ಶಿರೀಷ್ ಜೋಶಿ ಅವರ 'ಮಿಂಚು' ನಾಟಕ ರಾಯಣ್ಣ ಕುರಿತ ನಾಟಕಗಳಲ್ಲಿ ಪ್ರಮುಖ ನಾಟಕವಾಗಿದೆ. ಈ ನಾಟಕವು ರಾಯಣ್ಣನನ್ನು ಕುರಿತು, ರಾಯಣ್ಣನ ಮಿಂಚಿನ ಹೋರಾಟದ ಸಂಕ್ಷಿಪ್ತ ಮಾಹಿತಿಯನ್ನು ತಿಳಿಯಲು ಸಹಾಯಕವಾಗುತ್ತದೆ. ರಾಯಣ್ಣನನ್ನು ಬ್ರಿಟಿಷರು ಸೆರೆ ಹಿಡಿದ ನಂತರದ ಘಟನೆಯಿಂದ ನಾಟಕವು ಆರಂಭವಾಗುತ್ತದೆ. ಈ ನಾಟಕದಲ್ಲಿ ಉದ್ದವ್ವ ಎನ್ನುವ ಪಾತ್ರದ ಜೊತೆಗೆ ನಾಟಕದ ಇತರೆ ಪಾತ್ರಗಳು ಕಾಣಿಸಿಕೊಳ್ಳುತ್ತವೆ. ಈ ನಾಟಕದ ಕೇಂದ್ರ ವ್ಯಕ್ತಿಗಳು ಉದ್ದವ್ವ ಮತ್ತು ರಾಯಣ್ಣ.

ಈ ನಾಟಕವು ೧೧ ದೃಶ್ಯಗಳನ್ನು ಒಳಗೊಂಡಿದೆ. ಪ್ರತಿಯೊಂದು ದೃಶ್ಯದ ಆರಂಭವು ಗೀಗೀ ಪದಗಳಿಂದ ಆರಂಭವಾಗುತ್ತದೆ. ರಾಯಣ್ಣನ ಹೋರಾಟವನ್ನು ಇಲ್ಲಿ ನಾಟಕಕಾರರು ಮಿಂಚಿಗೆ ಹೋಲಿಸಿದ್ದಾರೆ. ರಾಯಣ್ಣನನ್ನು ಬ್ರಿಟಿಷರು ಬಂಧಿಸಿದ ಸುದ್ದಿಯನ್ನು ತಿಳಿದ ಉದ್ದವ್ವ ಬ್ರಿಟಿಷರನ್ನು ಕುರಿತು ಈ ರೀತಿ ಹೇಳುತ್ತಾಳೆ.

**ಉದ್ದವ್ವ** : (ತನ್ನಷ್ಟಕ್ಕೆ ತಾನೆ, ದಾರಿ ಸಾಗುತ್ತ) ಸಾಕು ನಿಲ್ಸು. ಎಷ್ಟದು ಮಿಂಚೋದು! (ಗಗನದತ್ತ ಮುಖಮಾಡಿ) ಥೂ ನಿನ್ನೌವ್ನ, ಯಾಕಾದ್ರೂ ಬಂದಿ ನೀನು? ಇದು ನೀ ಬರೋ ಕಾಲಲ್ಲ. ಮೊನ್ನೆರ ಮಳೆಗಾಲ ಮುಗದ ಹೋಗೇತಿ. ಈಗ ಥಂಡಿ ಸುರುವಾಗೇತಿ. ಈ ಥಂಡಿ ದಿನದಾಗ ಬರಾಕ ನಿನಗೇನ ಅಧಿಕಾರ ಐತಿ? (ಹತಾಶಳಾದಂತೆ) ಹೌದು, ಇದು ಕಲಿಗಾಲ. ಈ ಕಲಿಗಾಲದಾಗ ಯಾವಾಗ ಏನ ಬೇಕಾದ್ರೂ ಆಗಭೌದು. ಯಾರದೋ ಜಾಗಾನ್ನ ಯಾರೋ ಬಂದು ತಮ್ಮದು ಅನಭೌದು. (ಪ್ರೇಕ್ಷಕರಿಗೆ) ಕಿತ್ತೂರಿನ ಕಥಿನ ತಗೋರಿ. ನಿನ್ನೆ ಮೊನ್ನಿನತನಕಾ ಕಿತ್ತೂರು ಕಿತ್ತೂರಿನವರದಾಗೇ ಇತ್ತು. ಆದರೆ ಇಂದೇನಾಗೇತಿ? ಕೆಂಪಮಾರಿ ಮಂಗ್ಯಾಗೋಳ ಬಂದೂವಂತ! ಢಂ ಢಂ ಫಿರಂಗಿ ಹಾರಿಸಿದೂವಂತ!![೩೫]

ರಾಯಣ್ಣನ ಕುರಿತು ಬಂದಿರುವಂತಹ ನಾಟಕಗಳಲ್ಲಿ ಹಲವಾರು ಭಿನ್ನತೆಗಳಿರುವುದನ್ನು ನಾವು ಗುರುತಿಸಬಹುದು. ವಿವಾಹ ಮತ್ತು ಮಗನನ್ನು ಕುರಿತು ಹೆಚ್ಚಾಗಿ ಇರುವುದನ್ನು ನಾವು

ಕಾಣುತ್ತೇವೆ. ಸಂಗೊಳ್ಳಿ ರಾಯಣ್ಣನ ಹೆಂಡತಿಯ ಹೆಸರಿಗೆ ಸಂಬಂಧಿಸಿದಂತೆಯೇ ಹೆಚ್ಚಿನ ವ್ಯತ್ಯಾಸಗಳು ತೋರುತ್ತವೆ. ಇವುಗಳಲ್ಲದೆ ರಾಯಣ್ಣನಿಗೆ ಮದುವೆಯೇ ಅಗಿದ್ದಿಲ್ಲವೆಂದಾಗ ಹೆಂಡತಿಯ ಹೆಸರೆಲ್ಲಿಯದೆಂದು ವಾದಿಸಲಾಗುತ್ತದೆ. ಈ ದಿಶೆಯಲ್ಲಿಯ ಪ್ರಸ್ತಾಪಿತ ವ್ಯತ್ಯಾಸಗಳ ಕುರಿತು ಗಮನಿಸಬೇಕಾಗಿದೆ. ಎಂದು ಜ್ಯೋತಿ ಹೊಸೂರು ಅವರು ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆಯಲ್ಲಿ ರಾಯಣ್ಣನ ವಿವಾಹಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ಸೂಕ್ತ ದಾಖಲೆಗಳಿಲ್ಲವೆಂದು ಹೇಳಿದ್ದಾರೆ. ಒಂದು ವೇಳೆ ರಾಯಣ್ಣ ವಿವಾಹವಾಗಿದ್ದರೂ, ರಾಯಣ್ಣನ ಹೋರಾಟದ ಸಂದರ್ಭದಲ್ಲಿ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾಗಿದ್ದರಿಂದ ರಾಯಣ್ಣನನ್ನು ಬೆದರಿಸುವುದುಕ್ಕಾಗಿ ಬ್ರಿಟಿಷರು ಹೆಂಡತಿಯನ್ನು ಅಸ್ತ್ರವನ್ನಾಗಿ ಮಾಡಿಕೊಳ್ಳಬಹುದೆಂದು ನಮ್ಮ ಜನಪದಕಾರರು ರಾಯಣ್ಣನ ಹೆಂಡತಿಯ ಬಗ್ಗೆ ಹೆಚ್ಚಾಗಿ ಪ್ರಸ್ತಾಪ ಮಾಡಿಲ್ಲವೆಂದು ಅನಿಸುತ್ತದೆ.

ಹೀಗೆ, ಸಂಗೊಳ್ಳಿ ರಾಯಣ್ಣನನ್ನು ಕುರಿತು ಮೌಲಿಕವಾದ ನಾಟಕಗಳು ಬಂದಿವೆ. ಇವು ರಾಯಣ್ಣನ ಸಿದ್ದಿ, ಸಾಧನೆಯನ್ನು ಕುರಿತು ಹೇಳುತ್ತವೆ. ಇದರಲ್ಲಿ ಕೆಲವು ನಾಟಕಗಳು ವೇದಿಕೆಯ ಮೇಲೆ ಪ್ರದರ್ಶನಗೊಂಡಿವೆ. ನಾಟಕ ಪ್ರದರ್ಶನಗೊಂಡಾಗ ಜನರಲ್ಲಿ ರಾಯಣ್ಣನ ಬಗ್ಗೆ ಗೌರವ, ದೇಶಪ್ರೇಮ, ದೇಶಾಭಿಮಾನ, ನಾಡು-ನುಡಿಯ ಅಭಿಮಾನ ಮೂಡುತ್ತದೆ. ನಾಟಕಗಳಲ್ಲಿ ಬಳಕೆಯಾದ ಭಾಷೆ ಆಡುಭಾಷೆ ಮತ್ತು ಆಯಾ ಪ್ರದೇಶದ ವ್ಯಾವಹಾರಿಕ ಶಿಷ್ಟ ಕನ್ನಡ. ನಾಟಕಗಳು ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆಯನ್ನು ಅದರಲ್ಲೂ ಕಿತ್ತೂರು ಸಂಸ್ಥಾನದ ಚರಿತ್ರೆಯ ಮೇಲೆ ವಿಶೇಷ ಬೆಳಕು ಚಲ್ಲುತ್ತವೆ.

**ಅಡಿ ಟಿಪ್ಪಣಿಗಳು**

೧. ಎನ್. ಎಂ. ಅಂಬಲಿ, ನಾಟಕಕಾರ ಚಿಕ್ಕೋಡಿ ಶಿವಲಿಂಗ ಶಾಸ್ತ್ರಿಗಳು, ಪುಟ, ೧೦೧

೨. ಜ್ಯೋತಿ ಹೊಸೂರ, ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ, ಪುಟ ೧೫೩

೩. ಕವಿತಾಕೃಷ್ಣ, ಸ್ವಾತಂತ್ರ ಹೋರಾಟಗಾರ ಸಂಗೊಳ್ಳಿ ರಾಯಣ್ಣ, ಪುಟ ೧೩೬

೪. ಅದೇ, ಪುಟ, ೧೪೪

೫. ಅದೇ, ಪುಟ, ೧೭೦

೬. ಅದೇ, ಪುಟ, ೧೭೪

೭. ಅದೇ, ಪುಟ, ೧೭೬

೮. ಅದೇ, ಪುಟ, ೧೮೩

೯. ಎಚ್. ಎನ್. ಹೂಗಾರ, ಸ್ವಾತಂತ್ರ್ಯ ಹುಲಿ ಸಂಗೊಳ್ಳಿ ರಾಯಣ್ಣ, ಪುಟ, ೦೪

೧೦. ಅದೇ, ಪುಟ, ೧೬

೧೧. ಅದೇ, ಪುಟ, ೦೮

೧೨. ಅದೇ, ಪುಟ, ೭೯

೧೩. ಅದೇ, ಪುಟ, ೯೦

೧೪. ಅದೇ, ಪುಟ, ೧೧೫

೧೫. ರಾಜಾನಂದ್, ಸಂಗೊಳ್ಳಿ ರಾಯಣ್ಣ, ಪುಟ, ೦೯

೧೬. ಎನ್. ಎಂ. ಅಂಬಲಿ, ನಾಟಕಕಾರ ಚಿಕ್ಕೋಡಿ ಶಿವಲಿಂಗ ಶಾಸ್ತ್ರೀಗಳು, ಪುಟ, ೧೫೯

೧೭. ಬಷೀರ್, ಸಂಗೊಳ್ಳಿ ರಾಯಣ್ಣ, ಪುಟ, ೦೩.

೧೮. ಅದೇ, ಪುಟ, ೦೫

೧೯. ಅದೇ, ಪುಟ, ೩೪

೨೦. ಅದೇ, ಪುಟ, ೬೨

೨೧. ಅದೇ, ಪುಟ, ೧೨

೨೨. ಅದೇ, ಪುಟ, ೧೮

೨೩. ಅದೇ, ಪುಟ, ೬೧

೨೪. ಅದೇ, ಪುಟ, ೬೫

೨೫. ಅದೇ, ಪುಟ, ೯೯

೨೬. ಶಂಕರ ಲಮಾಣಿ, ಹಾಲು ಮತದ ವೀರಗಾಥೆ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಪುಟ, ೦೩

೨೭. ಅದೇ, ಪುಟ, ೧೮

೨೮. ಅದೇ, ಪುಟ, ೧೦೦

೨೯. ಅದೇ, ಪುಟ, ೧೧೦

೩೦. ಮೈಸೂರು ಆರ್ ಜಯರಾಂ, ನಾಲ್ಕು ನಾಟಕಗಳು, ಪುಟ, ೧೮೬

೩೧. ಅದೇ, ಪುಟ, ೨೦೩

೩೨. ಅದೇ, ಪುಟ, ೨೦೯

೩೩. ಅದೇ, ಪುಟ, ೨೧೭

೩೪. ಅದೇ ಪುಟ, ೨೨೩

೩೫. ಶಿರೀಷ್ ಜೋಶಿ, ಮಿಂಚು, ಪುಟ, ೦೨

* * *

## ಅಧ್ಯಾಯ : ನಾಲ್ಕು

# ಸಂಗೊಳ್ಳಿ ರಾಯಣ್ಣ : ಕಾದಂಬರಿ ಸಾಹಿತ್ಯ

ಭಾರತದಲ್ಲಿ ೧೮೫೭ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕಿಂತ ಪೂರ್ವದಲ್ಲಿ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಅನೇಕ ವೀರರು ಹೋರಾಟ ಮಾಡಿರುವುದನ್ನು ನಾವು ಗಮನಿಸುತ್ತೇವೆ. ಭಾರತದಲ್ಲಿ ಸ್ವಾತಂತ್ರ್ಯ ಚಳುವಳಿಯು ಒಂದೊಂದು ಪ್ರದೇಶಗಳಲ್ಲಿ ಗುಪ್ತತೆಯಿಂದ ಮತ್ತೊಂದೆಡೆ ನೇರವಾಗಿ, ಪ್ರತ್ಯಕ್ಷವಾಗಿ ಹೋರಾಟ ನಡೆದಿರುವುದನ್ನು ಕಾಣುತ್ತೇವೆ. ೧೮೫೭ರಲ್ಲಿ ನಡೆದ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವನ್ನು ಬ್ರಿಟಿಷರು ಹಾಗೂ ಕೆಲವು ಅಧ್ಯಯನಕಾರರು 'ಸಿಪಾಯಿ ದಂಗೆ' ಎಂದು ಕರೆದಿದ್ದರೂ ಸಹ ಭಾರತದಾದ್ಯಂತ ಬ್ರಿಟಿಷರ ವಿರುದ್ಧ ಹೋರಾಟ ಮಾಡಿರುವುದು ಕಂಡುಬರುತ್ತದೆ. ೧೮೫೭ಕ್ಕಿಂತ ಪೂರ್ವದಲ್ಲಿಯೂ ಭಾರತದಲ್ಲಿ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹಲವಾರು ಹೋರಾಟಗಳು ನಡೆದಿರುವುದನ್ನು ನಾವು ಕಾಣುತ್ತೇವೆ. ಈ ಹೋರಾಟಗಳು ಇಡೀ ಭಾರತದ ಸ್ವಾತಂತ್ರ್ಯಕ್ಕಾಗಿ ನಡೆದಿಲ್ಲ. ಬದಲಾಗಿ ತಮ್ಮ ತಮ್ಮ ಸಾಮ್ರಾಜ್ಯ, ಸಂಸ್ಥಾನ ಹಾಗೂ ರಾಜ ಪ್ರಭುತ್ವಗಳನ್ನು ಮರಳಿ ಸ್ಥಾಪಿಸುವುದಕ್ಕಾಗಿ ನಡೆದಂತಹ ಹೋರಾಟಗಳಾಗಿವೆ. ಆದರೆ ಈ ಹೋರಾಟಗಳೇ ಮುಂದೆ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಹೋರಾಟಕ್ಕೆ ಸ್ಫೂರ್ತಿಯನ್ನು ನೀಡಿವೆ ಎಂದರೆ ತಪ್ಪಾಗಲಾರದು.

ದಕ್ಷಿಣ ಭಾರತದಲ್ಲಿ ಬ್ರಿಟಿಷರಿಗೆ ಪ್ರಬಲವಾಗಿ ವಿರೋಧವನ್ನು ವ್ಯಕ್ತಪಡಿಸಿದವರೆಂದರೆ ಮೈಸೂರು ಸಂಸ್ಥಾನದ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು. ಇವರಿಬ್ಬರು ತಮ್ಮ ಮರಣದವರೆಗೂ ಬ್ರಿಟಿಷರಿಗೆ ಶರಣಾಗಲಿಲ್ಲ. ಆದರೆ ೧೭೯೯ರಲ್ಲಿ ನಾಲ್ಕನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪುವಿನ ಮರಣದ ನಂತರ ಮೈಸೂರು ಸಂಸ್ಥಾನ ಬ್ರಿಟಿಷರ ವಶವಾಗುತ್ತದೆ. ತಿ. ತಾ ಶರ್ಮ ಅವರು 'ಮೈಸೂರಿನ ಪತನವನ್ನು ಶ್ರೀರಂಗದ ಪತನವೆಂದು ಮೈಸೂರಿನ ಕರ್ನಾಟಕದ ಸ್ವಾತಂತ್ರ್ಯದ ವಿನಾಶ'[೧] ಎಂದು ಹೇಳಿದ್ದಾರೆ. ಮೈಸೂರಿನ ಪತನದ ನಂತರ ದಕ್ಷಿಣ ಭಾರತದಲ್ಲಿ ಬ್ರಿಟಿಷರು

ಅಧಿಪತ್ಯವನ್ನು ಸ್ಥಾಪಿಸಿದರು. ಇಲ್ಲಿಂದ ಹೆಚ್ಚು ಕಡಿಮೆ ಭಾರತವು ಬ್ರಿಟಿಷರ ಅಧಿಪತ್ಯಕ್ಕೆ ಒಳಪಟ್ಟಿತ್ತು ಎಂದು ಹೇಳಬಹುದು. ಮೈಸೂರು ಸಂಸ್ಥಾನದ ಪತನದ ನಂತರವೂ ಸಹ ಬ್ರಿಟಿಷರ ವಿರುದ್ಧ ಹೋರಾಟಗಳು ನಡೆದಿರುವುದು ಕಂಡುಬರುತ್ತವೆ. ಕಿತ್ತೂರಿನ ರಾಣಿ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ನರಗುಂದದ ಬಾಬಾಸಾಹೇಬ, ಸುರಪುರದ ವೆಂಕಟಪ್ಪ ನಾಯಕ ಹೀಗೆ ಹಲವಾರು ಸಂಸ್ಥಾನಗಳು, ಪಾಳೆಗಾರರು ಬ್ರಿಟಿಷರ ವಿರುದ್ಧ ಹೋರಾಟ ಮಾಡಿರುವುದನ್ನು ಕಾಣುತ್ತೇವೆ. ಇಂತಹ ಹೋರಾಟಗಳಲ್ಲಿ ಕಿತ್ತೂರು ಸಂಸ್ಥಾನದ ಪಾತ್ರ ತುಂಬಾ ಮಹತ್ವದ್ದಾಗಿದೆ.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಕಿತ್ತೂರಿಗೆ ಪ್ರಮುಖವಾದ ಸ್ಥಾನವಿದೆ. ಕಿತ್ತೂರು ಚಿಕ್ಕ ಸಂಸ್ಥಾನವಾದರೂ ಬ್ರಿಟಿಷರ ಅಧಿಪತ್ಯವನ್ನು ಒಪ್ಪಿಕೊಳ್ಳದೆ ಪ್ರತಿರೋಧವನ್ನು ವ್ಯಕ್ತಪಡಿಸುತ್ತದೆ. ಕಿತ್ತೂರು ಸಂಸ್ಥಾನಕ್ಕೆ ಉತ್ತರಾಧಿಕಾರಿಯಿಲ್ಲ ಎಂಬ ನೆಪವೊಡ್ಡಿ ಕಿತ್ತೂರನ್ನು ವಶಪಡಿಸಿಕೊಳ್ಳಲು ಬಂದಂತಹ ಧಾರವಾಡದ ಪೊಲಿಟಿಕಲ್ ಏಜೆಂಟ್ ಥ್ಯಾಕರೆಯ ವಿರುದ್ಧ ಚೆನ್ನಮ್ಮಳ ಸ್ವಾಭಿಮಾನ ಹಾಗೂ ಸ್ವಾತಂತ್ರ್ಯ ಅಪಾರವಾದದ್ದು. ಆಕೆಯ ಸಾವಿನ ನಂತರ ನಡೆದ ಯುದ್ಧ ತಂತ್ರ ಹಾಗೂ ದೇಶದ್ರೋಹಿಗಳ ಮೂಲಕ ಕಿತ್ತೂರು ಬ್ರಿಟಿಷರ ಕೈವಶವಾಗುತ್ತದೆ. ಕಿತ್ತೂರು ಬ್ರಿಟಿಷರ ವಶವಾದ ನಂತರ ಮತ್ತೆ ಕಿತ್ತೂರನ್ನು ಸ್ವತಂತ್ರ್ಯಗೊಳಿಸಿ ದೇಸಾಯರ ಆಡಳಿತವನ್ನು ಮರು ಸ್ಥಾಪಿಸಬೇಕೆಂದು ರಾಯಣ್ಣ ಹೋರಾಟವನ್ನು ಮಾಡುತ್ತಾನೆ. ನಾಡಪ್ರೇಮ, ನಿಷ್ಠೆ, ಸ್ವಾತಂತ್ರ್ಯ, ಸ್ವಾಭಿಮಾನಿಯಾದ ರಾಯಣ್ಣ ಸೈನ್ಯವನ್ನು ಸಂಘಟಿಸಿ ಬ್ರಿಟಿಷರ ವಿರುದ್ಧ ಹೋರಾಟವನ್ನು ಮಾಡುತ್ತಾನೆ. ಆದರೆ ನಮ್ಮವರಿಂದಲೇ ರಾಯಣ್ಣನಿಗೆ ಹಾಗೂ ಕಿತ್ತೂರು ಸಂಸ್ಥಾನಕ್ಕೆ ಮೋಸ ಮಾಡಿ, ಬ್ರಿಟಿಷರಿಗೆ ಕಿತ್ತೂರು ಸಂಸ್ಥಾನದ ಕೆಲವರು ಸಹಾಯ ಮಾಡುತ್ತಾರೆ. ಇವರ ಪಿತೂರಿಯಿಂದ ರಾಯಣ್ಣ ಗಲ್ಲಿಗೇರುವ ಸಂದರ್ಭ ಬರುತ್ತದೆ.

ಭಾರತೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಸಾಹಿತ್ಯದ ಪಾತ್ರ ಅನನ್ಯವಾದದ್ದು. ಸಾಹಿತ್ಯ ಮತ್ತು ಚರಿತ್ರೆ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಸಾಹಿತ್ಯವು ಅಂದಿನ ಕಾಲದ ಸಾಮಾಜಿಕ, ಆರ್ಥಿಕ, ರಾಜಕೀಯ ಮುಂತಾದ ಅಂಶಗಳನ್ನು ತಿಳಿಸಿಕೊಡಲು ಸಹಕಾರಿಯಾಗುತ್ತವೆ. ಹಾಗೂ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಜನರಲ್ಲಿ ಐಕ್ಯತೆಯನ್ನು ಮೂಡಿಸುವುದಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ತಮ್ಮ ಬದುಕನ್ನು ತ್ಯಾಗ ಮಾಡಿದವರ ಜೀವನ ಚಿತ್ರಣವನ್ನು ಚಿತ್ರಿಸುವುದರ ಜೊತೆಗೆ ಹೋರಾಟಗಾರರಿಗೆ ಪ್ರೇರಣೆಯನ್ನು ನೀಡುತ್ತವೆ. ಕತೆ, ಕಾದಂಬರಿ, ನಾಟಕ ಹಾಗೂ ಮೌಖಿಕ ಸಾಹಿತ್ಯದ ಆಕರಗಳು ಜನರಲ್ಲಿ ಸ್ವಾತಂತ್ರ್ಯದ ಕುರಿತು ಜಾಗೃತಿ ಮೂಡಿಸಿರುವುದನ್ನು ಕಾಣುತ್ತೇವೆ.

ಕನ್ನಡದಲ್ಲಿ ಸ್ವಾತಂತ್ರ್ಯ ಚಳುವಳಿಯನ್ನು ವಸ್ತುವಾಗಿಟ್ಟುಕೊಂಡು ಹಲವಾರು ಕಾದಂಬರಿಗಳು ರಚನೆಯಾಗಿವೆ. ಗಳಗನಾಥರ 'ಕುಮುದಿನಿ,' 'ಮಾಧವ ಕರುಣಾವಿಲಾಸ' ಮಾಸ್ತಿಯವರ 'ಚಿಕ್ಕವೀರರಾಜೇಂದ್ರ' ಮಿರ್ಜಿ ಅಣ್ಣಾರಾಯರ 'ರಾಷ್ಟ್ರಪುರುಷ' ತರಾಸು, ಶ್ರೀರಂಗ, ಬಸವರಾಜ

ಕಟ್ಟಿಮನಿಯವರ 'ಸ್ವಾಂತ್ರ್ಯದೆಡೆಗೆ,' 'ಮಾಡಿ ಮಡಿದವರು,' 'ಪೌರುಷ ಪರೀಕ್ಷೆ' ಹಾಗೂ 'ಸಂಗೊಳ್ಳಿ ರಾಯನಾಯಕ' ಹೀಗೆ ಹಲವಾರು ಕಾದಂಬರಿಕಾರರು ಸ್ವಾತಂತ್ರ್ಯ ಚಳುವಳಿಯನ್ನು ವಸ್ತುವಾಗಿಟ್ಟುಕೊಂಡು ಹಲವಾರು ಕಾದಂಬರಿಗಳನ್ನು ರಚಿಸಿದ್ದಾರೆ. ಯಾವುದೇ ಒಂದು ಚರಿತ್ರೆಯನ್ನು ತಿಳಿಯುವಲ್ಲಿ ಸಾಹಿತ್ಯದ ಪಾತ್ರ ತುಂಬಾ ಮುಖ್ಯವಾಗಿರುತ್ತದೆ. ಏಕೆಂದರೆ ಸಾಹಿತ್ಯ ಚಾರಿತ್ರಿಕ ಘಟನೆಯನ್ನು ಹೇಳುವುದರ ಜೊತೆಗೆ ಅಂದಿನ ಕಾಲದ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಮುಂತಾದ ಅಂಶಗಳನ್ನು ತಿಳಿಯಲು ಸಹಾಯಕವಾಗುತ್ತದೆ.

"ಐತಿಹಾಸಿಕ ಕಾದಂಬರಿಗಳನ್ನು ಬೇರೆ ಬೇರೆ ಉದ್ದೇಶಗಳಿಂದ ಬರೆಯಬಹುದು. ಗತಕಾಲದ ವೈಭವವನ್ನು ಪರಿಚಯ ಮಾಡಿಕೊಡುವುದು ಒಂದು ಉದ್ದೇಶವಾಗಬಹುದು; ಹಿಂದಿನ ಯುಗವೊಂದು ಯಾವುದಾದರೊಂದು ಕಾರಣದಿಂದ ಕುತೂಹಲಕಾರಿ ಎಂದು ಸಾಹಿತ್ಯದಲ್ಲಿ ಯುಗವನ್ನು ಪುನರ್ ನಿರ್ಮಾಣ ಮಾಡುವುದು ಗುರಿಯಾಗಬಹುದು; ಒಂದು ಜೀವನ ದೃಷ್ಟಿಯನ್ನು ಮೂರ್ತವಾಗಿ ಕಾಣಿಸಲು ಐತಿಹಾಸಿಕ ಕಾದಂಬರಿಯನ್ನು ಬರೆಯಹುದು. ಯಾವುದಾದರೊಂದು ದೃಷ್ಟಿಯಿಂದ ಮಹಾಮಹಿಮರೆನಿಸಿಕೊಂಡ ವ್ಯಕ್ತಿಗಳ ವ್ಯಕ್ತಿತ್ವವನ್ನು ಬೆಳಗುವುದು ಉದ್ದೇಶವಾಗಬಹುದು; ಒಂದು ಕಾಲದ ಜನ ಜೀವನವನ್ನು ನಿರೂಪಿಸುವ ಗುರಿ ಇರಬಹುದು. ಇವುಗಳಲ್ಲಿ ಒಂದಕ್ಕಿಂತ ಹೆಚ್ಚು ಉದ್ದೇಶಗಳೂ ಇರಬಹುದು.

ಕನ್ನಡದಲ್ಲಿ ಬಂದ ಬಹು ಸಂಖ್ಯೆಯ ಐತಿಹಾಸಿಕ ಕಾದಂಬರಿಗಳ ಉದ್ದೇಶ ಭಾರತೀಯರ ಮತ್ತು ಕನ್ನಡಿಗರ ಗತವೈಭವವನ್ನು ಪರಿಚಯ ಮಾಡಿಕೊಡುವುದು; ಕಾದಂಬರಿಕಾರರು ನಾಡಿನ ಹಿರಿಮೆಯ ಸಂಕೇತಗಳಾದ ನೃಪತುಂಗ, ಕೃಷ್ಣದೇವರಾಯ, ವಿದ್ಯಾರಣ್ಯ, ಬಸವೇಶ್ವರ, ಅತ್ತಿಮಬ್ಬೆ ಇಂತಹ ಹಿರಿಯ ಚೇತನಗಳನ್ನು ಕೇಂದ್ರ ಪಾತ್ರಗಳನ್ನಾಗಿ ಆರಿಸಿಕೊಂಡರು. ದೇಶದ ಜನ ಜಡನಿದ್ರೆಯಿಂದ ಎದ್ದು ಸ್ವಾತಂತ್ರ್ಯದ ಯೋಧರಾಗುವಂತೆ ಎಚ್ಚರಿಸುವ ಗುರಿ ಬಹುಮಂದಿ ಕಾದಂಬರಿಕಾರರದು."[೨] ಐತಿಹಾಸಿಕ ಕಾದಂಬರಿಗಳು ನಾಡಿನ ಚರಿತ್ರೆಯನ್ನು ಕಟ್ಟಿಕೊಡುವುದರ ಜೊತೆಗೆ ಅಂದಿನ ಜೀವನ ದೃಷ್ಟಿಯನ್ನು ನೀಡುತ್ತವೆ. ಕನ್ನಡದಲ್ಲಿ ಬಂದಂತಹ ಐತಿಹಾಸಿಕ ಕಾದಂಬರಿಗಳು ಹೆಚ್ಚಾಗಿ ಭಾರತೀಯರ, ಕನ್ನಡಿಗರ, ಕರ್ನಾಟಕದ ಗತವೈಭವದ ಜೊತೆಗೆ ಭಾರತೀಯ ಸ್ವಾತಂತ್ರ್ಯ ಚಳುವಳಿಯ ವಸ್ತುವನ್ನಿಟ್ಟುಕೊಂಡು ರಚನೆಯಾಗಿರುವುದನ್ನು ಕಾಣುತ್ತೇವೆ.

ಕಿತ್ತೂರು ಸಂಸ್ಥಾನದ ಕುರಿತು ಹಾಗೂ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ನಮಗೆ ಹೆಚ್ಚಿನ ದಾಖಲೆಗಳು ಲಭ್ಯವಿಲ್ಲ. ಹೆಚ್ಚಾಗಿ ದೊರೆಯುವುದು ಜನಪದ ಸಾಹಿತ್ಯದಲ್ಲಿ. ಇದರ ಜೊತೆಗೆ ಕತೆ, ಕಾದಂಬರಿ, ನಾಟಕ, ಕಾವ್ಯ, ಕಾದಂಬರಿಗಳ ಮೂಲಕ ಕಿತ್ತೂರು ಸಂಸ್ಥಾನದ ಹಾಗೂ ಸಂಗೊಳ್ಳಿ ರಾಯಣ್ಣನ ಕುರಿತು ಮಾಹಿತಿಗಳನ್ನು ತಿಳಿಯಲು ಸಹಾಯಕವಾಗುತ್ತದೆ. ರಾಯಣ್ಣನಿಗೆ ಸಂಬಂಧಿಸಿದಂತೆ ಬಸವರಾಜ ಕಟ್ಟಿಮನಿಯವರ 'ಸಂಗೊಳ್ಳಿ ರಾಯನಾಯಕ' ವೈ.

ಐ. ಮೇಲಿನಮನಿ ಯವರ 'ಕ್ರಾಂತಿಯ ಕಿಡಿ' ಈ ಕಾದಂಬರಿಯು ಭಾಗ-೧ ಪ್ರಕಟಗೊಂಡಿದೆ. ಬಸವರಾಜ ನಾಯ್ಕರ ಅವರ 'ಕಿತ್ತೂರಿನ ವೀರರಾಣಿ ಚೆನ್ನಮ್ಮ' ಮುಂತಾದ ಕಾದಂಬರಿಗಳಲ್ಲಿ ಸಂಸ್ಥಾನದ ಚಿತ್ರಣ ರಾಣಿ ಚೆನ್ನಮ್ಮಳ ಹೋರಾಟ, ಕಿತ್ತೂರು ಸಂಸ್ಥಾನದ ಪತನ, ಸಂಗೊಳ್ಳಿ ರಾಯಣ್ಣ ಜೀವನ, ಕಿತ್ತೂರಿನ ಬಗ್ಗೆ ಅಭಿಮಾನ, ಸ್ವಾಭಿಮಾನ, ಸ್ವಾತಂತ್ರ್ಯದ ಅಂಶಗಳನ್ನು ಹೊಂದಿರುತ್ತದೆ. ಕಿತ್ತೂರು ಪತನದ ನಂತರ ಕಿತ್ತೂರನ್ನು ಮತ್ತೆ ಸ್ವತಂತ್ರಗೊಳಿಸಲು ರಾಯಣ್ಣ ನಡೆಸಿದಂತಹ ಹೋರಾಟ ಮತ್ತು ರಾಯಣ್ಣನ ಅಂತ್ಯ ನಮ್ಮವರ ಪಿತೂರಿಗಳು ಇನ್ನೂ ಮುಂತಾದ ಅಂಶಗಳು ಕಾದಂಬರಿಗಳಲ್ಲಿ ಚಿತ್ರಿತವಾಗಿರುವುದನ್ನು ಗಮನಿಸಬಹುದು. ಎಲ್ಲಾ ಕಾದಂಬರಿಗಳ ಮೂಲಕ ಅಂದಿನ ಕಾಲದ ಜೀವನವನ್ನು ತಿಳಿಯಲು ಸಹಾಯಕವಾಗುತ್ತದೆ. ಈ ಅಧ್ಯಾಯದಲ್ಲಿ ಆ ಕಾದಂಬರಿಗಳ ಕುರಿತು ಚರ್ಚಿಸಲಾಗಿದೆ.

ಐತಿಹಾಸಿಕ ವಿಷಯಗಳಿಗೆ ಸಂಬಂಧಿಸಿದಂತೆ ಸಾಹಿತ್ಯ ರಚನೆಗೆ ಮುಖ್ಯ ಆಕರಗಳು ದೊರಕುವುದು ತೀರಾ ವಿರಳ. ೧೯ನೇ ಶತಮಾನದ ನಂತರ ಚಾರಿತ್ರಿಕ ವಿಷಯಗಳಿಗೆ ಸಂಬಧಿಸಿದಂತಹ ಆಕರಗಳು ದೊರಕುತ್ತವೆ. ಇದಕ್ಕಿಂತ ಪೂರ್ವದಲ್ಲಿ ನಡೆದಂತಹ ಐತಿಹಾಸಿಕ ಘಟನೆಗಳಿಗೆ ಆಕರಗಳಿಗಾಗಿ ಹೆಚ್ಚಾಗಿ ಜನಪದ ಸಾಹಿತ್ಯದ ಮೊರೆ ಹೋಗಬೇಕಾಗುತ್ತದೆ. ಹಾಗೂ ಬ್ರಿಟಿಷರು ನಡೆಸಿದಂತಹ ಪತ್ರ ವ್ಯವಹಾರಗಳು ರಾಯಣ್ಣನಿಗೆ ಸಂಬಂಧಿಸಿದ ಪ್ರಮುಖ ಆಕರಗಳು ಇಂತಹ ಆಕರಗಳನ್ನು ಇಟ್ಟುಕೊಂಡು ಲೇಖಕರು ಅಂದಿನ ಕಾಲದ ಸೂಕ್ಷ್ಮ ವಿಷಯಗಳನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ.

ಬಸವರಾಜ ಕಟ್ಟೀಮನಿಯವರು ಸಂಗೊಳ್ಳಿ ರಾಯನಾಯಕ ಕಾದಂಬರಿಯ ಮುನ್ನುಡಿಯಲ್ಲಿ 'ಉತ್ತರ ಕರ್ನಾಟಕದ ಪ್ರಖ್ಯಾತ ಸ್ವಾತಂತ್ರ್ಯವೀರ ಸಂಗೊಳ್ಳಿ ರಾಯಣ್ಣ ಬ್ರಿಟಿಷರ ಅಧಿಕಾರವನ್ನು ಪ್ರತಿಭಟಿಸಿ ಪೌರುಷದಿಂದ ಹೋರಾಡಿ' ತನ್ನ ಪ್ರಾಣವನ್ನೆ ಮುಡುಪಾಗಿಟ್ಟ ರಾಯಣ್ಣನ ಕುರಿತು "ಆ ಗಂಡುಗಲಿಯನ್ನು ಕುರಿತು ಜನಪದ ಕಥೆಗಳು, ಲಾವಣಿ ಪದಗಳು, ಬಯಲಾಟಗಳು ರಚಿತವಾಗಿವೆ. ಆದರೆ ಐತಿಹಾಸಿಕ ಸತ್ಯಾಂಶಗಳನ್ನು ಸಂಗ್ರಹಿಸಿ ಒಂದು ವ್ಯವಸ್ಥಿತವಾದ ರೀತಿಯಲ್ಲಿ ಆತನ ಚರಿತ್ರೆಯನ್ನು ರೂಪಿಸುವ ಕೆಲಸ ಇದುವರೆಗೂ ನಡೆದಿಲ್ಲ."[೩] ರಾಯಣ್ಣನಿಗೆ ಸಂಬಂಧಿಸಿದ ಆಕರಗಳನ್ನ ಅಂದರೆ ಜನಪದ ಕತೆಗಳು, ಲಾವಣಿಗಳು, ಕೋಲು ಪದಗಳು, ಡೊಳ್ಳು ಪದಗಳನ್ನು ಸಮಗ್ರವಾಗಿ ಸಂಗ್ರಹಿಸಿ ಸಂಪಾದಿಸಬೇಕಾದ ಅನಿರ್ವಾಯತೆ ನಮ್ಮ ಮುಂದಿದೆ. ಕರ್ನಾಟಕದಲ್ಲಿ ಬ್ರಿಟಿಷರ ವಿರುದ್ಧ ನಡೆದ ಸ್ವತಂತ್ರ ಚಳುವಳಿಯಲ್ಲಿ ರಾಯಣ್ಣನ ಪಾತ್ರ ಬಹಳಷ್ಟಿದೆ. ಆದರೆ ಚರಿತ್ರೆಯ ಅಧ್ಯಯನಕಾರರು ರಾಯಣ್ಣನ ಸ್ಥಾನವನ್ನು ಗೌಣವಾಗಿಸಿದ್ದಾರೆ. ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ರಾಣಿ ಚೆನ್ನಮ್ಮಳ ನಂತರ ಸಂಗೊಳ್ಳಿ ರಾಯಣ್ಣ ಹೋರಾಟವನ್ನು ಮುಂದುವರೆಸುತ್ತಾನೆ. ಒಂದು ವೇಳೆ ಈ ಹೋರಾಟದಲ್ಲಿ ರಾಯಣ್ಣ ಜಯಗಳಿಸಿದ್ದರೆ ರಾಯಣ್ಣನಿಗೆ ರಾಜನಾಗಬೇಕೆಂಬ ಬಯಕೆಯು

ಅವನಿಗೆ ಇರಲಿಲ್ಲ. ಸ್ವಾಭಿಮಾನ, ಸ್ವಾತಂತ್ರ್ಯವೇ ಹೊರತು ಅಧಿಕಾರವಲ್ಲ. ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ರಾಯಣ್ಣನು ಸರ್ವವನ್ನು ತ್ಯಾಗ ಮಾಡಿ ಕೊನೆಗೆ ಮೋಸ ಹೋಗುತ್ತಾನೆ. ಇಂತಹ ಚಾರಿತ್ರಿಕ ವಸ್ತುವನ್ನಿಟ್ಟುಕೊಂಡು ಕನ್ನಡದಲ್ಲಿ ಕಾದಂಬರಿಗಳು ಬಂದಿರುವುದನ್ನು ನಾವು ಕಾಣುತ್ತೇವೆ.

ರಾಯಣ್ಣನ ಜೀವನ ಚರಿತ್ರೆಯನ್ನು ತಿಳಿಯಲು ನಮಗೆ ಕೆಲವೇ ಕೆಲವು ದಾಖಲೆಗಳು ಮಾತ್ರ ದೊರೆಯುತ್ತವೆ. ಆದರೆ ಈ ದಾಖಲೆಗಳಲ್ಲಿ ಪೂರ್ಣ ವಿವರಗಳು ದೊರೆಯುವುದಿಲ್ಲ. ನಮಗೆ ದೊರೆಯುವುದು ಹೆಚ್ಚಾಗಿ ಮೌಖಿಕ ಸಾಹಿತ್ಯದಲ್ಲಿ ಮಾತ್ರ. ಲಾವಣಿಗಳು, ದುಂದುಮೆಗಳು, ಕೋಲಾಟದ ಪದಗಳು, ಹಂತಿ ಪದಗಳು, ಜನಪದ ಕಥೆಗಳಿಂದ ಮಾತ್ರ. ಇವುಗಳ ಮುಂದುವರೆದ ಭಾಗ ಆಧುನಿಕ ಶಿಕ್ಷಣ ಪಡೆದಂತಹ ಶಿಕ್ಷಿತರು, ಭಾರತೀಯ ಸ್ವಾತಂತ್ರ್ಯ ಹೋರಾಟಕ್ಕೆ ತಮ್ಮ ಬಲಿದಾನಗಳನ್ನು ಕೊಟ್ಟಂತಹ ಚಾರಿತ್ರಿಕ ವ್ಯಕ್ತಿಗಳನ್ನು ಕುರಿತು ಕಾದಂಬರಿ, ನಾಟಕ, ಕಥೆ ಮುಂತಾದವುಗಳನ್ನು ರಚಿಸಿದ್ದಾರೆ. ಇಂತಹ ಚಾರಿತ್ರಿಕ ವ್ಯಕ್ತಿಗಳ ಜೀವನ ಚಿತ್ರಣ ಹಾಗೂ ರಾಜಕೀಯ ಚಿತ್ರಣವನ್ನು ತಿಳಿಯಲು ಇವು ಸಹಾಯಕವಾಗುತ್ತವೆ. ಇಂತಹವುಗಳಲ್ಲಿ ಕಾದಂಬರಿಯ ಪಾತ್ರ ಮುಖ್ಯವಾದದ್ದು. ಕಾದಂಬರಿ ಹಾಗೂ ಸಾಹಿತ್ಯದ ಮೂಲಕ ಜನರಲ್ಲಿ ಸ್ವಾತಂತ್ರ್ಯದ ಬಗ್ಗೆ ಜಾಗೃತಿಯನ್ನು ಕಾದಂಬರಿಯು ಮೂಡಿಸಿರುವುದನ್ನು ಕಾಣುತ್ತೇವೆ.

ಬಸವರಾಜ ಕಟ್ಟೀಮನಿಯವರ 'ಮಾಡಿ ಮಡಿದವರು' ಕಾದಂಬರಿಯಲ್ಲಿ "ನಮ್ಮ ಪ್ರೀತಿಯ ಕಿತ್ತೂರನ್ನು ನಾಶಮಾಡಿ ಸೇಡು ತೀರಿಸಿಕೊಂಡರಲ್ಲವೇ? ಈ ಸರಕಾರದವರು? ಅಲ್ಲಿಯ ಅರಮನೆಯನ್ನೆಲ್ಲಾ ಹಾಳುಗೆಡವಿ ಕೋಟೆಯ ಗೋಡೆಗಳನ್ನೆಲ್ಲ ನೆಲಸಮಗೊಳಿಸಿ ಮಣ್ಣುಗೂಡಿಸಿದರಲ್ಲವೆ. ಅರಮನೆ ಮುರಿದು ಹೋದರೇನು? ಕೋಟೆ ಹಾಳಾದರೇನು? ಕಿತ್ತೂರಿನ ಶೌರ್ಯ ಹಾಳಾದೀತೆ? ಇಂದಲ್ಲ ನಾಳೆ ಮತ್ತೆ ಮೇಲಕ್ಕೆದ್ದೀತು ಅಲ್ಲಿನ ಒಂದೊಂದು ಮಣ್ಣಿನ ಕಣಗಳಲ್ಲಿ ಒಬ್ಬೊಬ್ಬ ಚೆನ್ನಮ್ಮ ಹುಟ್ಟಿಕೊಂಡಾಳು ಒಬ್ಬೊಬ್ಬ ಸಂಗೊಳ್ಳಿ ರಾಯಣ್ಣ ಹುಟ್ಟಿಕೊಂಡಾನು ಹಿಂದಿನದಕ್ಕಿಂತಲೂ ಭವ್ಯವಾದ ಕೋಟೆ ಅಲ್ಲಿ ಮೆರೆದೀತು ಅದರ ಮೇಲೆ ನಮ್ಮ ಬಾವುಟ ಡೌಲಿನಿಂದ ಹಾರಾಡೀತು."[೪]

ಭಾರತೀಯ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಹೋರಾಟಗಾರರಿಗೆ ರಾಣಿ ಚೆನ್ನಮ್ಮ ಸಂಗೊಳ್ಳಿ ರಾಯಣ್ಣ ಮುಂತಾದವರು ಸ್ಫೂರ್ತಿ ಆಗಿರುವುದನ್ನು ಬಸವರಾಜ ಕಟ್ಟೀಮನಿಯವರ ಮಾಡಿ ಮಡಿದವರು ಕಾದಂಬರಿಯಲ್ಲಿ ಬರುವ ಈ ಮಾತುಗಳು ಭಾರತೀಯ ಸ್ವಾತಂತ್ರ್ಯ ಸಂದರ್ಭದಲ್ಲಿ ಉತ್ತರ ಕರ್ನಾಟಕದ ಜನತೆಗೆ ಸ್ಫೂರ್ತಿಯಾಗಿರುವುದನ್ನು ಕಾಣುತ್ತೇವೆ.

ಭರಮಪ್ಪ ಮತ್ತು ಕೆಂಚವ್ವರ ಎರಡನೆಯ ಮಗನಾಗಿ ರಾಯಣ್ಣ ಜನಿಸುತ್ತಾನೆ. ರಾಯಣ್ಣನ ಮನೆತನ ವೀರಮನೆತನವಾಗಿದ್ದು, ಸ್ವಾತಂತ್ರ್ಯ ಸ್ವಾಭಿಮಾನ, ದೇಶಪ್ರೇಮ ಇವರ ಮನೆತನದಲ್ಲಿ ವಂಶಪಾರಂಪರ್ಯವಾಗಿ ಮುಂದುವರೆದುಕೊಂಡು ಬಂದಿರುವುದನ್ನು ನಾವು ಕಾಣಬಹುದು. ಸಂಗೊಳ್ಳಿ ರಾಯಣ್ಣನ ಮನೆತನಕ್ಕೆ ರಕ್ತ ಮಾನ್ಯದ ಆಸ್ತಿ ಇತ್ತು ಹಾಗೂ ಇತರೆ ಹೆಚ್ಚಿನ ಆಸ್ತಿಯು

ಇದ್ದುದರಿಂದ ಸಂಗೊಳ್ಳಿ ಕುಲಕರ್ಣಿ ಬಾಳಪ್ಪ ಅಸೂಯೆ ಪಡುತ್ತಿದ್ದ. ರಾಯಣ್ಣನ ಮನೆತನದವರು ವಾಲೀಕಾರ ವೃತ್ತಿಯನ್ನು ಮಾಡುತ್ತಿದ್ದರು. ರಾಯಣ್ಣನ ಶೌರ್ಯ ಪರಾಕ್ರಮಗಳನ್ನು ಬೇಕಂತಲೇ ಕುಲಕರ್ಣಿ ಬಾಳಪ್ಪ ಕೆಣಕುತ್ತಿದ್ದನು. ಕಿತ್ತೂರು ಬ್ರಿಟಿಷರ ವಶವಾದ ನಂತರ ಕಿತ್ತೂರಿನಲ್ಲಿ ಬ್ರಿಟಿಷರು ತಮ್ಮ ಕಾನೂನುಗಳನ್ನು ಕಿತ್ತೂರಿನಲ್ಲಿ ಜಾರಿಗೆ ತಂದರು. ಕಿತ್ತೂರಿನ ಜಮೀನುಗಳನ್ನು ಅಳತೆ ಮಾಡುವಂತದ್ದು ಅದರಲ್ಲಿ ಒಂದಾಗಿತ್ತು. ಈ ವಿಷಯದಿಂದ ಕುಲಕರ್ಣಿಗೆ ಎಲ್ಲಿಲ್ಲದ ಸಂತೋಷವಾಯಿತು. ರಾಯಣ್ಣನ ಜಮೀನನ್ನು ಅಳತೆ ಮಾಡುತ್ತಾ ರಾಯಣ್ಣನ ರಕ್ತ ಮಾನ್ಯ ಜಮೀನಿನ ಅಳತೆಯ ನಂತರ ಹೆಚ್ಚಿಗೆ ಇರುವಂತಹ ಆಸ್ತಿಗೆ ೩೨ ರೂಪಾಯಿಗಳನ್ನು ಕಂದಾಯ ಕೊಡಬೇಕೆಂದು ಕುಲಕರ್ಣಿ ಹೇಳುತ್ತಾನೆ. ಆಗ ರಾಯಣ್ಣನು ಇದುವರೆಗೂ ನಮ್ಮ ತಾತ ರಾಘಪ್ಪ, ನಮ್ಮ ತಂದೆ ಭರಮಣ್ಣರು ಕಂದಾಯವನ್ನು ಕೊಟ್ಟಿಲ್ಲ, ಈಗಲೂ ಕೊಡುವುದಿಲ್ಲ ಎಂದು ಹೇಳುತ್ತಾನೆ. ಕಂದಾಯ ಕೊಡುವುದನ್ನು ರಾಯಣ್ಣ ನಿರಾಕರಿಸುತ್ತಾನೆ. ಈ ಘಟನೆಯ ನಂತರ ನಡೆಯುವ ಕೆಲವು ಘಟನೆಗಳಿಂದ ರಾಯಣ್ಣನ ಜೀವನವೇ ಬದಲಾಗುತ್ತದೆ.

ರಾಯಣ್ಣನ ಕೌಟುಂಬಿಕ ವಿಷಯದಲ್ಲಿನ ಎರಡು ಮುಖ್ಯ ಪ್ರಶ್ನೆಗಳೆಂದರೆ, ವಿವಾಹದ ಕುರಿತು ಹಾಗೂ ಸಹೋದರನ ಕುರಿತು ಹಿಂದಿನಿಂದಲೂ ಚರ್ಚೆ ನಡೆಯುತ್ತಿವೆ. ಆದರೆ ಈ ವಿಷಯಗಳಿಗೆ ಸಂಬಂಧಿಸಿದಂತಹ ಯಾವುದೇ ರೀತಿಯ ಸೂಕ್ತ ದಾಖಲೆಗಳು ದೊರೆತಿಲ್ಲವೆಂದು ಅಧ್ಯಯನಕಾರರು ಹೇಳಿರುವುದನ್ನು ಕಾಣುತ್ತೇವೆ. ಪ್ರಸ್ತುತ ದಿನದಲ್ಲಿ ಇರುವಂತಹ ಸಾಕಷ್ಟು ಅಧ್ಯಯನಗಳಲ್ಲಿ ಕೆಲವೇ ಕೆಲವು ಅಧ್ಯಯನಕಾರರು ಮಾತ್ರ ಈ ವಿಷಯಗಳಿಗೆ ಸಂಬಂಧಿಸಿದಂತೆ ಚರ್ಚೆ ಮಾಡಿದ್ದಾರೆ. ಬಹುತೇಕರು ಈ ವಿಷಯದ ಬಗ್ಗೆ ಯಾವುದೇ ರೀತಿಯ ಮಾಹಿತಿಯನ್ನು ನೀಡಿಲ್ಲದಿರುವುದು ಕಂಡುಬರುತ್ತದೆ. ಇದು ವಿವಾಹಕ್ಕೆ ಹೆಚ್ಚು ಅನ್ವಯವಾಗುತ್ತದೆ. ಕೆಲವು ಅಧ್ಯಯನಕಾರರು ರಾಯಣ್ಣನ ವಿವಾಹದ ಬಗ್ಗೆ ಪ್ರಸ್ತಾಪ ಮಾಡಿಲ್ಲ. ರಾಯಣ್ಣನ ಸಹೋದರನ ಕುರಿತು ಭರಮಪ್ಪನ ಅಣ್ಣನ ಮಗನೆಂದು, ಕೆಲವರು ರಾಯಣ್ಣನ ಅಣ್ಣನೆಂದು ಹೇಳುತ್ತಾರೆ. ಸಿದ್ದಣ್ಣ ರಾಯಣ್ಣನಿಗಿಂತ ವಯಸ್ಸಿನಲ್ಲಿ ಹಿರಿಯನಾಗಿದ್ದರಿಂದ ರೂಢಿಯಲ್ಲಿ ಅಣ್ಣನೆಂದು ಕರೆಯುತ್ತಿದ್ದನೆಂದು ಹೇಳಿದ್ದಾರೆ. ಇಂತಹ ವಿಷಯದ ಕುರಿತು ಜ್ಯೋತಿ ಹೊಸೂರ ಅವರು ತಮ್ಮ ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ ಎಂಬ ಕೃತಿಯಲ್ಲಿ ಹೇಳಿರುವುದನ್ನು ನಾವು ಕಾಣಬಹುದು.

ಚರಿತ್ರೆಯಲ್ಲಿ ಉಲ್ಲೇಖವಿರದ ರಾಯಣ್ಣನ ವಿವಾಹದ ಕುರಿತು ಸಾಹಿತ್ಯದಲ್ಲಿ ಮಾಹಿತಿಗಳು ದೊರೆಯುತ್ತವೆ. ಕಾದಂಬರಿಗಳಲ್ಲಿ ರಾಯಣ್ಣನ ಕೌಟುಂಬಿಕ ಪರಿಚಯದ ಚಿತ್ರಣವನ್ನು ಈ ಕೆಳಗಿನಂತೆ ನೀಡಿದ್ದಾರೆ. ಗಂಗಾಧರ ರಾಯಣ್ಣನಿಗೆ ಕೇಳುವಂತದ್ದು 'ನನ್ನಂತೆಯೇ ನೀನೂ ಬ್ರಹ್ಮಚಾರಿ ಆಗಿಯೇ ಇದ್ದಿಯೋ? ಅಥವಾ? ಎಂದು ಗಂಗಾಧರ ಕೇಳಿದ್ದಕ್ಕೆ ರಾಯಣ್ಣನ ತಾಯಿ ಇವನ್ಯಾಕೆ ಬ್ರಹ್ಮಚಾರಿಯಾದಾನ ಗಂಗಾಧರಣ್ಣ? ಇವನನ್ನು ಸಣ್ಣವನಿದ್ದಾಗಲೇ ಮದುವಿ ಮಾಡಿದ್ದಿವಿ, ಲಡಾಯಿ

ಮುಗಿದ ಮೇಲೆ ಸೊಸೆಯೂ ಮನೆಗೆ ಬಂದಾಳ. ಈಗೇನೋ ಜಾತ್ರಿಗಂತ ತವರುಮನೆಗೆ ಹೋಗ್ಯಾಳ ಬೆಳವಡಿಗೆ'[೫] ರಾಯಣ್ಣನ ವಿವಾಹದ ಕುರಿತು ಒಂದೇ ರೀತಿಯ ಮಾಹಿತಿಗಳು ಸಹ ದೊರೆಯುವುದಿಲ್ಲ. ಹೆಂಡತಿಯ ಹೆಸರು ಒಂದೊಂದು ಕೃತಿಯಲ್ಲಿ ಒಂದೊಂದು ರೀತಿಯಲ್ಲಿ ಇರುವುದನ್ನು ನಾವು ಗುರುತಿಸಬಹುದು.

ಬಸವರಾಜ ಕಟ್ಟೀಮನಿ ಅವರ ಸಂಗೊಳ್ಳಿ ರಾಯನಾಯಕ ಕಾದಂಬರಿಯಲ್ಲಿ ಹೆಂಡತಿಯ ಹೆಸರು 'ನಿಂಗಿ' ಎಂದಿದ್ದಾರೆ. ಮೇಲಿನಮನಿ ಅವರ 'ಕ್ರಾಂತಿಯ ಕಿಡಿ' ಕಾದಂಬರಿಯಲ್ಲಿ 'ಮಲ್ಲವ್ವ' ಎಂದಿದೆ. ಹೆಚ್ಚಾಗಿ ರಾಯಣ್ಣನ ಹೆಂಡತಿಯ ಹೆಸರು 'ಮಲ್ಲವ್ವ' ಎಂದಿರುವುದು ಕಂಡುಬರುತ್ತದೆ. ರಾಯಣ್ಣನ ಅಣ್ಣನ ಮಗನಾದ ಹನುಮಂತನನ್ನು ಕೆಲವು ಅಧ್ಯಯನಕಾರರು ರಾಯಣ್ಣನ ಮಗನೆಂದು ಹೇಳಿದ್ದಾರೆ. ಕ್ರಾಂತಿಯ ಕಿಡಿ ಕಾದಂಬರಿಯಲ್ಲಿ ರಾಯಣ್ಣನ ಹೆಂಡತಿ ಮತ್ತು ಮಗ 'ಹನುಮ' ಕುರಿತು ಉಲ್ಲೇಖವಾಗಿರುವುದನ್ನು ನಾವು ಗಮನಿಸಬಹುದು. ರಾಯಣ್ಣನ ವಿವಾಹದ ಕುರಿತು ಯಾವುದೇ ರೀತಿಯ ದಾಖಲೆಗಳು ದೊರೆತಿಲ್ಲ. ಜನಪದ ಸಾಹಿತ್ಯದಲ್ಲಿ ಮಾತ್ರ ವಿವಾಹದ ಕುರಿತು ಮಾಹಿತಿ ಲಭ್ಯವಾಗುತ್ತದೆ. ಆದರೆ ಮಗನ ವಿಚಾರ ಎಲ್ಲಿಯೂ ಕಂಡುಬರುವುದಿಲ್ಲ. 'ಮಲಗಿಕೊಂಡ ಮಗ ತೊಟ್ಟಿಲಲ್ಲಿ ತನ್ನ ಕೈ ಕಾಲುಗಳನ್ನು ಬಡಿಯುತ್ತಾ ಕಿಟಾರನೆ ಕಿರುಚಿದಾಗ ತಟ್ಟನೆ ಎಚ್ಚರಗೊಂಡ ರಾಯಣ್ಣ ಚಟ್ಟನೆ ಮೇಲಕ್ಕೆದ್ದು ತೊಟ್ಟಿಲಿನತ್ತ ಸಾಗುತ್ತಲಿರುವಂತೆಯೇ ಓಡುತ್ತ ಬಂದು ಮಲ್ಲವ್ವೆಯು ಎದುರುಗೊಂಡು ಪತಿರಾಯನನ್ನು ಕಂಡು ನಸು ನಾಚಿದಳಾದರು ಪತಿಯ ಪಾದಗಳಿಗೆ ಎರಗುವುದನ್ನು ಮರೆಯಲಿಲ್ಲ. ಮುಗ್ಧ ಸೌಂದರ್ಯದ ಜತೆಗೆ ಸಾತ್ವಿಕ ಕಳೆಯನ್ನು ಮೈವೆತ್ತುಕೊಂಡು ರಾಯಣ್ಣನ ಮನೆ-ಮನವನ್ನು ತುಂಬಿ ನಿಂತ ಮಲ್ಲವ್ವೆಯು ಕಲ್ಮಷವಿಲ್ಲದ ತೇಜ:ಪುಂಜ ನಕ್ಷತ್ರವಾಗಿ ಬೆಳಗುತ್ತಿದ್ದಳು.'[೬] ರಾಯಣ್ಣ ವಿವಾಹವಾಗಿದ್ದು ಅವನಿಗೆ ಹನುಮ ಎಂಬ ಒಬ್ಬ ಮಗನಿದ್ದನೆಂದು ಕಾದಂಬರಿಕಾರರು ಚಿತ್ರಿಸಿರುವುದು ಕಂಡುಬರುತ್ತದೆ. ಆದರೆ ಈ ಕಾದಂಬರಿಯಲ್ಲಿ ಕಾದಂಬರಿಕಾರರು ಕಲ್ಪನೆಯ ಮೂಲಕ ಮಗನ ಚಿತ್ರಣವನ್ನು ತಂದಿದ್ದಾರೆ ಎಂದು ಹೇಳಬಹುದು. ಏಕೆಂದರೆ ಮಗನ ವಿಚಾರದ ಕುರಿತು ಚರಿತ್ರೆಯಲ್ಲಿ ಎಲ್ಲಿಯೂ ಪ್ರಸ್ತಾಪವಾಗಿಲ್ಲದಿರುವುದು ಕಂಡುಬರುತ್ತದೆ. ಕಾದಂಬರಿಕಾರರು ರಾಯಣ್ಣನ್ನು ವೈಭವೀಕರಿಸುವ ಭರದಲ್ಲಿ ಹಾಗೂ ಇತರೆ ಕಾರಣಗಳಿಂದ ಇಂತಹ ಸನ್ನಿವೇಶವನ್ನು ತಂದಿರಬೇಕೆಂದು ಅನ್ನಿಸುತ್ತದೆ.

ರಾಯಣ್ಣ ಒಂದು ದಿನ ಊರಲ್ಲಿ ಕಾಣದಿದ್ದರೂ ಕುಲಕರ್ಣಿ ಇಲ್ಲಸಲ್ಲದ ನೆಪ ಹೇಳಿಕೊಂಡು ರಾಯಣ್ಣನನ್ನು ಚಾವಡಿಗೆ ಕರೆಸಿಕೊಳ್ಳುತ್ತಿದ್ದ. ರಾಯಣ್ಣ ಮನೆಯಲ್ಲಿರದ ಒಂದು ದಿನ ಕುಲಕರ್ಣಿ ಬೇಕಂತಲೇ ರಾಯಣ್ಣನ ಕರೆಯುವುದಕ್ಕೆ ಫಕೀರನನ್ನು ಕಳುಹಿಸಿದ. ರಾಯಣ್ಣನ ತಾಯಿ ಕೆಂಚವ್ವ ಕರೆಯಲು ಬಂದ ಫಕೀರನಿಗೆ ಈಗ ನಮ್ಮ ಸರದಿ ಇಲ್ಲ ರಾಯಣ್ಣ ಮನೆಯಲ್ಲಿಲ್ಲ, ರಾಯಣ್ಣ ಬಂದ ನಂತರ ಕಳುಹಿಸುತ್ತೇನೆ ಎಂದು ಹೇಳುತ್ತಾಳೆ. ಇಂತಹ ಘಟನೆಯನ್ನು ಕಾದಂಬರಿಕಾರರು

ಶೋಷಣೆಯನ್ನ 'ಇರಲಿ ಇರಲಿ ಎಷ್ಟು ದಿನ ನಡೆದೀತು ಅತ್ಯಾಚಾರ'[೭] ಇಲ್ಲಿ ಶೋಷಣೆಯನ್ನು ಅತ್ಯಾಚಾರ ಎಂದು ಕರೆದಿದ್ದಾರೆ. ಎಲ್ಲದಕ್ಕೂ ಒಂದು ಕೊನೆ ಎನ್ನುವುದು ಇದ್ದೇ ಇರುತ್ತದೆ ಎನ್ನುವುದಕ್ಕೆ ಕುಲಕರ್ಣಿ ಬಾಳಪ್ಪನಿಗೆ ನಿನ್ನ ಈ ಅನ್ಯಾಯಕ್ಕೂ ಒಂದು ಕೊನೆ ಇದೆ ಎಂದು ಹೇಳಿದಂತಿದೆ.

ರಾಯಣ್ಣನ ಹೋರಾಟಕ್ಕೆ ಪ್ರಧಾನ ಕಾರಣಗಳಲ್ಲಿ ಕುಲಕರ್ಣಿ ಬಾಳಪ್ಪ ಮಲಪ್ರಭಾ ನದಿಯೊಳಗೆ ಜಳಕ ಮಾಡಿ ತನ್ನ ಬಟ್ಟೆಗಳನ್ನು ತೊಳೆದುಕೊಡಲು ಹೇಳಿದಾಗ ರಾಯಣ್ಣನಿಗೆ ತಡೆಯಲಾರದಂತಹ ಸಿಟ್ಟು ಬರುತ್ತದೆ. ರಾಯಣ್ಣನ ಅನಿರೀಕ್ಷಿತ ಪ್ರತಿಕ್ರಿಯೆಯಿಂದ ಕಂಗಾಲಾದ ಕುಲಕರ್ಣಿಯು ಕುತಂತ್ರದ ಮೂಲಕ ರಾಯಣ್ಣನನ್ನು ಸಂಪಗಾಂವಿ ಸೆರೆಮನೆಗೆ ಹಾಕಿಸುತ್ತಾನೆ. ನಂತರ ಕೆಂಚವ್ವಳನ್ನು ಚಾವಡಿಗೆ ಕರೆಯಿಸಿ ಕಂದಾಯದ ಹಣವನ್ನು ಕೊಡಬೇಕೆಂದು ಇಲ್ಲದಿದ್ದರೆ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ ಎಂದು ಹೇಳಿ, ವಯಸ್ಸಾದ ಕೆಂಚವ್ವಳ ಬೆನ್ನಿನ ಮೇಲೆ ಕಲ್ಲನ್ನು ಹೇರುತ್ತಾನೆ. ಇಂತಹ ಅನ್ಯಾಯ ದಬ್ಬಾಳಿಕೆ ಶೋಷಣೆಯನ್ನು ಸಹಿಸದೆ ರಾಯಣ್ಣನು ಹೋರಾಟ ಮಾಡುವುದಕ್ಕೆ ಸಿದ್ಧನಾಗುತ್ತಾನೆ. ಇಂತಹ ಘಟನೆಗಳಿಂದ ಕಿತ್ತೂರಿನ ಚರಿತ್ರೆಯಲ್ಲಿ ರಾಯಣ್ಣನು ಹೊಸ ಅಧ್ಯಾಯವನ್ನು ಶುರುಮಾಡುತ್ತಾನೆ.

ಕುತಂತ್ರದ ಮೂಲಕ ರಾಯಣ್ಣನನ್ನು ಸೆರೆಮನೆಗೆ ಹಾಕಿ, ಸಂಗೊಳ್ಳಿ ರಾಯಣ್ಣನ ತಾಯಿ ಕೆಂಚವ್ವನನ್ನು ಚಾವಡಿಗೆ ಕರೆಯಿಸಿ ಮಾಡಿದ ಕೃತ್ಯವನ್ನು ಕೆಂಚವ್ವ ರಾಯಣ್ಣನು ಬಂದ ನಂತರ ಹೇಳಿದಾಗ, ರಾಯಣ್ಣನಲ್ಲಿ ಸಿಟ್ಟು, ಆವೇಶ ತುಂಬಿ ಕುಲಕರ್ಣಿಯನ್ನು ಕೊಲ್ಲುವುದಕ್ಕೆ ಬರುತ್ತಾನೆ. ಆದರೆ ಕುಲಕರ್ಣಿಯ ಹೆಂಡತಿಯು ಪತಿ ಭಿಕ್ಷೆಯನು ಬೇಡಿದಕ್ಕೆ ಬಾಳಪ್ಪನಿಗೆ ಕೊನೆಯ ಎಚ್ಚರಿಕೆಯನ್ನು ಕೊಟ್ಟು ಸಂಗೊಳ್ಳಿಯನ್ನು ತೊರೆಯಲು ನಿರ್ಧರಿಸುತ್ತಾನೆ. ಇಲ್ಲಿಂದ ರಾಯಣ್ಣ ಬ್ರಿಟಿಷರ ವಿರುದ್ಧ ಹೋರಾಡಬೇಕೆಂದು ಸಮಾನ ಮನಸ್ಕರೊಂದಿಗೆ ಸೇರಿ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಬೇಕೆಂದು ಹೋರಾಟದ ಸಿದ್ಧತೆಗಳನ್ನು ಮಾಡಿಕೊಂಡು, ಬ್ರಿಟಿಷರ ಒಂದೊಂದು ಕಚೇರಿಗಳ ಮೇಲೆ ದಾಳಿ ಮಾಡಿ, ಖಜಾನೆಯಲ್ಲಿದ್ದಂತಹ ಹಣವನ್ನು ವಶಪಡಿಸಿಕೊಳ್ಳತ್ತ ಹಾಗೂ ಸರ್ಕಾರಿ ಕಾಗದ ಪತ್ರಗಳನ್ನು ಒಳಗೊಂಡಂತೆ ಕಟ್ಟಡಕ್ಕೆ ಬೆಂಕಿ ಹಚ್ಚುವಂತಹ ಕಾರ್ಯಗಳ ಮೂಲಕ ಬ್ರಿಟಿಷರಿಗೆ ಸಿಂಹಸ್ವಪ್ನನಾಗುತ್ತಾನೆ. ರಾಯಣ್ಣನ ಹೋರಾಟಕ್ಕೆ ಕಿತ್ತೂರಿನ ಜನತೆಯು ಪ್ರತ್ಯಕ್ಷವಾಗಿ-ಪರೋಕ್ಷವಾಗಿ ಎಲ್ಲಾ ರೀತಿಯ ಸಹಾಯ ಸಹಕಾರಗಳನ್ನು ನೀಡುತ್ತಿದ್ದರು.

ಕಿತ್ತೂರು ಸಂಸ್ಥಾನಕ್ಕೂ ಹಾಗೂ ಸಂಗೊಳ್ಳಿ ರಾಯಣ್ಣನ ಮನೆತನಕ್ಕೆ ಅವಿನಾಭಾವ ಸಂಬಂಧವಿತ್ತು. ರಾಯಣ್ಣನ ಅಜ್ಜ ರಾಘಪ್ಪನು ಚಿಣಗಿಕೋವಡ ಯುದ್ಧದಲ್ಲಿ ತೋರಿದ ಸಾಹಸವನ್ನು ಮೆಚ್ಚಿದ ಅಂದಿನ ಕಿತ್ತೂರ ದೊರೆಯು ರಾಘಪ್ಪನಿಗೆ 'ಸಾವಿರ ಒಂಟೆ ಸರದಾರ' ಎಂಬ ಬಿರುದನ್ನು ನೀಡಿದನು. ರಾಘಪ್ಪನು ಹಳ್ಳಿಯಲ್ಲಿನ ಕಾಯಿಲೆಗಳಿಗೆ ಔಷಧಿಯನ್ನು ನೀಡುತ್ತಿದ್ದ ಕಾರಣದಿಂದ ಈ

ಮನೆತನಕ್ಕೆ ರೋಗಣ್ಣವರ ಮನೆತನ ಎಂದು ಹೆಸರು ಬಂದಿತು. ಕಿತ್ತೂರಿನ ದೊರೆಗಳ ಪ್ರೀತಿಯಿತ್ತು. ಒಮ್ಮೆ ನಿಚ್ಚಣಿಕೆ ಎಂಬ ಗ್ರಾಮದಲ್ಲಿ ಮಲ್ಲಸರ್ಜನ ಸುಂದರವಾದ ತೋಟದಲ್ಲಿ ಒಂದು ಹುಲಿ ಸೇರಿಕೊಂಡಿತ್ತು. ಈ ವಿಷಯ ರಾಯಣ್ಣನ ತಂದೆ ಭರಮಪ್ಪನಿಗೆ ತಿಳಿದು ನಿಚ್ಚಣಿಕೆ ಗ್ರಾಮಕ್ಕೆ ಹೋಗಿ ಹುಲಿಯೊಂದಿಗೆ ಹೋರಾಡಿ ಹುಲಿಯನ್ನು ಕೊಂದಿದ್ದ. ಈ ವಿಷಯ ಕಿತ್ತೂರಿನಾದ್ಯಂತ ಹರಡಿತು. ಮಲ್ಲಸರ್ಜ ದೊರೆಯು ಭರಮಪ್ಪನನ್ನು ಕರೆಯಿಸಿ ಸನ್ಮಾನವನ್ನು ಮಾಡುತ್ತಾನೆ. ಹಾಗೂ ೨೪ ಎಕರೆ ಜಮೀನನ್ನು ಉಂಬಳಿಯಾಗಿ ನೀಡುತ್ತಾನೆ. ಈ ಜಮೀನಿಗೆ ರಕ್ತ ಮಾನ್ಯದ ಜಮೀನು ಎಂದು ಕರೆಯುತ್ತಿದ್ದರು. ಅಂದಿನ ಕಾಲದಲ್ಲಿ ವೀರತನವನ್ನು ಪ್ರದರ್ಶಿಸಿದವರಿಗೆ ಹಾಗೂ ಇಂತಹ ಸಾಹಸ ಮಾಡುತ್ತಿದ್ದವರಿಗೆ ಕೊಡುಗೆಯಾಗಿ ನೀಡುತ್ತಿದ್ದರು.

ಇಂತಹ ವೀರ ಮನೆತನದಲ್ಲಿ ಕೆಂಚವ್ವ ಮತ್ತು ಭರಮಪ್ಪರ ಮಗನಾಗಿ ರಾಯಣ್ಣ ಜನಿಸಿದ. ರಾಯಣ್ಣನಿಗೆ ಚೆನ್ನಬಸವ ಮತ್ತು ವಡ್ಡರ ಯಲ್ಲಣ್ಣ ಎಂಬ ಪ್ರಾಣ ಸ್ನೇಹಿತರಿದ್ದರು. ರಾಯಣ್ಣ ಓಡುವುದರಲ್ಲಿ ನೈಪುಣ್ಯತೆಯನ್ನು, ಚೆನ್ನಬಸವ ಕತ್ತಿವರಸೆಯಲ್ಲಿ, ವಡ್ಡರ ಯಲ್ಲಣ್ಣ ಗುರಿ ಹೊಡೆಯುವುದರಲ್ಲಿ ಪ್ರಾವಿಣ್ಯತೆಯನ್ನು ಹೊಂದಿದ್ದರು. ಈ ಮೂವರು ಒಮ್ಮೆ ತಮ್ಮ, ತಮ್ಮ ಸಾಹಸಗಳನ್ನು ತೋರಿಸುವುದಕ್ಕಾಗಿ ಕಿತ್ತೂರಿಗೆ ಬಂದು ದಂಡನಾಯಕನ ಹತ್ತಿರ ತಮ್ಮ ಸಾಹಸವನ್ನು ಪ್ರದರ್ಶನ ಮಾಡಿದರು. ಇವರ ಸಹವಾಸವನ್ನು ಮೆಚ್ಚಿ ದಂಡನಾಯಕ ಕಿತ್ತೂರಿನ ಸೈನ್ಯದಲ್ಲಿ ಸೇರಿಸಿಕೊಂಡನು. ದಂಡನಾಯಕ ರಾಣಿ ಚೆನ್ನಮ್ಮಳಿಗೆ ಇವರ ಸಾಹಸದ ಬಗ್ಗೆ ಹೇಳಿದಾಗ ಚೆನ್ನಮ್ಮಳು ರಾಯಣ್ಣ ಹಾಗೂ ಅವನ ಸ್ನೇಹಿತರನ್ನು ಮಾತನಾಡಿಸುತ್ತಾಳೆ. ರಾಯಣ್ಣನು ಹುಲಿಹೊಡೆದ ಭರಮಪ್ಪನ ಮಗನೆಂದು ತಿಳಿದ ಮೇಲೆ ರಾಯಣ್ಣನನ್ನು ಹೃದಯದಿಂದ ಸ್ವಾಗತಿಸುತ್ತಾಳೆ. ರಾಯಣ್ಣನಿಗೆ ಕಿತ್ತೂರು ಸಂಸ್ಥಾನದಲ್ಲಿ ಸೈನಿಕನಾಗಿ ಸೇರಿಸಿಕೊಳ್ಳುತ್ತಾಳೆ. ಕಿತ್ತೂರಿನಲ್ಲಿ ಬ್ರಿಟಿಷರ ವಿರುದ್ಧ ನಡೆದಂತಹ ಎರಡು ಯದ್ಧಗಳಲ್ಲಿ ಭಾಗವಹಿಸಿ, ಕಿತ್ತೂರು ಪತನದ ನಂತರ ಸೆರೆಮನೆಗೆ ಸೇರಿ ನಂತರ ಬಿಡುಗಡೆಗೊಂಡು ಸಂಗೊಳ್ಳಿಗೆ ಮರಳುತ್ತಾನೆ. ಸಂಗೊಳ್ಳಿಯಲ್ಲಿ ಕುಲಕರ್ಣಿ ಬಾಳಪ್ಪನು ತಾನೆ ಸರ್ವಾಧಿಕಾರಿಯಂಬಂತೆ ದರ್ಪದಿಂದ ಗ್ರಾಮದ ಜನರಲ್ಲಿ ಶೋಷಣೆ, ದೌರ್ಜನ್ಯ, ದುರಾಡಳಿತವನ್ನು ಮಾಡುತ್ತಿರುತ್ತಾನೆ. ಸ್ವಾಭಿಮಾನಿಯಾದ ರಾಯಣ್ಣನಿಗೆ ಕಿತ್ತೂರನ್ನು ಬ್ರಿಟಿಷರಿಂದ ಸ್ವಾತಂತ್ರ್ಯಗೊಳಿಸಬೇಕೆಂದು ಹೋರಾಟಕ್ಕೆ ಮುಂದಾಗುತ್ತಾನೆ.

ಬಸವರಾಜ ಕಟ್ಟೀಮನಿ ಅವರ 'ಸಂಗೊಳ್ಳಿ ರಾಯನಾಯಕ' ಕಾದಂಬರಿಯಲ್ಲಿ ರಾಯಣ್ಣನ ಕುರಿತು ಸಂಪೂರ್ಣ ವಿವರಗಳನ್ನು ತಿಳಿಯಲು ಸಹಾಯಕವಾಗುತ್ತದೆ. ಈ ಐತಿಹಾಸಿಕ ಕಾದಂಬರಿಯು ಕಿತ್ತೂರು ಬ್ರಿಟಿಷರ ವಶವಾದ ನಂತರ ನಡೆಯುವ ಘಟನೆಗಳ ಮೂಲಕ ಆರಂಭವಾಗುತ್ತದೆ. ಕಿತ್ತೂರಿನ ಪತನಕ್ಕೂ ಮೊದಲು ಕಿತ್ತೂರಿನ ಸೈನ್ಯದಲ್ಲಿ ಇರುವಂತಹ ಮೇಲಾಧಿಕಾರಿಗಳ ಜೊತೆಗೆ ರಾಯಣ್ಣನ ಸಂಬಂಧಗಳ ಕುರಿತು ಹೇಳುತ್ತದೆ. ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಲು ಹೋರಾಟದ

ಸಿದ್ಧತೆಯಲ್ಲಿ ಸ್ನೇಹಿತರ ಪಾತ್ರ ತುಂಬಾ ಮಹತ್ವದ್ದಾಗಿದೆ. ಈ ಕಾದಂಬರಿಯಲ್ಲಿ ಗಂಗಾಧರ ಪಾತ್ರ ಮುಖ್ಯವಾಗಿದೆ. ಏಕೆಂದರೆ ರಾಯಣ್ಣನ ಚರಿತ್ರೆ ಅಥವಾ ಕಿತ್ತೂರು ಸಂಸ್ಥಾನದ ಚರಿತ್ರೆಯಲ್ಲಿ ಗಂಗಾಧರನ ಪಾತ್ರ ಗೌಣವಾಗಿದೆ. ಈ ಕಾದಂಬರಿಯಲ್ಲಿ ಗಂಗಾಧರನ ಪಾತ್ರವನ್ನು ಕಾದಂಬರಿಕಾರರು ಕಿತ್ತೂರಿನ ಪತನದ ನಂತರ ಮತ್ತೆ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಲು ಮಾಡಿದ ಹೋರಾಟವನ್ನು ತಿಳಿಸುತ್ತದೆ. "ಆತ ಅತ್ತಿತ್ತ ಹೊರಳಿ ನೋಡುತ್ತ, ಓಣಿಯಲ್ಲಿ ಬೇರಾರ ಸುಳಿವೂ ಇಲ್ಲದಿದ್ದುದನ್ನು ಮನವರಿಕೆ ಮಾಡಿಕೊಳ್ಳುತ್ತ ಹತ್ತಿರ ಬಂದು ಗೊಂಗಡಿಯ ಮುಸುಕು ತೆಗೆದು ಮಾತನಾಡಿದ.

ಬಿದನೂರಿನ ಗಂಗಾಧರ ನೆನಪಿರಬೇಕಲ್ಲ ರಾಯಣ್ಣ? ಬಿದನೂರಿನ ಗಂಗಾಧರ! ಸರದಾರ್ ಗಂಗಾಧರ! ಚೆನ್ನಮ್ಮ ರಾಣಿಯವರ ಕುದುರೆ ಸವಾರರ ಮೇಲಧಿಕಾರಿಗಿದ್ದುಕೊಂಡು ಕೆಂಪು ಮೋರೆಯವರಿಗೆ ಮಣ್ಣು ತಿನ್ನಿಸಿದ ಗಂಡುಗಲಿ ಗಂಗಾಧರ! ಕಿತ್ತೂರಿನಲ್ಲಿದ್ದಷ್ಟು ಕಾಲವೂ ನಮ್ಮಿಬ್ಬರಿಗೂ ಬಹಳ ವಿಶ್ವಾಸ. ನನ್ನ ಕತ್ತಿವರಸೆಯಿಂದ ಗಂಗಾಧರನಿಗೂ ಅತನ ಕುದುರೆ ಸವಾರಿಯೆಂದರೆ ನನಗೂ ತುಂಬಾ ಮೆಚ್ಚಿಗೆ."[೮]

ಕಿತ್ತೂರು ಪತನವಾದ ನಂತರದ ಸನ್ನಿವೇಶವನ್ನು ಮೇಲಿನಮನಿ ವೈ. ಐ. ಅವರ 'ಕ್ರಾಂತಿಯ ಕಿಡಿ' ಕಾದಂಬರಿಯಲ್ಲಿ ರಾಯಣ್ಣನ ಮನಸ್ಸಿನಲ್ಲಿರುವ ತಳಮಳಗಳನ್ನು ಕುರಿತು 'ಕಿತ್ತೂರಿನ ಪವಿತ್ರ ನೆಲವೆಂದು ಅಪವಿತ್ರಗೊಂಡಿತು ಅಲ್ಲಿ. ಫಿರಂಗಿಯವರ ಪಾದಗಳು ಬಿದ್ದವು. ಅಲ್ಲ ಅಲ್ಲ ಕಿತ್ತೂರಿನ ನೆಲದ ಮೇಲೆ ಅವರ ಪಾದಗಳು ಬಿದ್ದಿಲ್ಲ ಅವು ನನ್ನ ಎದೆಯ ಮೇಲೆ ಬಿದ್ದಿವೆ.'[೯] ಅಂದರೆ ಕಿತ್ತೂರು ಸಂಸ್ಥಾನವು ಬ್ರಿಟಿಷರ ವಶವಾದ ಮೇಲೆ ರಾಯಣ್ಣನಿಗೆ ನಾನು ಬದುಕಿದ್ದು ಸತ್ತಂತಿದ್ದೇನೆಂದು ಹೇಳಿಕೊಂಡಿದ್ದಾನೆ. ಕಾದಂಬರಿಕಾರರು ಮುಂದುವರೆದು ಈ ರೀತಿ ಹೇಳುತ್ತಾರೆ. 'ಈ ಪಾದಗಳು ನೆಲೆಯೂರಿ ನಿಂತು ಬಲಗೊಳ್ಳುವ ಮುನ್ನವೇ ಅವನ್ನು ಕಿತ್ತೆಸೆಯಬೇಕು ಹೊತ್ತಿ ಮುರಿಯಬೇಕು'[೧೦] ರಾಯಣ್ಣನು ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಬೇಕೆಂದು ಮನಸ್ಸಿನಲ್ಲಿ ಹೇಳಿಕೊಳ್ಳುತ್ತಾನೆ.

ರಾಯಣ್ಣನ ಮನೆತನವು ವೀರ ಮನೆತನವಾದಂತೆ ನಾಡಪ್ರೇಮ, ದೇಶಪ್ರೇಮ, ಸ್ವಾಭಿಮಾನ ಹಾಗೂ ಪ್ರೀತಿ ವಾತ್ಸಲ್ಯದಿಂದ ಕೂಡಿತ್ತು ಎನ್ನುವುದಕ್ಕೆ 'ರಾಯಣ್ಣಾ ಕಿತ್ತೂರಿನರಸರ ಋಣಭಾರ ನಮ್ಮ ರೋಗಣ್ಣನವರ ಮನೆತನದ ಮೇಲೆ ಇಷ್ಟೇ ಎಂದು ಹೇಳಲಿಕ್ಕಾಗದು. ರಾಘಜ್ಜನ ಶೌರ್ಯ ಒಂದು ಕಡೆಗಾದರೆ ಅರಸರ ಔದಾರ್ಯ ಇನ್ನೊಂದು ಕಡೆಗೆ. ಅದರ ಕುರುಹುಗಳಾಗಿಯೇ ಈ ರಕ್ತಮಾನ್ಯದ ನೆಲವಿಂದು ನಮ್ಮ ವಂಶಕ್ಕೆ ದಕ್ಕಿದೆ.'[೧೧] ಕಿತ್ತೂರು ಸಂಸ್ಥಾನದ ಋಣ ಇನ್ನೂ ಮುಗಿದಿಲ್ಲ ಎಂದು ರಾಯಣ್ಣನಿಗೆ ಸಿದ್ಧಣ್ಣ ಹೇಳುತ್ತಾನೆ. ಅಂದರೆ ಕಿತ್ತೂರನ್ನು ಬ್ರಿಟಿಷರಿಂದ ಮತ್ತೆ ಸ್ವಾತಂತ್ರ್ಯಗೊಳಿಸಲು ಅವಕಾಶವಿದೆ ಎನ್ನುವುದನ್ನು ರಾಯಣ್ಣನ ಅಣ್ಣ ಸಿದ್ಧಣ್ಣನು ರಾಯಣ್ಣನ ಹೋರಾಟಕ್ಕೆ ಪ್ರೋತ್ಸಾಹವನ್ನು ಮಾಡುತ್ತಿರುವುದನ್ನು ಕಾಣಬಹುದು. ಮನೆಯಲ್ಲಿ ಬಡತನವಿದ್ದರೂ ಸಹ ರಾಯಣ್ಣನ ಅಣ್ಣ ಹೋರಾಟದಲ್ಲಿ ತೊಡಗುವಂತೆ ರಾಯಣ್ಣನಿಗೆ ಹೇಳುತ್ತಾನೆ. ಮುಂದುವರೆದು

"ರಾಯಣ್ಣ ಕಿತ್ತೂರು ಕೈಬಿಟ್ಟಿತೆಂದು ಸಂಕಟವೇ ನಿನ್ನ ಶ್ರೀಮುಖದಿಂದ ಇಂಥ ನುಡಿಗಳನ್ನು ಆಡಿಸುತ್ತದೆ. ಆದರೆ ಒಂದು ಮಾತು ಮಾತ್ರ ಸದಾಕಾಲವೂ ನಿನ್ನ ನೆನಪಿನಲ್ಲಿರಲಿ ರೋಗಣ್ಣನವರ ವಂಶದಲ್ಲಿ ಹುಟ್ಟಿದರೆ ಹುಲಿಗಳೇ ಹೊರತಾಗಿ ಇಲಿಗಳಲ್ಲ. ಕಾಲಮಿಂಚಿಲ್ಲ ಗೆದ್ದು ಕಿತ್ತೂರು ತರುವೆ ಇಲ್ಲವಾದಲ್ಲಿ ರಣದಲ್ಲಿ ಬಿದ್ದು ಹೋಗುವೆನೆಂದು ವಚನ ಕೊಟ್ಟಿರುವೆ"[೨೨] ಎಂದು ಹೇಳಿದ್ದರಿಂದ ರಾಯಣ್ಣನು ಅಣ್ಣನ ಮಾತಿನಂತೆಯೇ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಲು ಮನೆಯನ್ನು ತೊರೆಯುವುದರ ಚಿತ್ರಣವನ್ನು ಕಾದಂಬರಿಕಾರರು ಕೊಟ್ಟಿದ್ದಾರೆ.

ಕಿತ್ತೂರು ಸಂಸ್ಥಾನ ಬ್ರಿಟಿಷರ ವಶವಾದ ನಂತರ ಬ್ರಿಟಿಷರ ಅನ್ಯಾಯ, ಶೋಷಣೆ, ದಬ್ಬಾಳಿಕೆಗಳಿಗೆ ಒಳಗಾಗಿ ಕಿತ್ತೂರಿನ ಜನತೆ ಜೀವನವನ್ನು ಸಾಗಿಸುತ್ತಾರೆ. ಆದರೆ ಜನತೆಯಲ್ಲಿ ಬ್ರಿಟಿಷರ ವಿರುದ್ಧ ಧ್ವನಿ ಎತ್ತಲಾರದಂತಹ ಹಾಗೂ ಬ್ರಿಟಿಷರ ವಿರುದ್ಧ ಒಳಗೊಳಗೆ ನೋವನ್ನು ಅನುಭವಿಸುತ್ತಿರುತ್ತಾರೆ. ಕಿತ್ತೂರಿನ ರಾಣಿ ಚೆನ್ನಮ್ಮಳನ್ನು ನೆನದು ದುಃಖಿಸುತ್ತಾರೆ. ಬ್ರಿಟಿಷರ ವಿರುದ್ಧ ಹೋರಾಟಕ್ಕೆ ಸಿದ್ಧರಿರುತ್ತಾರೆ. ಆದರೆ, ಜನತೆಗೆ ಸರಿಯಾದ ನಾಯಕತ್ವ ಇಲ್ಲದಿದ್ದರಿಂದ ಸುಮ್ಮನೆ ಇರುತ್ತಾರೆ. ಹೋರಾಟಕ್ಕೆ ಸಿದ್ಧತೆಯನ್ನು ಮಾಡಿಕೊಳ್ಳುವಂತಹ ಸಂದರ್ಭದಲ್ಲಿ ರಾಯಣ್ಣ ಕಿತ್ತೂರಿನಾದ್ಯಂತ ಸಂಚರಿಸಿದನು. ಜನರಲ್ಲಿ ಬ್ರಿಟಿಷರ ಅನ್ಯಾಯ, ದಬ್ಬಾಳಿಕೆ, ಶೋಷಣೆಯ ಕುರಿತು ಮತ್ತು ಕಿತ್ತೂರಿನ ಗತವೈಭವದ ಕುರಿತು ಜನರಲ್ಲಿ ಜಾಗೃತಿಯನ್ನು ಮೂಡಿಸುತ್ತಾನೆ. "ಕಿತ್ತೂರು ನಾಡಿನಲ್ಲಿ ದೇಶಕ್ಕಾಗಿ, ನಾಡಿಗಾಗಿ ನಿಷ್ಠೆಯಿಂದ ದುಡಿಯುವ ಧೀಮಂತ ಧೀರಪುರುಷರಿಗೇನು ಕೊರತೆಯಿಲ್ಲ. ಎಲ್ಲಕಡೆ ದೇಶದ್ರೋಹೀಗಳೇ ಇರುವಂತಿಲ್ಲ ದೇಶ ಪ್ರೇಮಿಗಳು ಇದ್ದಾರೆ. ಸ್ವಾಮಿನಿಷ್ಠೆ ಸ್ವರಾಜ್ಯ ನಿಷ್ಠೆಗಾಗಿ ಹೋರಾಡಿ ತಮ್ಮ ತನು, ಮನ, ಧನಗಳನ್ನೆಲ್ಲ ಧಾರೆ ಎರೆಯಲು ತುದಿಗಾಲಿನ ಮೇಲೆ ನಿಂತುಕೊಂಡಿರುವ ಅನೇಕ ವೀರರು ಇದ್ದಾರೆ. ಅಂಥವರನ್ನೆಲ್ಲ ಕಲೆಹಾಕಿ ಎದುರಾಳಿಗಳ ಬಲಕ್ಕೆ ಸಮನಾದ ಬಲವನ್ನು ಗಳಿಸಿ ಕ್ರಾಂತಿಯ ಕಹಳೆಯನ್ನು ಮೊಳಗಿಸಿದರೆ...'[೨೩] ರಾಯಣ್ಣನ ಹೋರಾಟದ ಬೆಂಬಲಕ್ಕೆ ಕಿತ್ತೂರಿನಾದ್ಯಂತ ಬೆಂಬಲಗಳು ದೊರಕುವುದು ಕಂಡುಬರುತ್ತದೆ. ಕಿತ್ತೂರಿನ ಜನತೆ ರಾಯಣ್ಣನ ಹೋರಾಟಕ್ಕೆ ಬೆಂಬಲವನ್ನು ನೀಡಿರುವುದು ಕಂಡುಬರುತ್ತದೆ.

ರಾಯಣ್ಣನ ಹೋರಾಟದ ಸಿದ್ಧತೆಯನ್ನು ಬೈಲಹೊಂಗಲದ ಸೆರೆಮನೆಯಲ್ಲಿದ್ದ ರಾಣಿ ಚೆನ್ನಮ್ಮನಿಗೆ ಮಾಹಿತಿ ತಿಳಿದಾಗ, ಮತ್ತೆ ಕಿತ್ತೂರು ಸಂಸ್ಥಾನದ ಸ್ವಾತಂತ್ರ್ಯದ ಕನಸು ಕಾಣುತ್ತಾಳೆ. ರಾಣಿಯು ಜೀವನವೇ ಶೂನ್ಯವೆಂದುಕೊಂಡಂತಹ ಸಂದರ್ಭದಲ್ಲಿ ರಾಯಣ್ಣನಂತಹ ದೇಶಪ್ರೇಮಿಯಿಂದ ಕಿತ್ತೂರು ಮತ್ತೆ ಸ್ವಾತಂತ್ರ್ಯವಾಗುತ್ತಿರುವ ಮಾಹಿತಿಯಿಂದ ರಾಣಿಯು ಚೇತರಿಸಿಕೊಳ್ಳುತ್ತಾಳೆ. ಒಮ್ಮೆ ರಾಯಣ್ಣ ಸೆರೆಮನೆಯಲ್ಲಿರುವಂತಹ ರಾಣಿಯನ್ನು ಜಂಗಮರ ವೇಷ ಧರಿಸಿಕೊಂಡು ರಾಣಿಯನ್ನು ಭೇಟಿಯಾಗುತ್ತಾನೆ. ರಾಣಿಗೆ ತಾನು ಕಿತ್ತೂರು ಸಂಸ್ಥಾನವನ್ನು ಸ್ವಾತಂತ್ರ್ಯಗೊಳಿಸಲು ನಡೆಸಿರುವಂತಹ ಹೋರಾಟದ ಸಿದ್ಧತೆಗಳನ್ನು ಕುರಿತು ಹೇಳಿ, ಆಶೀರ್ವಾದ ಪಡೆಯುವುದಕ್ಕೆ ಬಂದಿರುವೆನೆಂದು ಹೇಳಿದಾಗ ರಾಣಿಯ ಸಂತೋಷಕ್ಕೆ ಕೊನೆಯೆಂಬುದೇ ಇರಲಿಲ್ಲ. ಚೆನ್ನಮ್ಮಳು ರಾಯಣ್ಣನನ್ನು ಆಶೀರ್ವದಿಸಿ ತನ್ನಲ್ಲಿದ್ದಂತಹ ಆಭರಣಗಳನ್ನು ರಾಯಣ್ಣನಿಗೆ ನೀಡುತ್ತಾಳೆ.

"ಏನು ನೀನು ನನ್ನ ನೆಚ್ಚಿನ ರಾಯಣ್ಣನೆ? ಇದೆಂಥ ಸಂತೋಷದಾಯಕ ಆಶ್ಚರ್ಯ... ತಾಯಿ ದಯಮಾಡಿ ಸಂಸ್ಥಾನದ ಬಗ್ಗೆ ಚಿಂತೆ ಮಾಡಬೇಡಿರಿ. ಮೊದಲು ನಿಮ್ಮ ಆರೋಗ್ಯದ ಬಗ್ಗೆ ಕಾಳಜಿ ವಹಿಸಿರಿ. ಈಗ ಸಂಸ್ಥಾನವನ್ನು ಮರಳಿ ಪಡೆಯುವ ಯೋಗ ಬರುತ್ತದೆ. ನಾನು ವೀರಪ್ಪ ನಾಯಕನ ಮಾರ್ಗದರ್ಶನದಲ್ಲಿ ಖಾಸಗಿ ಸೈನ್ಯವನ್ನು ಕಟ್ಟುತ್ತಿದ್ದೇನೆ. ಬಿಚ್ಚುಗತ್ತಿ ಚೆನ್ನಬಸವಣ್ಣ, ಗಂಗಾಧರ, ಜಿಡ್ಡಿಮನಿ, ವಡ್ಡರ ಯಲ್ಲಣ್ಣ, ಭೀಮ್ಯಾ ಮತ್ತಿತರ ಮುಖಂಡರು ತಮ್ಮ ಸೈನ್ಯಗಳನ್ನು ತನ್ನ ಸೈನ್ಯಕ್ಕೆ ಸೇರಿಕೊಂಡಿದ್ದಾರೆ. ಮಾತನಾಡಲು ಸಹಿತ ಸಾಧ್ಯವಾಗಲಿಲ್ಲ. ಆಮೇಲೆ ಸಾವರಿಸಿಕೊಂಡು ತಮ್ಮ ಅರಿವೆಯ ಗಂಟನ್ನು ಬಿಚ್ಚಿ ಅದರೊಳಗಿನ ರತ್ನ ಖಚಿತ ವಡ್ಯಾಣ, ಪಾಟ್ಲಿ, ಬಲ್ಲಾವರ, ಮುತ್ತಿನಸರ ನಾಗಮುರಿಗೆ, ಟೇಲಿ ಮುಂತಾದ ಇನ್ನು ಬಂಗಾರದ ಆಭರಣಗಳನ್ನು ಹೊರಗೆ ತೆಗೆದು ಅವುಗಳನ್ನು ರಾಯಣ್ಣನ ಜಂಗಮ ಜೋಳಿಗೆಯಲ್ಲಿ ಹಾಕಿ ಆಶೀರ್ವದಿಸಿದರು.'[೧೪] ರಾಯಣ್ಣನ ಹೋರಾಟದ ಖರ್ಚಿಗಾಗಿ ರಾಣಿ ತನ್ನಲ್ಲಿರುವಂತಹ ಆಭರಣಗಳನ್ನು ಕೊಟ್ಟು ಆಶೀರ್ವದಿಸಿ ಹೋರಾಟಕ್ಕೆ ಪ್ರೋತ್ಸಾಹವನ್ನು ನೀಡುತ್ತಾಳೆ. ರಾಯಣ್ಣನ ಹೋರಾಟದ ಸಿದ್ಧತೆ ಇಲ್ಲಿಂದ ಚುರುಕಿನಿಂದ ಸಾಗುತ್ತದೆ. ರಾಯಣ್ಣನ ಕೊನೆ ಉಸಿರು ಇರುವ ತನಕ ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ಹೋರಾಟವನ್ನು ಮಾಡುತ್ತಾನೆ. ಆದರೆ ನಮ್ಮವರ ಕುತಂತ್ರದಿಂದ ರಾಯಣ್ಣನ ಕೊನೆಯಾಗುತ್ತದೆ.

ರಾಯಣ್ಣನು ಕಿತ್ತೂರು ಸಂಸ್ಥಾನದಲ್ಲಿ ಸೇರಿಕೊಂಡಗಿನಿಂದಲೂ ಚೆನ್ನಮ್ಮನ ಪ್ರೀತಿಗೆ ಪಾತ್ರರಾಗಿರುತ್ತಾನೆ. ಕಿತ್ತೂರು ಪತನದ ನಂತರ ಮತ್ತೆ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಲು ಹೋರಾಟ ಮಾಡಿದಂತಹ ವೀರನಾಗಿದ್ದಾನೆ. ಕಿತ್ತೂರಿನಲ್ಲಿ ನಡೆದ ಎರಡು ಯುದ್ಧಗಳಲ್ಲಿ ಭಾಗವಹಿಸಿ, ಕಿತ್ತೂರು ಪತನದ ನಂತರ ಸೆರೆಮನೆಗೆ ಸೇರಿ ನಂತರ ಬಿಡುಗಡೆಗೊಂಡು, ಸಂಗೊಳ್ಳಿಯಲ್ಲಿ ಮನೆತನದ ವೃತ್ತಿಯಾದ ತಳವಾರಿಕೆಯನ್ನು ಮುಂದುವರೆಸುತ್ತಾನೆ. ಇದರ ಜೊತೆಜೊತೆಗೆ ಬ್ರಿಟಿಷರಿಂದ ಕಿತ್ತೂರನ್ನು ಮತ್ತೆ ಸ್ವತಂತ್ರಗೊಳಿಸಿ, ದತ್ತು ಪುತ್ರನನ್ನಾಗಿ ತೆಗೆದುಕೊಂಡಿದ್ದ ಬಾಳಪ್ಪ ಗೌಡರ ಮಗ ಶಿವಲಿಂಗಪ್ಪ [ಸವಾಯಿ ಮಲ್ಲಸರ್ಜಾ]ನನ್ನು ಮುಂದಿಟ್ಟುಕೊಂಡು ಬ್ರಿಟಿಷರ ವಿರುದ್ಧ ಹೋರಾಟವನ್ನು ಮಾಡುತ್ತಾನೆ. ಆದರೆ ನಮ್ಮವರೇ ನಮಗೆ ಕಂಟಕ ಎಂಬಂತೆ ಮತ್ತೆ ಮೋಸದಿಂದ ರಾಯಣ್ಣನನ್ನು ಹಿಡಿದು ವಿಚಾರಣೆಯ ನಾಟಕವಾಡಿ ಕೊನೆಗೆ ಗಲ್ಲಿಗೇರಿಸುತ್ತಾರೆ.

ಕಿತ್ತೂರು ಪತನವಾದ ನಂತರ, ಸೆರೆಮನೆ ಸೇರಿ ಬಿಡುಗಡೆಯಾದಗಿನಿಂದಲೂ ಕೆಲವು ದಿನಗಳ ನಂತರ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಲು ಎಲ್ಲಾ ರೀತಿಯ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾನೆ. ಸ್ನೇಹಿತರಾದ ಬಿಚ್ಚುಗತ್ತಿ ಚೆನ್ನಬಸವ ಹಾಗೂ ವಡ್ಡರ ಯಲ್ಲಣ್ಣರ ಮಾರ್ಗದರ್ಶನದಂತೆ ತಳವಾರಿಕೆಯನ್ನು ಮಾಡುವುದಕ್ಕೆ ಇಷ್ಟವಿಲ್ಲದ್ದಿದ್ದರೂ, ಒತ್ತಾಯಪೂರ್ವಕವಾಗಿ ಒಪ್ಪಿಕೊಂಡು ಮಾಡುತ್ತಾನೆ. ಜೊತೆಗೆ ಶಸ್ತ್ರಾಸ್ತ್ರಗಳನ್ನು ಉದಗಟ್ಟಿ ಬಸಣ್ಣನ ಮನೆಯಲ್ಲಿ ಸಂಗ್ರಹಿಸುತ್ತಾನೆ. ಹಾಗೂ ಸೆರೆಮನೆಯಲ್ಲಿ ಇದ್ದಂತಹ ಕಿತ್ತೂರಿನ ರಾಣಿ ಚೆನ್ನಮ್ಮಳನ್ನು ಜಂಗಮರ ವೇಶಧರಿಸಿಕೊಂಡು

ಹೋರಾಟದ ಸಿದ್ಧತೆಗಳ ಕುರಿತು ಹೇಳಿ ಆಶೀರ್ವಾದವನ್ನು ಪಡೆಯುತ್ತಾನೆ. ಕಿತ್ತೂರಿನ ಸ್ವಾತಂತ್ರ ಇತಿಹಾಸದಲ್ಲಿ ರಾಣಿ ಚೆನ್ನಮ್ಮನವರ ನಂತರ ರಾಯಣ್ಣನು ಮತ್ತೆ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಬೇಕೆಂದು ಹೋರಾಟವನ್ನು ಮಾಡುತ್ತಾನೆ.

ರಾಯಣ್ಣನ ಹೋರಾಟದಲ್ಲಿ ಬಿಚ್ಚುಗತ್ತಿ ಚನ್ನಬಸವ, ಸಿದ್ದಿಕಿ, ಬಂಡಾರಿ ಬಾಪು, ದೇವಲಗಟ್ಟಿ ಗಂಟ್ಯಾ, ರಣೋಜಿ, ಭೀಮನಾಯಕ, ಸುಲೇಮಾನ್, ಗಜವೀರ ಮುಂತಾದ ವೀರರನ್ನು ಜೊತೆಮಾಡಿಕೊಂಡು, ಬ್ರಿಟಿಷರ ವಿರುದ್ಧ ಹೋರಾಟ ಮಾಡಲು ಸಾಕಷ್ಟು ಸೈನ್ಯ ಹಾಗೂ ಸೈನ್ಯದ ಖರ್ಚಿನ ಕುರಿತು ಸ್ನೇಹಿತರೊಂದಿಗೆ ಚರ್ಚಿಸುತ್ತಾ, ಸೈನ್ಯವನ್ನು ಕೂಡಿಸಲು ಹಳ್ಳಿ ಹಳ್ಳಿಗಳಲ್ಲಿ ಬ್ರಿಟಿಷರ ಅನ್ಯಾಯ, ಶೋಷಣೆಯ ಕುರಿತು ಹಾಗೂ ಕಿತ್ತೂರು ಸಂಸ್ಥಾನದ ಕುರಿತು, ರಾಣಿ ಚೆನ್ನಮ್ಮಳ ಕುರಿತು ಜನರಲ್ಲಿ ನಾಡಪ್ರೇಮ ಬೆಳೆಸುವುದರ ಜೊತೆಗೆ ಜನರನ್ನು ಹೋರಾಟಕ್ಕೆ ಬರುವಂತೆ ಮಾಡುತ್ತಾನೆ. ಶಿವನಗುತ್ತಿ ಅರಸನನ್ನು ಭೇಟಿಯಾಗಿ ಹಾಗೂ ಸುರಪುರದ ಅರಸರ ಸಹಾಯವನ್ನು ತೆಗೆದುಕೊಂಡು ಹೋರಾಟಕ್ಕೆ ಸಿದ್ಧತೆಯನ್ನು ಮಾಡಿಕೊಳ್ಳುತ್ತಾರೆ.

ಸಂಗೊಳ್ಳಿಯ ಕುಲಕರ್ಣಿ ಬಾಳಪ್ಪನಿಂದ ನಡೆಯುವ ಘಟನೆಗಳಿಂದ ರಾಯಣ್ಣನಲ್ಲಿ ಸಹನೆ ಮೀರಿ ಹೋರಾಟಕ್ಕೆ ದಾರಿ ಮಾಡಿಕೊಟ್ಟಿತು ಎಂದು ಹೇಳಬಹುದು. ಜಮೀನಿನ ಅಳತೆಯ ನಂತರ ಮಲಪ್ರಭಾ ನದಿಯ ತೀರದಲ್ಲಿ ನಡೆದ ಘಟನೆಯಿಂದ ಬಾಳಪ್ಪನಿಗೆ ಅವಮಾನವಾದಂತಾಗಿ ರಾಯಣ್ಣನ ಕರೆದು ತುರ್ತಾಗಿ ಈ ಪತ್ರವನ್ನು ಸಂಪಗಾವಿಗೆ ಕೊಡುವುದಕ್ಕೆ ಕಳುಹಿಸಿದ. ರಾಯಣ್ಣ ಸಂಪಗಾವಿಗೆ ಹೋದ ನಂತರ ರಾಯಣ್ಣನ ತಾಯಿಯನ್ನು ಚಾವಡಿಗೆ ಕರೆಯಿಸಿ ಕಂದಾಯ ಕೊಡಬೇಕೆಂದು ಕೇಳಿದ. ರಾಯಣ್ಣನ ತಾಯಿ ನನ್ನ ಹತ್ತಿರ ಇಲ್ಲ, ರಾಯಣ್ಣ ಬಂದ ನಂತರ ಕೊಡುತ್ತೇನೆ ಎಂದು ಹೇಳಿದಾಗ, ಕುಲಕರ್ಣಿ ಕಂದಾಯವನ್ನು ಈಗಲೇ ಕೊಡಬೇಕೆಂದು ವಯಸ್ಸಾದ ಕೆಂಚ್ಚವ್ವನಿಗೆ ಹಿಂಸೆಯನ್ನು ಮಾಡಿದನು. ಮಾಡಿರದ ತಪ್ಪಿಗೆ ರಾಯಣ್ಣ ಸೆರಮನೆಯ ಶಿಕ್ಷೆಯನ್ನು ಅನುಭವಿಸಿದನು.

ಸಂಪಗಾವಿಯಿಂದ ಸಂಗೊಳ್ಳಿಗೆ ಬಂದಾಗ ಕೆಂಚ್ಚವ್ವಳು ರಾಯಣ್ಣನಿಗೆ 'ನೀ ಸಂಪಂಗಾವಿಗೆ ಹೋದ ಕೂಡಲೇ ಬಾಳ್ಯಾ ನನ್ನ ಕರೆಸಿ ಪಾಳೇದ ರೂಪಾಯಿ ತಂದುಕೊಡಂತ ಕೇಳಿದ ನನ್ನ ಹತ್ತಿರ ಎಲ್ಲಿದಾವ ರೂಪಾಯಿ? ರಾಯ ಬರಲಿ ಕೊಡ್ತಾನಂತನಾ ಹೇಳಿದೀನಿ. ರಾಯ ಇನ್ನೆಲ್ಲಿ ಬರ್ತನ? ಅವನ್ನ ಹಾಕೀವಿ ಸೆರೆಮನಿಯಾಗ. ರೂಪಾಯಿ ತಂದುಕೊಡು ಇಲ್ಲದಿದ್ದರೆ ನಿನ್ನ ಬಿಡುವುದಿಲ್ಲಂತ ಹೇಳಿದ. ನಾಳೆ ನಾಡಿದ್ದು ತಂದು ಕೊಡುತ್ತೇನೆ ಅಂದರು ಬಿಡಲಿಲ್ಲ, ಚಾವಡಿಯ ಎದುರು ನಿಲ್ಲಿಸಿ ನನ್ನ ಬೆನ್ನಮ್ಯಾಲ ಕಲ್ಲು ಹೇರಿಸಿದ...'[೧೫] ರಾಯಣ್ಣ ತಾಯಿಗಾದ ಅವಮಾನ ಹಾಗೂ ತಾನು ತಪ್ಪು ಮಾಡದಿದ್ದರೂ ಸಹ ಕುಲಕರ್ಣಿಯ ಕುತಂತ್ರದಿಂದ ಸೆರೆಮನೆ ಸೇರಿದ್ದರಿಂದ ರಾಯಣ್ಣನ ಸಿಟ್ಟು ಜ್ವಾಲಮುಖಿಯಂತೆ ಬುಗಿಲೆದ್ದಿತು. ಇಲ್ಲಿಂದಲೇ ಬ್ರಿಟಿಷರ ವಿರುದ್ಧ ರಾಯಣ್ಣನ ಹೋರಾಟವು ಪ್ರಾರಂಭವಾಯಿತೆಂದು ಹೇಳಬಹುದು.

ರಾಯಣ್ಣನು ತನ್ನ ಹೋರಾಟಕ್ಕೆ ಶಿವನಗುತ್ತಿಯ ಅರಸರ ಸಹಾಯ ಕೇಳುವುದಕ್ಕೆ ಹೋಗುತ್ತಾನೆ. ಶಿವನಗುತ್ತಿ ಅರಸ ವೀರಮ್ಮ ರಾಣಿಯರ ತಂದೆಯಾಗಿದ್ದರು. ವೀರಮ್ಮ ರಾಣಿಯ ತಂದೆ ಮಗಳ ಮೇಲಿನ ಪ್ರೀತಿಯಿಂದ ಸಹಾಯ ಮಾಡುತ್ತಾರೆ ಎಂಬ ನಿರೀಕ್ಷೆಯಿಂದ ಶಿವನಗುತ್ತಿಗೆ ಹೋಗಿದ್ದ. ಆದರೆ ಶಿವನಗುತ್ತಿಯು ಹತ್ತಾರು ಗ್ರಾಮಗಳಿಗೆ ಮಾತ್ರ ಸೀಮಿತವಾಗಿದ್ದಂತಹ ಪ್ರದೇಶಗಳಿಗೆ ಅರಸನಾಗಿದ್ದ ಹಾಗೂ ಕೆಲವೇ ಕೆಲವು ಸೈನಿಕರನ್ನು ಮಾತ್ರ ಹೊಂದಿದ್ದನು. ಶಿವನಗುತ್ತಿಯು ಬ್ರಿಟಿಷರ ಅಧೀನದಲ್ಲಿದ್ದಂತಹ ಪ್ರದೇಶವಾಗಿತ್ತು. ಶಿವನಗುತ್ತಿಯ ಅರಸ ಚಂದ್ರಸೇನರಿಗೆ ಸೈನ್ಯ ಸಹಾಯವಾಗಲಿ, ಧನ ಸಹಾಯವಾಗಲಿ ಸಹಾಯ ಮಾಡುವಷ್ಟು ಸಮರ್ಥನಿರಲಿಲ್ಲ. ಅದರೂ ಸಹ ರಾಯಣ್ಣನ ಹೋರಾಟಕ್ಕೆ ತಮ್ಮ ಬೆಂಬಲವನ್ನು ವ್ಯಕ್ತಪಡಿಸುತ್ತಾರೆ. ರಾಯಣ್ಣ ಶಿವನಗುತ್ತಿಗೆ ಹೋಗಿ ತಮ್ಮ ಹೋರಾಟದ ಸಿದ್ಧತೆಯ ಹಾಗೂ ಕಿತ್ತೂರು ಸಂಸ್ಥಾನವನ್ನು ಮತ್ತೆ ಸ್ವಾತಂತ್ರ್ಯಗೊಳಿಸುವ ಉದ್ದೇಶವನ್ನು ಹೇಳಿದಾಗ, ಶಿವನಗುತ್ತಿಯ ಅರಸನಿಗೆ ಸಂತೋಷವಾಯಿತು. ಆದರೆ ಅವನಿಂದ ಯಾವುದೇ ರೀತಿಯ ಸಹಾಯ ದೊರೆಯುತ್ತಿರಲಿಲ್ಲ ಅವರಿಂದ ಅದು ಸಾಧ್ಯವೂ ಇರಲಿಲ್ಲ. ಆ ಪ್ರದೇಶದಲ್ಲಿ ಕನಕೂರ ಒಕ್ಕಳ ಬರಮ ಎನ್ನುವವನು ಗುಂಪು ಕಟ್ಟಿಕೊಂಡು, ಆಗಾಗ ದರೋಡೆ ಮಾಡುತ್ತಿರುವ ವಿಷಯವನ್ನು ಹೇಳಿದಾಗ, ರಾಯಣ್ಣ ಪುಂಡನಿಗೆ ಸರಿಯಾದ ಶಿಕ್ಷೆಯನ್ನು ನೀಡುತ್ತಾನೆ. ಕನಕೂರ ಭರಮನನ್ನು ಹುಡುಕಿಕೊಂಡು ಹೋಗುತ್ತಾನೆ. ರಾಯಣ್ಣ ಚೋಳ ಗುಡ್ಡದ ಬಳಿ ಬಂದು ಬರಮನನ್ನು ಕರೆದು ಈ ರೀತಿಯಲ್ಲಿ ಹೇಳುತ್ತಾನೆ. ಊಟ ಮುಗಿಸು ನಿನ್ನ ಕಥೆಯನ್ನು ಮುಗಿಸುತ್ತೇನೆ. ಎಂದು ಹೇಳಿದಾಗ ಭರಮ ಸಿದ್ಧತೆಯೊಂದಿಗೆ ಬಂದಾಗ ನಮ್ಮಿಬ್ಬರಿಗೆ ಮಾತ್ರ ಯುದ್ಧ ಬೇರೆಯವರಿಗೆ ಬೇಡ ಎಂದು ಹೇಳುವ ಸಂದರ್ಭ ಈ ಕೆಳಗಿನಂತಿದೆ. 'ನಿನ್ನ ದಂಡು ಒಂದು ಕಡೆ ನಿಲ್ಲಲಿ ನನ್ನ ದಂಡು ಇನ್ನೊಂದು ಕಡೆ ನಿಲ್ಲುತ್ತದೆ. ಅವರವರು ಹೊಡೆದಾಡಿ ಸುಮ್ಮನೆ ರಕ್ತಪಾತವಾಗುವುದು ಬೇಡ. ನಾವಿಬ್ಬರೇ ಕಾದಾಡೋಣ. ನಮ್ಮಿಬ್ಬರ ಲಡಾಯಿಂದಲೇ ಸೋಲು-ಗೆಲುವು ಗೊತ್ತಾಗುತ್ತದೆ. ಕಿತ್ತೂರ ಇನಾಮು ಸೋತರೆ ಇವನ ಸೈನ್ಯವೆಲ್ಲ ನನ್ನದಾಗುತ್ತದೆ. ನಾನೇನು ಇವನಿಗೆ ಸೋಲಲಿಕ್ಕಿಲ್ಲ. ಒಂದು ವೇಳೆ ಸೋತರೆ ನೀವೆಲ್ಲ ಇವನನ್ನು ನಾಯಕನಂತ ಒಪ್ಪಿ ಇವನ ಅಪ್ಪಣೆ ಪಾಲಿಸಬೇಕು ಗೊತ್ತಾಯಿತೋ'?[೧೬] ರಾಯಣ್ಣನಿಗೆ ಸೈನ್ಯದ ಅವಶ್ಯಕತೆ ಇದ್ದಿದ್ದರಿಂದ ಇಂತಹ ಮಾತುಗಳಿಂದ ರಾಯಣ್ಣನು ಪುಂಡ ಭರಮನನ್ನು ಕೊಂದನು. ಪುಂಡ ಭರಮನ ದಂಡಿನ ಜೊತೆಗೆ ಶಿವನಗುತ್ತಿಯ ಚಂದ್ರಸೇನ ರಾಜರು ರಾಯಣ್ಣನಿಗೆ 'ಚಂದ್ರಸೇನ ರಾಜರ ಹತ್ತಿರ ಇದ್ದ ನೂರು ಜನ ಅರಬ್ಬಿ ದಂಡಾಳುಗಳನ್ನು ಆರಿಸಿಕೊಂಡೆ ಅವರೆಲ್ಲರಿಗೂ ಕತ್ತಿ, ಕಠಾರಿ, ರಾಣಿ ಶಸ್ತ್ರಾಸ್ತ್ರ ಖರ್ಚಿಗಾಗಿ ಸಾಕಷ್ಟು ಹಣವನ್ನು ಕೊಟ್ಟು ದೊರೆಗಳು ನನಗೆ ಆಶೀರ್ವಾದ ಮಾಡಿದರು.'[೧೭] ರಾಯಣ್ಣನ ನಿರೀಕ್ಷೆಯಂತೆಯೇ ಸಾಕಷ್ಟು ಸಹಾಯ ಹಾಗೂ ಸೈನ್ಯ ದೊರೆಯಿತು. ಶಿವನಗುತ್ತಿಯಿಂದ ರಾಯಣ್ಣ ಬಾಳಗುಂಕ್ಕೆ ಬಂದನು. ಕಿತ್ತೂರಿನ ಸುತ್ತ ಮುತ್ತಲಿನವರೆಲ್ಲರೂ ಸೈನ್ಯಕ್ಕೆ ಬಂದು ಸೇರಿಕೊಳ್ಳುತ್ತಿದ್ದರು. ಹೀಗೆ ರಾಯಣ್ಣನ ಸೈನ್ಯ ದಿನದಿಂದ ದಿನಕ್ಕೆ ಬೆಳೆಯಿತು. ಜಂಗಮ ವೇಷ ಧರಿಸಿ ರಾಣಿಯ ಆಶೀರ್ವಾದವನ್ನು ಪಡೆದುಕೊಂಡು ಹೋರಾಟಕ್ಕೆ ಮುಂದಾಗುತ್ತಾನೆ.

ರಾಯಣ್ಣನ ಹೋರಾಟವು ಬೀಡಿ ಕಚೇರಿಯ ಮೇಲೆ ದಾಳಿ ಮಾಡುವುದರ ಮೂಲಕ ಆರಂಭವಾಗುತ್ತದೆ. ಬೀಡಿ ಕಛೇರಿಯಲ್ಲಿ ಸಾಕಷ್ಟು ಹಣವಿದೆ ಎಂಬ ಮಾಹಿತಿಯನ್ನು ಪಡೆದ ರಾಯಣ್ಣ ಹಾಗೂ ತಂಡವು ಕಚೇರಿಯ ಮೇಲೆ ದಾಳಿಯನ್ನು ಮಾಡುತ್ತಾರೆ. ೧೮೩೦ ಜನವರಿ ೫ರಂದು ಕಚೇರಿಗೆ ಮುತ್ತಿಗೆ ಹಾಕಿದನು. ಆದರೆ ರಾಯಣ್ಣ ದಾಳಿ ಮಾಡುವುದಕ್ಕಿಂತ ಒಂದು ದಿನ ಮುಂಚಿತವಾಗಿ ಕಚೇರಿಯಲ್ಲಿ ಇದ್ದಂತಹ ೨೮೦೦೦ ರೂಪಾಯಿಗಳನ್ನು ಮುಂಬೈ ಸರ್ಕಾರಕ್ಕೆ ಕಳುಹಿಸಲಾಗಿತ್ತೆಂದು ಬ್ರಿಟಿಷ್ ಅಧಿಕಾರಿಯಾದ ನಿಸ್ಬತ್‌ರವರು ಮುಂಬೈ ಸರ್ಕಾರಕ್ಕೆ ಬರೆದ ಪತ್ರದಲ್ಲಿ ಹೇಳಿದ್ದಾರೆ. ರಾಯಣ್ಣನ ತಂಡ ಬೀಡಿ ಕಚೇರಿಯ ಮೇಲೆ ದಾಳಿ ಮಾಡಿ ಕಚೇರಿಯಲ್ಲಿದಂತಹ ಕಾಗದಪತ್ರಗಳನ್ನು ಸುಟ್ಟುಹಾಕಿದರು. ೧೯೦೦ ರೂಪಾಯಿಗಳನ್ನು ವಶಪಡಿಸಿಕೊಂಡು ಬೀಡಿಯಿಂದ ನಂದಗಡಕ್ಕೆ ಹೋದರು. ನಂದಗಡದಲ್ಲಿ ಇರುವ ಕಿಲ್ಲೆದಾರನನ್ನು ಬೆದರಿಸಿ ಕಂದಾಯದ ಹಣವನ್ನು ನಮಗೆ ಕೊಡಬೇಕೆಂದು ಹೇಳಿದರು. ನಂದಗಡದ ಜನರಿಂದ ಒಂದು ಸಾವಿರ ರೂಪಾಯಿಗಳನ್ನು ಪಡೆಯಲಾಗಿದೆ ಎಂದು ಸ್ವತ: ರಾಯಣ್ಣನು ವಿಚಾರಣೆಯ ವೇಳೆ ಒಪ್ಪಿಕೊಂಡಿದ್ದಾನೆ.

ರಾಯಣ್ಣನು ಮಾಡಿದಂತಹ ದಾಳಿಗಳಲ್ಲಿ ಸಂಪಗಾವಿ ಕಚೇರಿಯ ಮೇಲೆ ಮಾಡಿದಂತಹ ದಾಳಿ ಪ್ರಮುಖವಾದ ದಾಳಿಯಾಗಿದೆ. ಏಕೆಂದರೆ ಸಂಗೊಳ್ಳಿಯ ಕುಲಕರ್ಣಿಯ ಕುತಂತ್ರದಿಂದ ತಾನು ಮಾಡಿರದ ತಪ್ಪಿಗೆ ಸೆರೆಮನೆಯಲ್ಲಿ ಇರಬೇಕಾಗಿತ್ತು. ಮೇಲಗಿರಿ ರಂಗನಗೌಡರ ಜಾಮೀನಿನ ಮೇರೆಗೆ ಹೊರಗಡೆ ಬಂದ ರಾಯಣನು ಸಿಟ್ಟಿನಿಂದ, ಆಕ್ರೋಶದಿಂದ ಹೊರಗಡೆ ನಿಂತು ನಡುಹಗಲಿನಲ್ಲಿ ಈ ಕಚೇರಿಯನ್ನು ಸುಡುತ್ತೇನೆಂದು ಪ್ರತಿಜ್ಞೆಯನ್ನು ಅಂದು ಮಾಡಿರುತ್ತಾನೆ. ಈ ಪ್ರತಿಜ್ಞೆಯನ್ನು ರಾಯಣ್ಣನ ಹೋರಾಟದ ಸಂದರ್ಭದಲ್ಲಿ ಕಚೇರಿಯನ್ನು ಹಗಲಿನಲ್ಲಿ ದಾಳಿ ಮಾಡಿ, ಕಚೇರಿಯಲ್ಲಿದ್ದ ಕಾಗದ ಪತ್ರಗಳನ್ನು ಸುಟ್ಟು ಕಚೇರಿಗೆ ಬೆಂಕಿ ಹಚ್ಚುತ್ತಾರೆ.

'ಊರಿನ ಅಗಸೆಗಳಿಗೆಲ್ಲ ಜನರನ್ನು ಕಾವಲಿಟ್ಟು ನಾವು ತಾಲೂಕು ಕಚೇರಿಗೆ ನಡೆದೆವು. ಕಚೇರಿಯನ್ನು ಕಾಯುತ್ತಿದ್ದ ಹಳಬರು ನಮ್ಮನ್ನು ನೋಡುತ್ತಲೆ ಓಡಿಹೋದರು. ಕೆಲವು ತಿಂಗಳುಗಳ ಹಿಂದೆ ತಾನು ಸೆರೆಯಲ್ಲಿದ್ದ ಕಟಾಂಜನವನ್ನು ನೋಡುತ್ತಲೂ ರಾಯಣ್ಣನ ಕಣ್ಣಿನಲ್ಲಿ ನೀರೂರಿತು. ಆ ಕಟಾಂಜನವನ್ನು ಕಿತ್ತು ಮುರಿದುಹಾಕಿ ಕುರ್ಚಿ ಮೇಜುಗಳನ್ನು ಚೂರು ಚೂರು ಮಾಡಿ ಕಚೇರಿಯ ಕಾಗದ ಪತ್ರಗಳನ್ನೆಲ್ಲ ನಾಶಗೊಳಿಸಿ ಆನಂತರ ಆ ಕಟ್ಟಡಕ್ಕೆ ಬೆಂಕಿ ಹಚ್ಚಿದೆವು.'[೧೮] ರಾಯಣ್ಣ ಅಂದು ಮಾಡಿದ ಪ್ರತಿಜ್ಞೆಯನ್ನು ಹೋರಾಟದ ಸಂದರ್ಭದಲ್ಲಿ ಪೂರ್ಣಗೊಳಿಸುತ್ತಾನೆ.

ರಾಯಣ್ಣ ಬೀಡಿ, ನಂದಗಡ, ಖಾನಾಪುರ, ಸಂಪಗಾವಿ, ಸಂಗೊಳ್ಳಿ ಹೀಗೆ ಅನೇಕ ಊರುಗಳ ಮೇಲೆ ದಾಳಿ ಮಾಡಿ, ಬ್ರಿಟಿಷರ ಸೈನ್ಯದ ವಿರುದ್ಧ ಹೋರಾಡುತ್ತಾನೆ. ಹಾಗೂ ಗ್ರಾಮಗಳ ಗೌಡರಿಗೆ, ಕುಲಕರ್ಣಿಗಳಿಗೆ, ಹಳಬರಿಗೆ ಕಂದಾಯದ ಹಣವನ್ನು ನಮಗೆ ಕೊಡಬೇಕೆಂದು ಹೇಳುತ್ತಾನೆ.

ಶ್ರೀಮಂತರ ಮನೆಯ ಮೇಲೆ ದಾಳಿ ಮಾಡುತ್ತಾನೆ. ಇಂತಹ ದಾಳಿಗಳ ಮೂಲಕ ಬಂದಂತಹ ಹಣವನ್ನು ಸೈನ್ಯದ ಖರ್ಚಿಗಾಗಿ ಹಾಗೂ ಶಸ್ತ್ರಾಸ್ತ್ರಗಳ ಖರ್ಚಿಗಾಗಿ ಬಳಸಿಕೊಳ್ಳುತ್ತಾನೆ.

ರಾಯಣ್ಣನ ಹೋರಾಟದ ಸುದ್ದಿ ಕಿತ್ತೂರಿನಾದ್ಯಂತ ಹರಡಿದ್ದರಿಂದ ಜನತೆ ರಾಯಣ್ಣನಿಗೆ ಹಾಗೂ ರಾಯಣ್ಣನ ತಂಡದವರಿಗೆ ಕಿತ್ತೂರಿನ ಎಲ್ಲ ಊರುಗಳಲ್ಲಿ ರಾಯಣ್ಣ ಸೈನ್ಯವನ್ನು ಪ್ರೀತಿಯಿಂದ ಸ್ವಾಗತಿಸಿ ತಮ್ಮಿಂದ ಆದಂತಹ ಸಹಾಯ ಮಾಡುತ್ತಾ ಕಳಿಸುತ್ತಿದ್ದರು. 'ರಾಯಣ್ಣನು ತಂಡದವರೊಂದಿಗೆ ಇಟಗಿ ಗ್ರಾಮಕ್ಕೆ ಬಂದನು. ಅಲ್ಲಿಯ ರೈತರೆಲ್ಲ ಐದುನೂರು ರೂ ಸಂಗ್ರಹಿಸಿ ಹುರಿದುಂಬಿಸಿದರು.'[೧೯] ಅಂದರೆ ಕಿತ್ತೂರಿನ ಜನತೆ ರಾಯಣ್ಣನ ಹೋರಾಟಕ್ಕೆ ಸಹಕಾರ ನೀಡುತ್ತಿದ್ದರು ಎನ್ನುವುದಕ್ಕೆ, ಕ್ಯಾದಿಯಾರ್ಟ್ ಎಂಬ ಬ್ರಿಟಿಷ್ ಅಧಿಕಾರಿಯು ಆ ಭಾಗದ ಗ್ರಾಮದ ಊರ ಶೇತ್ ಸನದಿಗಳು ಅಮಲ್ದಾದಾರರಿಗೆ ಬಂಡಾಯಗಾರರ ವಿರುದ್ಧ ಏನು ಸಹಾಯ ನೀಡಲಿಲ್ಲ. ಅವರು ಬಂಡಾಯಗಾರರ ಜೊತೆ ಸಹಕರಿಸಿ ಅವರಿಗೆ ಮಾಹಿತಿಯನ್ನು ನೀಡುತ್ತಾರೆ. ಕಿತ್ತೂರು ನಾಡಿನ ಪ್ರಜೆಗಳಾದವರೆಲ್ಲ ಹೀಗೆ ಮಾಡುತ್ತಾರೆ. ಎಂದು ವರದಿಯನ್ನು ಮಾಡಿದ್ದಾನೆ. ಕಿತ್ತೂರಿನ ಜನರಲ್ಲಿ ಹಾಗೂ ರಾಯಣ್ಣನಲ್ಲಿ ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸಬೇಕು ಸ್ವಾತಂತ್ರ್ಯಗೊಳಿಸಬೇಕು ಎಂಬಂತಹದ್ದು ಜನತೆಯಲ್ಲಿರುವ ನಾಡಪ್ರೇಮವನ್ನು ಕಾಣುತ್ತೇವೆ.

ರಾಯಣ್ಣನು ಗೆರಿಲ್ಲಾ ಯುದ್ಧದ ಮೂಲಕ ಬ್ರಿಟಿಷರಿಗೆ ಕಾಡತೊಡಗುತ್ತಾನೆ. ಬ್ರಿಟಿಷ್ ಸರ್ಕಾರಕ್ಕೆ ರಾಯಣ್ಣನನ್ನು ನೇರವಾಗಿ ಹಿಡಿಯುವುದಾಗಲಿ ಅಥವಾ ಸೋಲಿಸುವುದಕ್ಕೆ ಸಾಧ್ಯವಿರಲಿಲ್ಲ. ಬ್ರಿಟಿಷರು ಭಾರತದಾದ್ಯಂತ ನಡೆಸಿದಂತಹ ಕುತಂತ್ರ ನೀತಿಯನ್ನು ಪ್ರಯೋಗಿಸುತ್ತಾರೆ. ಸಂಗೊಳ್ಳಿಯ ಕುಲಕರ್ಣಿ ಹಾಗೂ ಸಂಪಗಾವಿ ಅಮಾಲ್ದಾರನಾದ ಕೃಷ್ಣರಾವ್ ಮುಂತಾದವರು ರಾಯಣ್ಣನನ್ನು ಬಂಧಿಸುವ ಯೋಜನೆಯಲ್ಲಿರುವಾಗ ಕಿತ್ತೂರು ಸಂಸ್ಥಾನಕ್ಕೆ ದತ್ತು ಪುತ್ರನನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಖೂದಾಪುರದ ಲಿಂಗನಗೌಡನಿಗೆ ತನ್ನ ಮಗನನ್ನು ದತ್ತು ಕೊಡಬೇಕೆಂದುಕೊಂಡಿದ್ದ. ಆದರೆ ರಾಣಿ ಚೆನ್ನಮ್ಮ ಮಾಸ್ತ ಮರಡಿಯ ಬಾಳಪ್ಪನ ಮಗನಾದ ಶಿವಲಿಂಗಪ್ಪನನ್ನು ದತ್ತು ತೆಗೆದುಕೊಂಡಿದ್ದರಿಂದ ಅವನು ಕಿತ್ತೂರು ಸಂಸ್ಥಾನದ ಮೇಲೆ ಅಸಮಾಧಾನವಿತ್ತು. ಕಿತ್ತೂರು ಪತನವಾದಾಗ ಸಂಭ್ರಮಿಸಿದವರಲ್ಲಿ ಈತನು ಒಬ್ಬನಾಗಿದ್ದ. ಇದನ್ನು ತಿಳಿದ ಕೃಷ್ಣರಾವ್ ಲಿಂಗನಗೌಡನನ್ನು ಕರೆಹಿಸಿ ರಾಯಣ್ಣನನ್ನು ಹಿಡಿದು ಕೊಡಬೇಕೆಂದು ಹೇಳುತ್ತಾನೆ. ಇದಕ್ಕೆ ಒಪ್ಪದಿದ್ದಾಗ ಕಂಪನಿ ಸರ್ಕಾರಕ್ಕೆ ನಿನ್ನ ವಿರುದ್ಧ ನೀನು ರಾಯಣ್ಣನ ಜೊತೆಗೆ ಸೇರಿದ್ದೀಯ ಎಂದು ಶಿಕ್ಷೆ ಕೊಡಿಸುತ್ತೇನೆ ಎಂದು ಹೆದರಿಸಿದ. ರಾಯಣ್ಣನನ್ನು ಹಿಡಿದು ಕೊಟ್ಟರೆ ನಿನಗೆ ಜಮೀನು ಹಾಗೂ ಸಾಕಷ್ಟು ಹಣವನ್ನು ಕೊಡುತ್ತೇನೆಂದು ಆಸೆ ಆಮೀಷಗಳನ್ನೊಡ್ಡಿ ಒಪ್ಪಿಸುತ್ತಾನೆ. ಲಿಂಗನಗೌಡನ ಜೊತೆಗೆ ನೇಗಿನಹಾಳದ ವೆಂಕನಗೌಡನನ್ನು ಜೊತೆ ಸೇರಿಸಿ ಸೈನ್ಯವನ್ನು ಕೊಟ್ಟು ರಾಯಣ್ಣನಿಗೆ ನಾವು ನಿನ್ನ ಹೋರಾಟದಲ್ಲಿ ಭಾಗಿಯಾಗುತ್ತೇವೆ ಎಂದು ಹೇಳಿ ರಾಯಣ್ಣನ ಸೈನ್ಯವನ್ನು ಸೇರಿಕೊಳ್ಳುತ್ತಾರೆ.

ಕಿತ್ತೂರಿಗೆ ದತ್ತು ತೆಗೆದುಕೊಳ್ಳುವ ಸಂದರ್ಭದಲ್ಲಿ ಲಿಂಗನಗೌಡನಿಗೆ ಅಸಮಾಧಾನವಾ-ಗಿತ್ತೆನ್ನುವುದನ್ನು ಲೇಖಕರು ಕೃಷ್ಣರಾವ್ ಮತ್ತು ಲಿಂಗನಗೌಡನ ನಡುವೆ ನಡೆಯುವ ಸಂಭಾಷಣೆಯನ್ನು ಈ ರೀತಿ ಕಿತ್ತೂರು ರಾಜ್ಯ ಮುಳುಗಿದ್ದಕ್ಕೆ ನಿಮಗೇನು ದುಃಖವಾಗಿಲ್ಲ ಹೌದಲ್ಲೋ? ಯಾಕೆ ದುಃಖ ಆಗಬೇಕು? ಅದು ಇದ್ದರೆಷ್ಟು? ಹೋದರೆಷ್ಟು'? ಎಂದು ಹೇಳುತ್ತಾನೆ. ಇಂತಹ ಸಮಯಕ್ಕಾಗಿ ಕಾದು ಕುಳಿತಿದ್ದ ಕೃಷ್ಣರಾವ್ ರಾಯಣ್ಣನನ್ನು ಬಂಧಿಸುವುದಕ್ಕೆ ಇವನನ್ನು ಅಸ್ತ್ರವನ್ನಾಗಿ ತೆಗೆದುಕೊಳ್ಳುತ್ತಾನೆ. ಮುಂದುವರೆದು ಇಂಗ್ರೇಜಿ ಬಹಾದ್ದೂರ ಸರ್ಕಾರಕ್ಕೆ ನೀವು ನಿಷ್ಠೆಯಿಂದ ಇರಬೇಕು. ನಾವು ಕರೆದಾಗ ಬರಬೇಕು. ರಾಯಣ್ಣನನ್ನು ಸೆರೆ ಹಿಡಿಯುವುದಕ್ಕೆ ಒಂದೇ ಒಂದು ಹಾದಿ ಇದೆ. ಅದು ನೀವು ಮತ್ತು ನಿಮ್ಮ ಬಂಧು ವೆಂಕನಗೌಡ ಇಬ್ಬರು ಕೂಡಿ ರಾಯನ ವಿರುದ್ಧ ನಮಗೆ ಸಹಾಯ ಮಾಡಬೇಕು'[೨೦] ಎಂದು ಒಪ್ಪಿಸಿಕೊಂಡು ಕೃಷ್ಣರಾವ್‌ನು ಇವರಿಬ್ಬರ ಜೊತೆಗೆ ಕೆಲವು ಬ್ರಿಟಿಷ್ ಸೈನ್ಯವನ್ನು ಕೊಟ್ಟರು. ಇವರಿಬ್ಬರು ರಾಯಣ್ಣನ ಹತ್ತಿರ ಕಪಟ ನಾಟಕವಾಡುತ್ತಾ ಹೋಗಿ ರಾಯಣ್ಣನ ದಂಡಿನೊಳಗೆ ಸೇರಿಕೊಳ್ಳುತ್ತಾರೆ. ರಾಯಣ್ಣನಿಗೆ ಸಂಶಯ ಬಾರದಂತೆ ರಾಯಣ್ಣನ ಕೆಲವು ದಾಳಿಗಳಲ್ಲಿ ಭಾಗವಹಿಸುತ್ತಾರೆ. ರಾಯಣ್ಣನ ಕೊನೆಯ ದಾಳಿಯಾದ ಗಿಡದ ಹುಬ್ಬಳ್ಳಿ ದಾಳಿಯಲ್ಲಿ ಇವರು ಭಾಗವಹಿಸಿದ್ದರು. ರಾಯಣ್ಣನ ಗುಪ್ತ ಸ್ಥಳವಾದ ಡೋರಿಗುಡ್ಡಕ್ಕೆ ಹೋಗುವಾಗ ಮಧ್ಯಾಹ್ನವಾಗಿದ್ದರಿಂದ ರಾಯಣ್ಣನ ಸ್ನೇಹಿತನು ಹಾಗೂ ಸಂಬಂಧಿಯೂ ಆದ ಲಕ್ಕಪ್ಪ ಜಳಕ ಮಾಡುವುದಕ್ಕೆ ಕರೆದುಕೊಂಡು ಹೋಗುತ್ತಾನೆ.

ಲಕ್ಕಪ್ಪನಿಗೆ ಗೌಡರಿಬ್ಬರ ಮೇರೆಗೆ ಮೊದಲೇ ರಾಯಣ್ಣನನ್ನು ಹಿಡಿದು ಕೊಡಲು ಒಪ್ಪಿಸಿರುತ್ತಾರೆ. ಲಕ್ಕಪ್ಪ ಒಪ್ಪದಿದ್ದಾಗ ಆಸೆ ಆಮಿಷಗಳನ್ನು ಒಡ್ಡುತ್ತಾರೆ. ಲಕ್ಕಪ್ಪ ಒಪ್ಪದಿದ್ದಾಗ ಹೆಂಡತಿ ಮನೆ ಮಕ್ಕಳ ಕೊಲ್ಲುವುದಾಗಿ ಬೆದರಿಸುತ್ತಾರೆ. ಈ ರೀತಿ ಬೆದರಿಸಿ ಲಕ್ಕಪ್ಪನನ್ನು ರಾಯಣ್ಣನನ್ನು ಹಿಡಿದು ಕೊಡುವುದಕ್ಕೆ ಕಳುಹಿಸಿರುತ್ತಾರೆ. ಮೊದಲೇ ರಾಯಣ್ಣನನ್ನು ಒಳಸಂಚಿನ ಮೂಲಕ ಹಿಡಿಯಲು ಸಂಚನ್ನು ರೂಪಿಸಿಕೊಂಡು ಬಂದವರಿಗೆ ರಾಯಣ್ಣನನ್ನು ಹಿಡಿಯುವುದಕ್ಕೆ ಇದೇ ಸರಿಯಾದ ಸಮಯವೆಂದು ಭಾವಿಸಿ ರಾಯಣ್ಣನು ಜಳಕ ಮಾಡಿ ಬಟ್ಟೆ ಬದಲಿಸುತ್ತಿರುವಂತಹ ಸಂದರ್ಭದಲ್ಲಿ ಲಕ್ಕಪ್ಪ ರಾಯಣ್ಣನ ಖಡ್ಗವನ್ನು ತೆಗೆದುಕೊಂಡು ಹೋಗುತ್ತಾನೆ. ಹೋಗುತ್ತಾ ಬ್ರಿಟಿಷರ ಸೈನ್ಯ ಬಂತೆಂದು ಓಡಿಹೋಗುತ್ತಾನೆ. ನಿರಾಯುಧನಾಗಿದ್ದಂತಹ ರಾಯಣ್ಣನನ್ನು ಸೈನ್ಯ ಸಮೇತರಾಗಿ ಬಂದಂತಹ ಸೈನಿಕರು ರಾಯಣ್ಣನನ್ನು ಹಿಡಿದುಕೊಂಡು ಧಾರವಾಡಕ್ಕೆ ಹೋಗುತ್ತಾರೆ. 'ಸ್ನಾನ ಮುಗಿಸಿ ದಂಡೆಗೆ ಬಂದು ತೊಯ್ದ ಅರಿವೆ ಕಳಚಿ ಒಣ ಅಂಗಿ ಹಾಕಿಕೊಳ್ಳುವಾಗ ಮಾತ್ರ ಖಡ್ಗವನ್ನು ಲಕ್ಕನ ಕೈಗೆ ಕೊಟ್ಟನಂತೆ, ಅಂಗಿ ಹಾಕಿಕೊಂಡು ಗುಳಾಗಿ ಚಲ್ಲಣ ಧರಿಸಿಕೊಳ್ಳಲೆಂದು ಆತ ಕೆಳಗೆ ಬಗ್ಗಿದಾಗ ಖಡ್ಗ ಹಿಡಿದುಕೊಂಡು ಸ್ವಲ್ಪ ದೂರ ಹೋಗಿದ್ದ. ಲಕ್ಕ ಅಯ್ಯೋ ರಾಯಣ್ಣ ಘಾತವಾಯಿತೋ ನಿನ್ನ ಹಿಡಿಯಲಿಕ್ಕೆ ಗೌಡರ ಸಿಪಾಯಿಗಳು ಬಂದರಪೋ ಎಂದು ಕೂಗಿಕೊಂಡನಂತೆ ನೀನ್ಯಾಕೆ ಓಡುತ್ತೀಯಾ ನನ್ನ ಕತ್ತಿ ಆದರೂ ತಾರೋ ಇಲ್ಲಿ... ರಾಯನ ಕೈ ಕಾಲು ಕಟ್ಟಿ

ಹೆಡೆಮುರಿಗೆಬಿಗಿದು ಬಾಯಿಗೆ ಬಟ್ಟೆ ತುರಿಕಿ ಆತ ಕೂಗಿ ಕೊಳ್ಳದಂತೆ ಮಾಡಿದರು'.[೨೦] ಹೀಗೆ ರಾಯಣ್ಣನನ್ನು ಬ್ರಿಟಿಷರು ಕುತಂತ್ರದ, ಮೋಸದ ಮೂಲಕ ಹಿಡಿದು ಗಲ್ಲಿಗೇರಿಸುತ್ತಾರೆ.

ಕಿತ್ತೂರಿನ ಸ್ವಾತಂತ್ರ್ಯದ ಕನಸು ರಾಯಣ್ಣನ ಅಂತ್ಯದೊಡನೆ ಕೊನೆಗೊಂಡಂತೆ ರಾಷ್ಟ್ರಪ್ರೇಮ, ಸ್ವಾತಂತ್ರ್ಯ, ಸ್ವಾಭಿಮಾನಕ್ಕಾಗಿ ಬ್ರಿಟಿಷರಿಂದ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಬೇಕೆಂಬ ಕನಸು ನಮ್ಮವರಿಂದಲೇ ಅಂತ್ಯವಾದದ್ದು ದುರದೃಷ್ಟಕರ. ರಾಯಣ್ಣನನ್ನು ಬ್ರಿಟಿಷರು ಕೆಲವು ದಿನಗಳ ಕಾಲ ವಿಚಾರಣೆಯ ನಾಟಕವಾಡಿ, ಸ್ವಾತಂತ್ರ್ಯಕ್ಕಾಗಿ ಹೋರಾಡಿದಂತಹ ವೀರನನ್ನು ಬ್ರಿಟಿಷರು ದರೋಡೆಕೋರ, ದಂಗೆಕೋರ, ಲೂಟಿಗಾರ ಎಂಬಂತಹ ಬಿರುದುಗಳನ್ನು ನೀಡಿ, ಕೊನೆಗೆ ಮರಣದಂಡನೆ ಶಿಕ್ಷೆಯನ್ನು ವಿಧಿಸಿದರು. ರಾಯಣ್ಣನ ಹೋರಾಟದ ಚಟುವಟಿಕೆಗಳು ನಂದಗಡದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಹೆಚ್ಚಾಗಿ ನಡೆದಿದ್ದರಿಂದ ರಾಯಣ್ಣನನ್ನು ನಂದಗಡದಲ್ಲಿ ಗಲ್ಲಿಗೇರಿಸುತ್ತಾರೆ. ಬ್ರಿಟಿಷರ ವಿರುದ್ಧ ಮತ್ತೆ ಯಾರಾದರು ಹೋರಾಟ ಮಾಡಿದರೆ, ರಾಯಣ್ಣನಿಗೆ ನೀಡಿದಂತಹ ಶಿಕ್ಷೆಯನ್ನು ನೀಡಲಾಗುತ್ತದೆ ಎಂದು ತಿಳಿಸುವುದಕ್ಕಾಗಿ ಆ ಸ್ಥಳದಲ್ಲಿ ಗಲ್ಲಿಗೇರಿಸಲಾಯಿತು.

ಸ್ವಾತಂತ್ರ್ಯ ಸ್ವಾಭಿಮಾನಿಯಾದ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ಸಾಹಿತ್ಯ ಪ್ರಕಾರಗಳಲ್ಲಿ ಭಿನ್ನ ಭಿನ್ನವಾದಂತಹ ಮಾಹಿತಿಗಳು ದೊರಕುತ್ತವೆ. ರಾಯಣ್ಣನ ವಂಶ, ಹೆಂಡತಿ, ಮಗ, ಸಹೋದರ ಇಂತಹ ವಿಷಯದ ಕುರಿತು ಮಾಹಿತಿ ಇರುವುದನ್ನು ನಾವು ಕಾದಂಬರಿಗಳಲ್ಲಿ ಕಾಣಬಹುದು. ಈ ವಿಷಯಕ್ಕೆ ಸಂಬಂಧಿಸಿದಂತೆ ಸಾಕಷ್ಟು ಚರ್ಚೆಗಳು ನಡೆದಿದ್ದರೂ ಸಹ ಒಮ್ಮತವಾದಂತಹ ಅಭಿಪ್ರಾಯಗಳು ಮೂಡಿ ಬಂದಿಲ್ಲವೆಂದು ಹೇಳಬೇಕು. ಇಂತಹ ಐತಿಹಾಸಿಕ ವ್ಯಕ್ತಿಯ ಕೌಟುಂಬಿಕ ಜೀವನದ ಮಾಹಿತಿಯು ಸ್ಪಷ್ಟವಾಗಿ ಇಲ್ಲದಿರುವುದಕ್ಕೆ ಕಾರಣ ತಿಳಿದುಬಂದಿಲ್ಲ.

ರಾಯಣ್ಣನ ಕುರಿತು ಕಾದಂಬರಿಯನ್ನು ಬರೆದವರಲ್ಲಿ ಬಸವರಾಜ ಕಟ್ಟೀಮನಿ ಹಾಗೂ ಮೇಲಿನಮನಿ ಮುಖ್ಯರು. ಕಿತ್ತೂರು ರಾಣಿ ಚೆನ್ನಮ್ಮನ ಕುರಿತ ಬರೆದಿರುವಂತಹ ಕಾದಂಬರಿಗಳಲ್ಲಿ ರಾಯಣ್ಣನ ಪಾತ್ರ ಸಾಂದರ್ಭಿಕವಾಗಿ ಬಂದರೂ ರಾಯಣ್ಣನ ಪಾತ್ರ ಗೌಣವಾಗಿರುವುದನ್ನು ಕಾಣುಬಹುದು. ಕಟ್ಟೀಮನಿಯವರ ಸಂಗೊಳ್ಳಿ ರಾಯನಾಯಕ ಕಾದಂಬರಿಯು ೧೯೬೮ರಲ್ಲಿ ಪ್ರಕಟಗೊಂಡಿದೆ. ಕಾದಂಬರಿಯ ಮುನ್ನುಡಿಯಲ್ಲಿ ಉತ್ತರ ಕರ್ನಾಟಕದ ಪ್ರಖ್ಯಾತ ಸ್ವಾತಂತ್ರ್ಯವೀರ ಸಂಗೊಳ್ಳಿ ರಾಯಣ್ಣ ಬ್ರಿಟಿಷರ ಅಧಿಕಾರವನ್ನು ಪ್ರತಿಭಟಿಸಿ ಪೌರುಷದಿಂದ ಹೋರಾಡಿ ತನ್ನ ಪ್ರಾಣವನ್ನು ಅರ್ಪಿಸಿದ. ಆ ಗಂಡುಗಲಿಯನ್ನು ಕುರಿತು ಜನಪದ ಕಥೆಗಳು, ಲಾವಣಿ ಪದಗಳು, ಬಯಲಾಟಗಳು ರಚಿತವಾಗಿವೆ. ಆದರೆ ಐತಿಹಾಸಿಕ ಅಂಶಗಳನ್ನು ಸಂಗ್ರಹಿಸಿ ಒಂದು ವ್ಯವಸ್ಥಿತವಾದ ರೀತಿಯಲ್ಲಿ ಚರಿತ್ರೆಯನ್ನು ರೂಪಿಸುವ ಕೆಲಸ ಇದುವರೆಗೂ ನಡೆದಿಲ್ಲ. ರಾಯಣ್ಣನ ರೋಮಾಂಚಕ ಜೀವನದ ಬಗ್ಗೆ ಬಾಲ್ಯದಿಂದಲೂ ಆಕರ್ಷಿತನಾಗಿದ್ದ ನಾನು, ಕಳೆದ ೨೦ ವರ್ಷಗಳಿಂದ ಐತಿಹಾಸಿಕ ಗ್ರಂಥಗಳನ್ನು, ದಾಖಲೆಗಳನ್ನು ತಿರುವಿ ಹಾಕಿ ಅಂದಿನ ಸರ್ಕಾರದ ಕಡತಗಳನ್ನು ನೋಡಿಕೊಂಡು

ಇದೀಗ ಈ ಕಾದಂಬರಿ ರೂಪದ ಚರಿತ್ರೆಯನ್ನು ಬರೆದು ಕನ್ನಡಿಗರಿಗರ್ಪಿಸುತ್ತಿದ್ದೇನೆ ಎಂದು ಹೇಳಿಕೊಂಡಿದ್ದಾರೆ. ಅಂದರೆ ರಾಯಣ್ಣನಿಗೆ ಸಂಬಂಧಿಸಿದಂತಹ ಎಲ್ಲಾ ರೀತಿಯ ದಾಖಲೆಗಳನ್ನು ಸಂಗ್ರಹಿಸಿ ಬರೆದಿರುವ ಕಾರಣ ಈ ಕಾದಂಬರಿಯು ರಾಯಣ್ಣನ ಪೂರ್ಣ ಚಿತ್ರಣವನ್ನು ತಿಳಿಯಲು ಸಹಾಯಕವಾಗುತ್ತದೆ. ಈ ಕಾದಂಬರಿಯು ರಾಯಣ್ಣನಿಗೆ ಸಂಬಂಧಿಸಿದಂತಹ ಮೊದಲ ಕಾದಂಬರಿಯಾಗಿದೆ. ಈ ಕಾದಂಬರಿಯಲ್ಲಿ ರಾಯಣ್ಣನನ್ನು ಹೆಚ್ಚು ವೈಭವೀಕರಿಸಿ ಬರೆದಿದ್ದರೂ ಸಹ ಈ ಕಾದಂಬರಿಗೆ ತುಂಬ ಮಹತ್ವದ ಸ್ಥಾನವಿದೆ.

ಚರಿತ್ರೆಯಲ್ಲಿ ಗಂಗಾಧರನ ಪಾತ್ರ ಹೆಚ್ಚಾಗಿ ಬರುವುದಿಲ್ಲ. ಕೆಲವೇ ಕೆಲವು ಕೃತಿಗಳಲ್ಲಿ ಮಾತ್ರ ಬರುತ್ತದೆ. ಕಿತ್ತೂರಿನ (ಚೆನ್ನಮ್ಮ ರಾಣಿಯ) ಕುದುರೆ ಸವಾರರ ಮೇಲಾಧಿಕಾರಿಯಾದ ಗಂಗಾಧರನ ಜೀವನ ಚರಿತ್ರೆಯು ಚರಿತ್ರೆಯಲ್ಲಿ ಗೌಣವಾಗಿದೆ. ಬಿಚ್ಚುಗತ್ತಿ ಚೆನ್ನಬಸವಣ್ಣ, ರಾಯಣ್ಣ ಮುಂತಾದವರ ಕುರಿತು ಮಾಹಿತಿಯನ್ನು ತಿಳಿಯಲು ಈ ಕಾದಂಬರಿಯ ಸಹಾಯಕವಾಗುತ್ತದೆ. ಕುತಂತ್ರದಿಂದ ಸೆರೆಮನೆ ಸೇರಿದಾಗ ರಾಯಣ್ಣನನ್ನು ಜಾಮೀನಿನ ಮೇರೆಗೆ ಬಿಡಿಸುವವನು ಮೇಲಗಿರಿ ರಂಗನಗೌಡ ಎಂದು (ಜನಪದ ಸಾಹಿತ್ಯ)ಹೇಳುತ್ತದೆ. ಆದರೆ ಈ ಕಾದಂಬರಿಯಲ್ಲಿ ಅಮಟೂರಿನ ಸೈದಾನವರ ಬಾಳಾಸಾಹೇಬ "ನನ್ನನ್ನು ಸೆರೆಯಲ್ಲಿರಿಸಿದ ಸುದ್ದಿ ಕೇಳಿ ಕಚೇರಿಗೆ ಬಂದು ಹೋಗುತ್ತಿದ್ದ ಜನರಿಗೆಲ್ಲ ಗೊತ್ತಾಗಿರಬೇಕು. ಅಂದು ಮಧ್ಯಾಹ್ನ ಯಾವುದೋ ಕೆಲಸಕ್ಕಾಗಿ ಅಲ್ಲಿಗೆ ಬಂದ ಅಮಟೂರಿನ ಸೈದಾನವರ ಬಾಳಸಾಹೇಬನಿಗೆ ನನ್ನ ವಿಷಯ ತಿಳಿಯುತ್ತಲೂ ಆತ ಮಾಮಲೇದಾರನಿಗೆ ಭೇಟಿಯಾಗಿ ನನ್ನ ಸಲುವಾಗಿ ತಾನು ಜಾಮೀನಾಗುವುದಾಗಿ ತಿಳಿಸಿದ.'" ಆದರೆ ಈ ವಿಷಯದ ಕುರಿತು ಜನಪದ ಸಾಹಿತ್ಯದಲ್ಲಿ ಹೆಚ್ಚಾಗಿ ಮೇಲಗಿರಿ ರಂಗನಗೌಡರು ರಾಯಣ್ಣನಿಗೆ ಜಾಮೀನಾಗಿರುವುದು ತಿಳಿದುಬರುತ್ತದೆ.

ರಾಯಣ್ಣನ ವಿವಾಹದ ಕುರಿತು ಸಾಕಷ್ಟು ಚರ್ಚೆಗಳಾಗಿವೆ ಮತ್ತು ಆಗುತ್ತಿವೆ. ಕಟ್ಟೀಮನಿಯವರು ಸಂಗೊಳ್ಳಿ ರಾಯನಾಯಕ ಕಾದಂಬರಿಯಲ್ಲಿ ರಾಯಣ್ಣನ ಹೆಂಡತಿಯ ಹೆಸರು 'ನಿಂಗಿ' ಎಂದಿದೆ. ಕ್ರಾಂತಿಯ ಕಿಡಿ ಎಂಬ ಕಾದಂಬರಿಯಲ್ಲಿ ರಾಯಣ್ಣನ ಹೆಂಡತಿಯ ಹೆಸರು 'ಮಲ್ಲವ್ವ' ಎಂದೂ ರಾಯಣ್ಣನಿಗೆ ಹನುಮ ಎಂಬ ಮಗನಿದ್ದನೆಂದು ಇದೇ ಕಾದಂಬರಿಯಲ್ಲಿ ಹೇಳಿದ್ದಾರೆ. ಆದರೆ ಇದಕ್ಕೆ ಯಾವುದೇ ರೀತಿಯ ಸೂಕ್ತ ಆಧಾರಗಳು ದೊರೆತಿಲ್ಲ. ಇಂದಿಗೂ ಈ ವಿಷಯದ ಕುರಿತು ಚರ್ಚೆ ನಡೆಯುತ್ತಿದೆ. ಹೆಂಡತಿ ಹಾಗೂ ಮಗನ ಕುರಿತು ಯಾವುದೇ ರೀತಿಯ ಸೂಕ್ತ ದಾಖಲೆಗಳು ಇದುವರೆಗೂ ದೊರೆತಿಲ್ಲ.

ಹೀಗೆ ಸಂಗೊಳ್ಳಿ ರಾಯಣ್ಣನನ್ನು ಕುರಿತು ಬಂದಿರುವ ಕಾದಂಬರಿಗಳಲ್ಲಿ ರಾಯಣ್ಣನ ಸಿದ್ಧಿ, ಸಾಧನೆ, ಬಾಲ್ಯ, ಕಿತ್ತೂರು ಸಂಸ್ಥಾನದ ಉಳಿವಿಗಾಗಿ ಅವನ ಹೋರಾಟ.....ಗೌರವಕ್ಕೂ ಪಾತ್ರವಾಗುತ್ತಾನೆ. ಭಾರತ ಸ್ವಾತಂತ್ರ್ಯ ಸಂಗ್ರಾಮ ಅದರಲ್ಲೂ ವಿಶೇಷವಾಗಿ ಕಿತ್ತೂರು ಸಂಸ್ಥಾನದ

ರಕ್ಷಣೆ ಮತ್ತು ಪೋಷಣೆ ಮಾಡುವಲ್ಲಿ ರಾಯಣ್ಣನ ಪಾತ್ರ ಬಹುದೊಡ್ಡದು. ಅದನ್ನು ಗ್ರಹಿಸಿಕೊಳ್ಳುವಲ್ಲಿ ಮತ್ತು ಆಕರಗಳಾಗಿ ಬಳಸಿಕೊಳ್ಳುವಲ್ಲಿ ರಾಯಣ್ಣನ ಕುರಿತು ಬಂದಂತಹ ಈ ಕಾದಂಬರಿಗಳು ಮಹತ್ವದ ಪಾತ್ರವಹಿಸುತ್ತವೆ.

**ಅಡಿ ಟಿಪ್ಪಣಿಗಳು**

೧. ತಿ. ತಾ. ಶರ್ಮ. ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ [ಲೇಖಕರ ಭಿನ್ನಹ]

೨. ಎಲ್. ಎಸ್. ಶೇಷಗಿರಿ ರಾವ್, ಹೊಸಗನ್ನಡ ಸಾಹಿತ್ಯ ಚರಿತ್ರೆ, ಪುಟ, ೧೪೩

೩. ಬಸವರಾಜ ಕಟ್ಟೀಮನಿ, ಸಂಗೊಳ್ಳಿ ರಾಯನಾಯಕ, ಪುಟ, ಮುನ್ನುಡಿ

೪. ಬಸವರಾಜ ಕಟ್ಟೀಮನಿ, ಮಾಡಿ ಮಡಿದವರು, ಪುಟ, ೭೩

೫. ಬಸವರಾಜ ಕಟ್ಟೀಮನಿ, ಸಂಗೊಳ್ಳಿ ರಾಯನಾಯಕ, ಪುಟ, ೧೫

೬. ಮೇಲಿನಮನಿ ವೈ. ಐ. ಕ್ರಾಂತಿಯ ಕಿಡಿ, ಪುಟ, ೦೭

೭. ಬಸವರಾಜ ಕಟ್ಟೀಮನಿ, ಸಂಗೊಳ್ಳಿ ರಾಯನಾಯಕ, ಪುಟ, ೦೬

೮. ಅದೇ, ಪುಟ, ೧೧

೯. ಮೇಲಿನಮನಿ ವೈ. ಐ. ಕ್ರಾಂತಿಯ ಕಿಡಿ, ಪುಟ, ೦೩

೧೦. ಅದೇ, ಪುಟ, ೦೩

೧೧. ಅದೇ, ಪುಟ, ೦೫

೧೨. ಅದೇ, ಪುಟ, ೦೬

೧೩. ಅದೇ, ಪುಟ, ೦೬

೧೪. ಅದೇ, ಪುಟ, ೨೮

೧೫. ಅದೇ, ಪುಟ, ೩೩

೧೬. ಬಸವರಾಜ ಕಟ್ಟೀಮನಿ, ಸಂಗೊಳ್ಳಿ ರಾಯನಾಯಕ, ಪುಟ, ೧೧೩

೧೭. ಅದೇ ಪುಟ, ೧೩೫

೧೮. ಅದೇ, ಪುಟ, ೧೩೮

೧೯. ಅದೇ, ಪುಟ, ೧೬೨

೨೦. ಜ್ಯೋತಿ ಹೊಸೂರ, ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ, ಪುಟ, ೧೧೭

೨೧. ಬಸವರಾಜ ಕಟ್ಟೀಮನಿ, ಸಂಗೊಳ್ಳಿ ರಾಯನಾಯಕ, ಪುಟ, ೧೮೪

೨೨. ಅದೇ, ಪುಟ, ೧೧೨

* * *

ಅಧ್ಯಾಯ : ಐದು

# ಸಂಗೊಳ್ಳಿ ರಾಯಣ್ಣ : ಜನಪದ ಸಾಹಿತ್ಯ

ಅಧ್ಯಾಯ : ಐದು

# ಸಂಗೊಳ್ಳಿ ರಾಯಣ್ಣ : ಜನಪದ ಸಾಹಿತ್ಯ

ಯಾವುದೇ ಒಂದು ಭಾಷೆ ತನ್ನದೇ ಆದಂತಹ ಒಂದು ಪರಂಪರೆ, ಸಂಸ್ಕೃತಿ ಹಾಗೂ ಮೌಖಿಕ ಸಾಹಿತ್ಯವನ್ನು ಹೊಂದಿರುತ್ತದೆ. ಸಾಹಿತ್ಯದಲ್ಲಿ ಒಂದು ಶಿಷ್ಟ ಸಾಹಿತ್ಯ ಮತ್ತೊಂದು ಮೌಖಿಕ ಸಾಹಿತ್ಯ ಎಂಬ ಎರಡು ಪ್ರಕಾರಗಳಿವೆ. ಯಾವುದೇ ಒಂದು ಸಾಹಿತ್ಯದ ಮೂಲ ಜನಪದ ಸಾಹಿತ್ಯವಾಗಿರುತ್ತದೆ. ಒಬ್ಬ ಕವಿ ಕಲಾವಿದ ಸಮಾಜದೊಳಗಿನ ವಸ್ತುಗಳನ್ನೇ ಇಟ್ಟುಕೊಂಡು ಕೃತಿರಚನೆಯನ್ನು ಮಾಡುತ್ತಾನೆ. 'ಜನವಾಣಿ ಬೇರು ಕವಿವಾಣಿ ಹೂವು' ಎಂಬಂತೆ ಎಲ್ಲದಕ್ಕೂ ಮೂಲಬೇರು ಜನಪದ ಸಾಹಿತ್ಯ ಎಂದು ಕರೆದಿದ್ದಾರೆ. ಜನಪದ ಸಾಹಿತ್ಯದಲ್ಲಿ ಗಾದೆ, ಒಗಟು, ಒಡಪು, ಗೀತೆ, ಕಥನಗೀತೆ, ಲಾವಣಿಗಳು, ಗೀಗಿ ಪದಗಳು, ಹಂತಿಯ ಪದಗಳು ಮುಂತಾದವುಗಳನ್ನು ಗುರುತಿಸಬಹುದು. ಕಾಲದಿಂದ ಕಾಲಕ್ಕೆ ನಾಲಿಗೆಯಿಂದ ನಾಲಿಗೆಗೆ ಹರಿದು ಬರುವಾಗ ಜನರಲ್ಲಿ ಕೆಲವೊಂದು ಭಾಗಗಳು ಬದಲಾವಣೆಗೊಂಡು ಪ್ರಸ್ತುತದವರೆಗೆ ಜಾನಪದ ಸಾಹಿತ್ಯ ಮುಂದುವರಿದಿರುವುದನ್ನು ಕಾಣಬಹುದು. ಇಂತಹ ಜನಪದ ಸಾಹಿತ್ಯ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಹೋರಾಡಿದ ವೀರರ ಕುರಿತು ತಿಳಿಯಲು ಸಹಾಯಕವಾಗುತ್ತವೆ.

ಭಾರತದ ಸ್ವಾತಂತ್ರ್ಯ ಶತಶತಮಾನಗಳಿಂದ ತಮ್ಮ ಮೇಲೆ ದಬ್ಬಾಳಿಕೆ ಮಾಡುತ್ತಿದ್ದ ಬ್ರಿಟಿಷರ ವಿರುದ್ಧ ಹಾಗೂ ಭಾರತದಿಂದ ಬ್ರಿಟಿಷರನ್ನು ಹೊರಹಾಕಲು ದೀರ್ಘಕಾಲ ಹೋರಾಟವನ್ನು ಮಾಡಬೇಕಾಯಿತು. ಬ್ರಿಟಿಷರು ನಮ್ಮವರನ್ನು ಒಳಸಂಚಿಗೆ ಬಳಸಿಕೊಂಡು ನಮ್ಮವರಿಂದಲೇ ಒಂದೊಂದೇ ರಾಜ್ಯ ಮತ್ತು ಸಂಸ್ಥಾನಗಳನ್ನು ವಶಪಡಿಸಿಕೊಂಡರು. ಭಾರತದಾದ್ಯಂತ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸುವ ಸಮಯದಲ್ಲಿ ಬ್ರಿಟಿಷರ ವಿರುದ್ಧ ದಕ್ಷಿಣ ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಪ್ರಬಲವಾಗಿ ಹೋರಾಟ ಮಾಡಿದವರೆಂದರೆ ಮೈಸೂರಿನ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಮೊದಲಿಗರು. ಇವರ ಹೋರಾಟವು ಮುಂದೆ ಸಂಸ್ಥಾನಿಕರಿಗೆ, ಪಾಳೆಗಾರರಿಗೆ ಬ್ರಿಟಿಷರ ವಿರುದ್ಧ ಹೋರಾಟ ಮಾಡಲು ಸ್ಫೂರ್ತಿಯಾಯಿತೆಂದು ಹೇಳಬಹುದು.

ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದ ವೀರರ ಸಾಹಸಮಯ ಚಿತ್ರಣಗಳನ್ನು ನಮ್ಮ ಜನರು ಹಾಡುಗಳಲ್ಲಿ, ಕಥೆಗಳಲ್ಲಿ ಪ್ರತಿನಿಧಿಸಿದ್ದಾರೆ. ಭಾರತದಲ್ಲಿ ನಡೆದಂತಹ ಕ್ವಿಟ್ ಇಂಡಿಯಾ ಚಳುವಳಿ ಮತ್ತು ಇತರ ಹೋರಾಟಗಳಲ್ಲಿ ಮೊದಲು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದಂತಹ ಸಂಗೊಳ್ಳಿ ರಾಯಣ್ಣನಂತಹ ಅನೇಕ ಹೋರಟಗಾರರ ಸ್ಫೂರ್ತಿ, ಹಾಗೂ ಅವರನ್ನು ಕುರಿತು ಹಾಡುವಂತಹ ಜನಪದ ಹಾಡುಗಳು, ಲಾವಣಿಗಳ ಮೂಲಕ ಅವರು ಹೋರಾಟ ಮಾಡಿರುವುದು ಕಂಡುಬರುತ್ತದೆ. ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ನಿರೂಪಣೆಗೆ ಮಹತ್ವದ ಆಕರವಾಗುವ ವಿಶೇಷತೆಯನ್ನು ಜಾನಪದ ಸಾಹಿತ್ಯವು ಹೊಂದಿದೆ. ಸ್ವಾತಂತ್ರ್ಯ ಹೋರಾಟದ ಹಾಗೂ ಇತರ ಚರಿತ್ರೆಯನ್ನು ತಿಳಿಯಲು ಜನಪದ ಸಾಹಿತ್ಯ ಮುಖ್ಯ ಆಧಾರ ಸಾಮಗ್ರಿಯಾಗುತ್ತವೆ. ಭಾರತದಲ್ಲಿ ನಡೆದ ಪ್ರಥಮ ಸ್ವಾತಂತ್ರ ಸಂಗ್ರಾಮಕ್ಕಿಂತ ಮೊದಲು ಬ್ರಿಟಿಷರ ವಿರುದ್ಧ ಹೋರಾಟ ಮಾಡಿದವರು ಮೈಸೂರಿನ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಮೊದಲಿಗರು. ಇವರು ಮೈಸೂರು ರಾಜ್ಯದ ಅರಸರಾಗಿದ್ದರು. ಆದರೆ ಕಿತ್ತೂರು ಚೆನ್ನಮ್ಮ ಚಿಕ್ಕ ಸಂಸ್ಥಾನವಾದ ಕಿತ್ತೂರು ಸಂಸ್ಥಾನವನ್ನು ಉಳಿಸಿಕೊಳ್ಳಲು ಹಾಗೂ ತಮ್ಮ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ೧೮೨೪ರಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ಮಾಡಿರುವುದು ಕಂಡುಬರುತ್ತದೆ. ಆದರೆ ರಾಯಣ್ಣ ಯಾವುದೇ ಒಂದು ರಾಜ್ಯಕ್ಕೆ, ಸಂಸ್ಥಾನಕ್ಕೆ ರಾಜನಾಗಿರದಿದ್ದರೂ ಭಾರತದಿಂದ ಬ್ರಿಟಿಷರನ್ನು ಹೊರಹಾಕಲು ಹಾಗೂ ಕಿತ್ತೂರು ಸಂಸ್ಥಾನವನ್ನು ಸ್ವಾತಂತ್ರ್ಯಗೊಳಿಸಲು ಸಾಮಾನ್ಯ ವ್ಯಕ್ತಿಯೊಬ್ಬ ಹೋರಾಟ ಮಾಡಿರುವುದು ಆತನ ದೇಶಪ್ರೇಮ, ಸ್ವಾತಂತ್ರ್ಯ, ಸ್ವಾಭಿಮಾನದ ಸಂಕೇತವಾಗಿದೆ.

ಜನಪದ ಸಾಹಿತ್ಯದ ಮಹತ್ವವನ್ನು ಕುರಿತು “ಎಲ್ಲ ದೇಶಗಳಲ್ಲೂ ಎಲ್ಲ ಕಾಲಗಳಲ್ಲೂ ಮೌಖಿಕ ಪರಂಪರೆ ಎನ್ನುವುದು ಇದ್ದೇ ಇರುತ್ತದೆ. ಸಾಕ್ಷರತೆ, ಲಿಖಿತ ಸಾಹಿತ್ಯ, ಪ್ರಬುದ್ಧ ಚಿಂತಕರು, ಉನ್ನತ ಶಿಕ್ಷಣ ವಿಧಾನ ಇರುವ ಸಮಾಜಗಳಲ್ಲೂ ಮೌಖಿಕ ಪರಂಪರೆ ಇಲ್ಲದಿಲ್ಲ. ಇದು ಸಾಂಪ್ರದಾಯಿಕವಾದ ಲಿಖಿತ ಪರಂಪರೆಗೆ ಸಂಪೂರ್ಣವಾಗಿ ಭಿನ್ನವಾಗಿರಬೇಕೆಂಬ ನಿಯಮವೇನಿಲ್ಲ. ಹಾಗೇಯೇ ಇದು ಲಿಖಿತ ಪರಂಪರೆಯನ್ನೇ ಅನುಸರಿಸಬೇಕೆಂಬ ನಿಯಮನೂ ಇಲ್ಲ. ಲಿಖಿತ ಪರಂಪರೆ ಸಾಮಾನ್ಯವಾಗಿ ಆಳುವವರು ಹಾಗೂ ಅವರ ಅನುಯಾಯಿಗಳ ಪರವಾಗಿರುತ್ತದೆ. ಜನಪರವಾದ ಸಾಂಸ್ಕೃತಿಕ ದಾಖಲೆಗಳು ಮೌಖಿಕ ಪರಂಪರೆಯಲ್ಲೇ ಸಿಕ್ಕುವ ಸಾದ್ಯತೆ ಹೆಚ್ಚು. (ಅದುದರಿಂದ) ಸಾಂಸ್ಕೃತಿಕ ದಾಖಲೆಗಳು ಮೌಖಿಕ ಪರಂಪರೆಯಲ್ಲೇ ಸಿಕ್ಕುವ ಸಾಧ್ಯತೆ ಹೆಚ್ಚು ಆದುದರಿಂದ ಸಾಂಸ್ಕೃತಿಕ ಪರಂಪರೆಯ ಜನಪದ ಧೋರಣೆಗಳನ್ನು ಮೌಖಿಕ ಪರಂಪರೆ ಪ್ರತಿಬಿಂಬಿಸುತ್ತದೆ. ಹಲವು ಲಾವಣಿಗಳಲ್ಲಿ ಆಳುವವರ ಅಭಿಪ್ರಾಯಕ್ಕೆ ಭಿನ್ನವಾಗಿ ಸಾಂಸ್ಕೃತಿಕ ವೀರರನ್ನು ರೂಪಿಸುವ ಪ್ರಯತ್ನವನ್ನು ನಾವು ಕಾಣಬಹುದು. ಆಳುವವರಿಂದ ಕಳ್ಳರೆಂದು, ದರೋಡೆಕೋರರೆಂದು, ಬಂಡಾಯಗಾರರೆಂದು ಮುದ್ರೆ ಒತ್ತಿಸಿಕೊಂಡವರು ಜನರ

ಮನದಲ್ಲಿ ಸಾಂಸ್ಕೃತಿಕ ವೀರರಾಗಿ ಮೌಖಿಕ ಪರಂಪರೆಯ ಪ್ರಶಂಸಾಪತ್ರವನ್ನು ಪಡೆದಿರುವುದನ್ನು ಮನಗಾಣಬಹುದು."[೧]

ಸಂಗೊಳ್ಳಿ ರಾಯಣ್ಣನ ಕುರಿತು ನಮಗೆ ಹೆಚ್ಚಿನ ಲಿಖಿತ ದಾಖಲೆಗಳು ಸಿಗುವುದಿಲ್ಲ. ಅಂದಿನ ಕಾಲದ ಬ್ರಿಟಿಷ್ ಅಧಿಕಾರಿಗಳು ನಡೆಸಿದ ಪತ್ರವ್ಯವಹಾರಗಳು ಪ್ರಮುಖ ಆಕರಗಳಾಗುತ್ತವೆ. ಈ ಪತ್ರವ್ಯವಹಾರಗಳನ್ನು ಬ್ರಿಟಿಷ್ ಅಧಿಕಾರಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ರೂಪಿಸಿಕೊಂಡಿದ್ದಾರೆ. ರಾಯಣ್ಣನ ಬಗ್ಗೆ ಮತ್ತು ರಾಯಣ್ಣನ ಹೋರಾಟದ ಬಗ್ಗೆ ಮಾಹಿತಿ ದೊರೆಯುವುದು ಅಥವಾ ಸಿಗುವುದು ಜನಪದ ಸಾಹಿತ್ಯದಲ್ಲಿ. ರಾಯಣ್ಣನ ಹೋರಾಟವನ್ನು ಅಂದಿನ ಜನರು ಹಾಡುಗಳ ಮೂಲಕ, ಕಥೆಗಳ ಮೂಲಕ ಮುಂದಿನ ಭಾರತ ಸ್ವಾತಂತ್ರ್ಯ ಸಂಗ್ರಾಮದ ಹೋರಾಟಕ್ಕೆ ಸ್ಫೂರ್ತಿಯಾಗಿದ್ದಾನೆ ಎಂದು ಹೇಳಬಹುದು.

ಕಿತ್ತೂರ ಸಂಸ್ಥಾನದ ಸಾಮಾನ್ಯ ಸೈನಿಕನಾಗಿದ್ದ ರಾಯಣ್ಣನು ಕಿತ್ತೂರು ಪತನದ ನಂತರ ಕಿತ್ತೂರನ್ನು ಮತ್ತೆ ಸ್ವತಂತ್ರಗೊಳಿಸಲು ಸಮಾನ ಮನಸ್ಕರೊಂದಿಗೆ ಸೇರಿ, ಜನರಲ್ಲಿ ಸಂಸ್ಥಾನದ ಬಗ್ಗೆ, ಬ್ರಿಟಿಷರ ದಬ್ಬಾಳಿಕೆಯನ್ನು ಜನರಿಗೆ ತಿಳಿಸುತ್ತಾ ಜನರಲ್ಲಿ ಸ್ವತಂತ್ರ, ದೇಶಪ್ರೇಮ, ನಾಡ ಪ್ರೇಮದ ವಿಷಯವನ್ನು ತಿಳಿಸಿ ಜನರಲ್ಲಿ ಕಿತ್ತೂರು ಸಂಸ್ಥಾನವನ್ನು ಸ್ವಾತಂತ್ರಗೊಳಿಸಲು ಹುರಿದುಂಬಿಸಿ ಬ್ರಿಟಿಷರನ್ನು ಕಿತ್ತೂರಿನಿಂದ ಹೊರಹಾಕಲು ಹೋರಾಟ ಮಾಡಿದನು. ಆದರೆ ರಾಯಣ್ಣ ನಮ್ಮವರಿಂದಲೇ ನಮ್ಮವರ ಕುತಂತ್ರದಿಂದಲೇ ಅಂತ್ಯವಾದದ್ದು ದುರ್ದೈವವಾದ ಸಂಗತಿಯಾಗಿದೆ.

"ಜನರು ಅವನ ಮೇಲೆ ಅಭಿಮಾನಗಳ ಮಹಾಪೂರವನ್ನೆ ಹರಿಸಿದರು. ಇಷ್ಟೊಂದು ಜನಪ್ರಿಯ ನಾಯಕರು ಇತಿಹಾಸದಲ್ಲಿ ತೀರ ಕಡಿಮೆ. ಜನಪ್ರಿಯತೆಯ ಅಲೆಯ ಮೇಲೆ ತೇಲಿ ಬಂದ ರಾಯಣ್ಣನ ವ್ಯಕ್ತಿತ್ವಕ್ಕೆ ವೈಭವೀಕರಣ ಮತ್ತು ದೈವೀಕರಣಗಳು ಸುಲಭವಾಗಿ ಬೆರತುಕೊಂಡವು. ಅವನ ಸಮಾಧಿ ಯತ್ರಾಸ್ಥಳವಾಯಿತು. ರಾಯಣ್ಣ ಸಂತಾನಫಲ ನೀಡುವ ದೇವತೆಯಾದ. ಈ ಹಿನ್ನೆಲೆಯಲ್ಲಿ ರಾಯಣ್ಣನ ಬಗ್ಗೆ ದಂತಕತೆಗಳು ಹುಟ್ಟಿಕೊಂಡವು. ಅವನ ಕತೆಯನ್ನು ಜನಪದ ಸಮುದಾಯ ತನ್ನದೇ ಆದ ವಿಶಿಷ್ಟ ಶೈಲಿಯಲ್ಲಿ ರೂಪಿಸಿತು. ಅದು ಜನಪದ ಇತಿಹಾಸವೆನಿಸಿತು. ಮೌಖಿಕ ಇತಿಹಾಸವೆನಿಸಿತು. ಇತಿಹಾಸವೆಂದರೆ ಕೇವಲ ಶುಷ್ಕ ದಾಖಲೆಗಳನ್ನಾಧರಿಸಿದ ನಿರೂಪಣೆಯಲ್ಲ. ಆ ದಾಖಲೆಗಳಿಂದ ನಿಷ್ಪನ್ನಗೊಳ್ಳುವ ಬದುಕಿನ ವ್ಯಾಖ್ಯನ. ರಾಯಣ್ಣನಂತ ಐತಿಹಾಸಿಕ ವ್ಯಕ್ತಿಯನ್ನು ಒಂದು ಜನ ಸಮುದಾಯ ಸ್ವೀಕರಿಸುವ ಪರಿ ಅರ್ಥೈಸುವ ವಿಧಾನಗಳು ಜಾನಪದೀಯವಾಗಿರುತ್ತವೆ. ರಾಯಣ್ಣನ ಬಗ್ಗೆ ಸಮೃದ್ಧವಾದ ಮಾಹಿತಿ ಮೌಖಿಕ ಪರಂಪರೆಯಲ್ಲಿದೆ."[೨] ಆದರೆ ಜನರು ರಾಯಣ್ಣನ ತ್ಯಾಗ, ಬಲಿದಾನಗಳನ್ನು ಕತೆ ಕಟ್ಟಿ ಹಾಡಿ ರಾಯಣ್ಣನನ್ನು ಸಾಂಸ್ಕೃತಿಕ ವೀರನನ್ನಾಗಿ ಮಾಡಿದ್ದಾರೆ. ಈ ಜನಪದ ಕತೆಗಳು ರಾಯಣ್ಣನ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಸಹಾಯಕವಾಗುತ್ತವೆ.

ಸಂಗೊಳ್ಳಿ ರಾಯಣ್ಣನ ಕುರಿತು ಇದುವರೆಗೂ ರಚನೆಯಾಗಿರುವ ಜನಪದ ಸಾಹಿತ್ಯವನ್ನು ಗಮನಿಸಿದಾಗ ರಾಯಣ್ಣನ ಬಾಲ್ಯ, ಮನೆತನ, ವೃತ್ತಿ, ಹೋರಾಟ, ದೇಶಪ್ರೇಮ ಮುಂತಾದ ಅಂಶಗಳ ಮೇಲೆ ಪೂರ್ಣ ಮಾಹಿತಿ ದೊರೆಯುವುದು ಜನಪದ ಸಾಹಿತ್ಯದಲ್ಲಿ. ಸಂಗೊಳ್ಳಿ ರಾಯಣ್ಣನ ಕುರಿತು ಇದುವರೆಗೂ ಪ್ರಕಟಗೊಂಡಿರುವ ಹಾಗೂ ಜನರಲ್ಲಿರುವ ಜನಪದ ಸಾಹಿತ್ಯವನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಬೇಕಾಗುತ್ತದೆ.

ರಾಯಣ್ಣ ರಾಜನಾಗಿರಲಿಲ್ಲ ರಾಜನಾಗಬೇಕೆಂಬ ಬಯಕೆಯು ಅವನಲ್ಲಿರಲಿಲ್ಲ. ಆದರೂ ಬ್ರಿಟಿಷರನ್ನು ಭಾರತದಿಂದ, ಕಿತ್ತೂರಿನಿಂದ ಹೊರಹಾಕಿ ಕಿತ್ತೂರು ಸಂಸ್ಥಾನವನ್ನು ಮತ್ತೆ ಸ್ವಾತಂತ್ರ್ಯಗೊಳಿಸಬೇಕು ಹಾಗೂ ದೇಸಾಯಿಯರ ಆಡಳಿತವನ್ನು ಮರಳಿ ತರುವುದಕ್ಕಾಗಿ ಹೋರಾಟವನ್ನು ಮಾಡಿ ನಮ್ಮವರ ಕುತಂತ್ರದಿಂದ ರಾಯಣ್ಣ ಬಲಿಯಾಗುವುದನ್ನು ಕಾಣುತ್ತೇವೆ.

ರಾಯಣ್ಣನ ಹೋರಾಟದ ಚಿತ್ರಣ, ಕಿತ್ತೂರು ಸಂಸ್ಥಾನದ ಚಿತ್ರಣ, ಯುದ್ಧ, ಸ್ವಾತಂತ್ರ್ಯ ಇವುಗಳ ಕುರಿತು ಲಿಖಿತ ಸಾಹಿತ್ಯಕ್ಕಿಂತ ಮೌಖಿಕ ಸಾಹಿತ್ಯದಲ್ಲಿ ಹೆಚ್ಚಾಗಿ ಇರುವುದನ್ನು ಕಂಡುಬರುತ್ತದೆ. ಕಿತ್ತೂರಿಗೆ ಹಾಗೂ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ತ್ರಿಪದಿಗಳು, ಲಾವಣಿಗಳು, ಡೊಳ್ಳು ಪದಗಳು, ಕೋಲಾಟ ಪದಗಳು ರಾಯಣ್ಣನ ಕುರಿತ ಹೊಸ ಇತಿಹಾಸವನ್ನು ತಿಳಿಯಲು ಪ್ರಮುಖ ಆಧಾರಗಳಾಗುತ್ತವೆ ಎಂಬುದನ್ನು ಮರೆಯಬಾರದು.

ಕನ್ನಡ ನಾಡಿನ ಹಾಗೂ ಭಾರತದ ಸ್ವಾತಂತ್ರ್ಯ ಇತಿಹಾಸವನ್ನು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ ವೀರರ ಚರಿತ್ರೆಯನ್ನು ತಿಳಿಯಬೇಕೆಂದರೆ, ಜನಪದ ಸಾಹಿತ್ಯದ ಮೊರೆ ಹೋಗಬೇಕಾಗುತ್ತದೆ. ಜನಪದ ಸಾಹಿತ್ಯವು ವ್ಯಕ್ತಿಯ ಹೋರಾಟದ ಚಿತ್ರಣವನ್ನು ಜನಪದರು ಜನರನ್ನು ಮಂತ್ರಮುಗ್ಧರನ್ನಾಗಿ ಮಾಡಿ ಅವರಲ್ಲಿ ವೀರಾವೇಶದ ಭಾವನೆಯನ್ನು ತುಂಬಿ ಅವರನ್ನು ಹೋರಾಟಕ್ಕೆ ಒಯ್ಯುವ ಶಕ್ತಿ ಸಾಮರ್ಥ್ಯವು ಜನಪದ ಸಾಹಿತ್ಯಕ್ಕೆ ಇರುವುದೆಂದು ಹೇಳಬಹುದು. ನಾಡಿನ ಹಿತಕ್ಕಾಗಿ, ಸ್ವಾತಂತ್ರಕ್ಕಾಗಿ ಹೋರಾಡಿದ ವೀರ ಮಹನೀಯರ ಜೀವನದ ಬಗ್ಗೆ ಜನಪದ ಸಾಹಿತ್ಯದ ಪ್ರಕಾರಗಳಾದ ಲಾವಣಿಗಳು, ತ್ರಿಪದಿಗಳು, ಪದಗಳು, ಡೊಳ್ಳು ಹಾಡುಗಳು, ಕೋಲಾಟದ ಪದಗಳ ಮೂಲಕ ತಿಳಿಯಲು ಸಹಾಯಕವಾಗುತ್ತದೆ.

ಭಾರತೀಯ ಐತಿಹಾಸಿಕ ವೀರಪರಂಪರೆಗೆ ಕಿತ್ತೂರಿನಂತಹ ಸಣ್ಣ ಸಂಸ್ಥಾನದ ಪಾತ್ರ ತುಂಬ ಮಹತ್ವದಾಗಿದೆ. ಬ್ರಿಟಿಷರು ಬರೆದಿರುವ ದಾಖಲೆಗಳಿಂದ ಇತಿಹಾಸವನ್ನು ನೋಡಿದ್ದರಿಂದ ಕಿತ್ತೂರಿನ ಹಾಗೂ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ಸತ್ಯಾಂಶಗಳು ಮರೆಮಾಚಿಹೋದಂತೆ ಕಾಣುತ್ತದೆ. ಕಿತ್ತೂರಿನ ದೇಶಾಭಿಮಾನ, ಸ್ವಾಭಿಮಾನ ಹಾಗೂ ಆತ್ಮಗೌರವ ಮುಂತಾದವುಗಳ ಬಗ್ಗೆ ತಿಳಿಯಲು ದಾಖಲೆಗಳಿಲ್ಲದ್ದಿದ್ದರೂ, ಜಾನಪದಕಾರರು ಮಾತ್ರ ಇವುಗಳನ್ನು ತಮ್ಮ ಕಾರ್ಯಗಳಲ್ಲಿ ಅಂದರೆ ಹಾಡುಗಳ ಮೂಲಕ ರಕ್ತರಂಜಿತಗೊಳಿಸಿದ್ದಾರೆ. ಹಾಗೂ ಆಧುನಿಕ ಸಾಹಿತ್ಯದಲ್ಲಿ ಕತೆ, ಕಾದಂಬರಿ,

ನಾಟಕ, ಕಾವ್ಯ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಕಿತ್ತೂರಿನ ಹಾಗೂ ರಾಯಣ್ಣನಿಗೆ ಸಂಬಂಧಿಸಿದಂತೆ ಚಿತ್ರಣಗಳನ್ನು ಚಿತ್ರಿಸಿರುವುದನ್ನು ಪ್ರಮುಖವಾಗಿ ಗುರುತಿಸಬಹುದು. ರಾಯಣ್ಣನ ಹೋರಾಟದ ಚಿತ್ರಣ, ಕಿತ್ತೂರು ಸಂಸ್ಥಾನದ ಚಿತ್ರಣ, ಯುದ್ಧ, ಸ್ವಾತಂತ್ರ್ಯಯೋಧರ ಮನಸ್ಥಿತಿ ಇವುಗಳ ಕುರಿತು ಲಿಖಿತ ಸಾಹಿತ್ಯಕ್ಕಿಂತ ಮೌಖಿಕ ಸಾಹಿತ್ಯದಲ್ಲಿ ಹೆಚ್ಚಾಗಿ ಇರುವುದನ್ನು ಕಾಣತ್ತೇವೆ. ಕಿತ್ತೂರಿಗೆ ಹಾಗೂ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ಹೇಳಿಕೆಗಳು, ಐತಿಹ್ಯಗಳು, ನಂಬಿಕೆಗಳು, ಕಥೆಗಳು ರಾಯಣ್ಣನ ಕುರಿತ ಹೊಸ ಇತಿಹಾಸವನ್ನು ತಿಳಿಯಲು ಪ್ರಮುಖ ಆಧಾರಗಳಾಗುತ್ತವೆ ಎಂಬುದನ್ನು ಮರೆಯಬಾರದು.

ಕಿತ್ತೂರು ಸಂಸ್ಥಾನ ಹಾಗೂ ರಾಯಣ್ಣನಿಗೆ ಸಂಬಂಧಿಸಿದಂತೆ ಜಾನಪದ ಹಾಗೂ ಲಿಖಿತ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಲವಾರು ಅಧ್ಯಯನಗಳು ನಡೆದಿರುವುದು ಕಂಡುಬರುತ್ತದೆ. ರಾಯಣ್ಣನಿಗೆ ಸಂಬಂಧಿಸಿದಂತೆ ರಾಯಣ್ಣನ ಕಾಲಘಟ್ಟದಲ್ಲಿ ಸಮಕಾಲೀನ ಜನರು ರಾಯಣ್ಣನ ಹೋರಾಟ, ಜೀವನ, ಸಹಾಸವನ್ನು ಕುರಿತು ಕತೆಗಳ ಮೂಲಕ ಹಾಡಿದ್ದಾರೆ. ಮೋದಿನಸಾಬ, ಹೆಬ್ಬಳ್ಳಿಯ ಬಸವ ಕವಿ, ನೇಸರಿಗೆಯ ಚೌಬಾರಿ ಅಡಿವೆಪ್ಪಗೌಡ, ಸಂಗೊಳ್ಳಿಯ ಬಡಿಗ್ಯಾ ಹಾಗೂ ಶಾಹೀರ ಶ್ಯಾಮರಾಮ ಮುಂತಾದವರು ಲಾವಣಿಗಳನ್ನು ರಚಿಸಿದ್ದಾರೆ. ಇದರ ಜೊತೆಗೆ ಆಧುನಿಕ ಸಾಹಿತ್ಯ ಪ್ರಕಾರಗಳಾದ ನಾಟಕ, ಕತೆ, ಕಾದಂಬರಿಗಳು ರಚನೆಯಾಗಿರುವುದನ್ನು ಗಮನಿಸಬಹುದು. ಆದರೆ ರಾಯಣ್ಣನ ಕುರಿತು ಹೆಚ್ಚಿನ ಮಾಹಿತಿಗಳು ದೊರೆಯುವುದು ಜನಪದ ಸಾಹಿತ್ಯದಲ್ಲಿ ಮಾತ್ರ.

**೫.೧. ಲಾವಣಿಗಳು**

ಪ್ರಾಚೀನ ಕಾಲದಿಂದಲೂ ಕನ್ನಡ ಸಾಹಿತ್ಯ ಬಹುಮುಖ, ಬಹುವಿಭಾಗಿಯ ಕ್ರಮ ಹಾಗೂ ಬಹುಮಜಲುಗಳಿಂದ ಬೆಳವಣಿಗೆಯನ್ನು ಹೊಂದುತ್ತಾ ಬರುತ್ತಿರುವುದನ್ನು ಕಾಣುತ್ತೇವೆ. ಪ್ರಾಚೀನ ಕನ್ನಡ ಭಾಷೆಗೆ ಸಂಸ್ಕೃತ, ಪ್ರಾಕೃತ ಭಾಷೆಗಳು ಹಾಗೂ ಆಧುನಿಕ ಕಾಲದಲ್ಲಿ ಇಂಗ್ಲಿಷ್, ಮರಾಠಿ, ಹಿಂದಿ ಮುಂತಾದ ಭಾಷೆಗಳು ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ಮಾನವ ಬರವಣಿಗೆಯನ್ನು ಕಲಿಯುವುದಕ್ಕಿಂತ ಮೊದಲು ಯಾವುದೇ ಒಂದು ಘಟನೆಯನ್ನು, ಸಂದರ್ಭವನ್ನು, ಒಬ್ಬ ವ್ಯಕ್ತಿಯನ್ನು ಪರಿಚಯಿಸಲು ಕಥೆಯ ಮೂಲಕ ಹೇಳತೊಡಗಿದರು. ರಾಮಾಯಣ, ಮಹಾಭಾರತ ಮುಂತಾದುವುಗಳು ಇದಕ್ಕೆ ನಿದರ್ಶನಗಳಾಗಿವೆ. ಭಾಷೆಯು ಬರವಣಿಗೆಗೆ ಬಂದ ಎಷ್ಟೋ ವರ್ಷಗಳ ನಂತರ ಕಥೆಗಳ ರೂಪದಲ್ಲಿ ಇರುವಂತವುಗಳನ್ನು ಬರವಣಿಗೆಯ ರೂಪದಲ್ಲಿ ತರುವಂತಹ ಪ್ರಯತ್ನವನ್ನು ಇಂದಿಗೂ ಮಾಡುತ್ತಿರುವುದನ್ನು ಕಾಣುತ್ತೇವೆ. ಯಾವುದೇ ಒಂದು ಭಾಷೆಯಲ್ಲಿ ಮೌಖಿಕ ಸಾಹಿತ್ಯದ ಪಾತ್ರ ಮುಖ್ಯವಾಗಿರುತ್ತದೆ. ಪ್ರತಿಯೊಂದು ಭಾಷೆಗಳು ತನ್ನದೇ ಆದಂತಹ ಮೌಖಿಕ ಸಾಹಿತ್ಯವನ್ನು ಹೊಂದಿರುತ್ತದೆ. ಮೌಖಿಕ ಸಾಹಿತ್ಯದಲ್ಲಿ ಗೀತೆ, ಲಾವಣಿ, ಗಾದೆ, ಒಗಟು, ಒಡಪು, ಮುಂತಾದವುಗಳನ್ನು ಕಾಣಬಹುದು. ಕನ್ನಡ ಜನಪದ ಸಾಹಿತ್ಯದಲ್ಲಿ ಲಾವಣಿ ಸಾಹಿತ್ಯವು

ವಿಶಿಷ್ಟವಾದ ಪ್ರಕಾರವಾಗಿದೆ. ಜನಪದರು ತಮ್ಮ ಬದುಕಿನಲ್ಲಿ ನಡೆದ, ನೋಡಿದ ಘಟನೆಗಳನ್ನು ಕಾವ್ಯಾತ್ಮಕವಾಗಿ ಹೇಳಿಕೊಂಡು ಬಂದಿದ್ದಾರೆ.

ಕನ್ನಡದಲ್ಲಿ ಲಾವಣಿ ಎನ್ನುವಂತಹ ಪದ ಬಹು ಹಿಂದಿನಿಂದಲೂ ಬಳಕೆಯಲ್ಲಿರುವುದನ್ನು ಕಾಣಬಹುದು. ಚಾರಿತ್ರಿಕ ರೂಪ ಪಡೆದ ಜಾನಪದ ಪ್ರಕಾರಗಳಲ್ಲಿ ಲಾವಣಿಯು ಒಂದು. ಲಾವಣಿ ಹೆಸರನ್ನು ಕೇಳಿದ ಕೂಡಲೆ ಕಥಾರೂಪದ ಪ್ರಕಾರವೆಂದು ತಿಳಿಯುತ್ತದೆ. ಮರಾಠಿಯ ಪವಾಡ ಎನ್ನುವುದರಿಂದ ಲಾವಣಿ ಪದ ಬಂದಿದೆ. ಇಂಗ್ಲಿಷ್‌ನ ಬ್ಯಾಲೆಡ್ಡ್‌ಗೆ ಸಂವಾದಿಯಾಗಿ ಕನ್ನಡದಲ್ಲಿ ಲಾವಣಿಯನ್ನು ಬಳಸುತ್ತಾರೆ. ಅದು ಚಿಕ್ಕ ಚಿಕ್ಕ ಕಥೆಯನ್ನೊಳಗೊಂಡ ರೋಮಾಂಚಕಾರಿ ಕಥನವೆಂದು ಹೇಳಿದ್ದಾರೆ. ಲಾವಣಿ ಎಂಬ ಪದವು ಲಾವಣ್ಯದಿಂದ ಬಂದಿದೆ. ಮೊದಮೊದಲು ಹೆಣ್ಣಿನ ಸೌಂದರ್ಯದ ಬಗ್ಗೆ ಹೇಳುತ್ತಿದ್ದಂತಹ ಲಾವಣಿಗಳು ಕಾಲಾಂತರದಲ್ಲಿ ಎಲ್ಲಾ ಘಟನೆಗಳನ್ನು ಕುರಿತು ಹೇಳುವುದಕ್ಕೆ ಬಳಸಿಕೊಂಡಿರುವುದನ್ನು ಕಾಣುತ್ತೇವೆ. ಭಾರತದಲ್ಲಿ ಲಾವಣಿಗಳು ಮೊದಲು ಮರಾಠರ ಆಡಳಿತದಲ್ಲಿ ಸೈನಿಕರನ್ನು ಮನರಂಜಿಸುವ ಸಾಧನವಾಗಿ ಲಾವಣಿಗಳನ್ನು ಹಾಡುತ್ತಿದ್ದರು. ಹಾಡುಗಳ ಕುಣಿತದ ಶೃಂಗಾರದ ಕತೆಗಳನ್ನು ಹೇಳುತ್ತಾ ಬಳಕೆಯಾಗುತ್ತಾ ಬಂದಿರುವುದನ್ನು ಕಾಣುತ್ತೇವೆ. ವೀರರಸ ಪ್ರಧಾನವಾದ ಲಾವಣಿಗಳು ಶೃಂಗಾರದೊಂದಿಗೆ ಬೆರೆತು ಮುಂದುವರೆದುಕೊಂಡು ಬಂದವು. ಲಾವಣಿಗಳು ಕಥನಗೀತೆ ಪ್ರಕಾರಕ್ಕೆ ಸೇರಿದವುಗಳಾಗಿವೆ. ಲಾವಣಿಗಳಿಗೆ ಜನಪದ ಸಾಹಿತ್ಯದಲ್ಲಿ ತುಂಬ ಮಹತ್ವದ ಸ್ಥಾನವಿದೆ. ಲಾವಣಿಗಳನ್ನು ಹರದೇಶಿ–ನಾಗೇಶಿ, ಕಲ್ಗಿ–ತುರಾ ಮುಂತಾದ ಹೆಸರುಗಳಿಂದ ಕರೆಯುತ್ತೇವೆ. ಲಾವಣಿಗಳು ಹೆಚ್ಚಾಗಿ ಉತ್ತರ ಕರ್ನಾಟಕದಲ್ಲಿ ಪ್ರಚಲಿತವಾಗಿರುವುದನ್ನು ಕಾಣುತ್ತೇವೆ. ಲಾವಣಿಗಳಲ್ಲಿ ಪ್ರಮುಖವಾಗಿ ಹೆಣ್ಣಿನ ಸೌಂದರ್ಯ, ಚರಿತ್ರೆ, ಪುರಾಣ, ನೀತಿ, ತತ್ವ, ಪ್ರೇಮ, ಕಾಮ ಮುಂತಾದ ಅಂಶಗಳು ಒಳಗೊಂಡಿರುತ್ತವೆ. ನಿಂಗಣ್ಣ ಸಣ್ಣಕ್ಕಿ ಅವರು ಬರೆದಿರುವಂತಹ 'ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ' ಎಂಬ ಕೃತಿಗೆ ಎಂ.ಎಸ್. ಸುಂಕಾಪುರ ಅವರು ಬರೆದಿರುವ ಮುನ್ನುಡಿಯಲ್ಲಿ ಲಾವಣಿಗಳ ಕಥಾವಸ್ತುವನ್ನು ದೃಷ್ಟಿಯಲ್ಲಿಟ್ಟುಕೊಂಡು ಶೃಂಗಾರ ಲಾವಣಿಗಳು, ವೀರಲಾವಣಿಗಳು, ಕಥಾನಕ ಲಾವಣಿಗಳು, ತತ್ವನೀತಿ ಲಾವಣಿಗಳು ಮತ್ತು ಸಂವಾದ ಲಾವಣಿಗಳು ಎಂದು ಗುರುತಿಸಿದ್ದಾರೆ.

ಲಾವಣಿಯಲ್ಲಿ ಇರುವಂತಹ ಭಾಷೆಯು ಸರಳವಾಗಿರುತ್ತದೆ. ಜನರು ಪ್ರತಿನಿತ್ಯ ಬಳಸುವಂತಹ ಆಡು ಭಾಷೆಯಲ್ಲಿ ಲಾವಣಿಗಳು ರಚನೆಯಾಗಿರುವುದರಿಂದ ಎಲ್ಲರಿಗೂ ತಿಳಿಯುವಂತವುಗಳಾಗಿರುತ್ತವೆ. ಜನರಿಗೆ ತಿಳಿಯುವಂತಹ ಮಾಧ್ಯಮಗಳಲ್ಲಿ ಲಾವಣಿ ಕೂಡ ಒಂದಾಗಿದೆ. ಸಾಮಾಜಿಕ ವಸ್ತುಗಳನ್ನು ಬಳಸಿಕೊಂಡು ಲಾವಣಿಗಳು ವೀರರಸ ಪ್ರಧಾನವಾಗಿದ್ದು ಚಾರಿತ್ರಿಕತೆಗೆ ಹೆಚ್ಚು ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ಚಾರಿತ್ರಿಕ ಲಾವಣಿಗಳು ಒಬ್ಬ ವ್ಯಕ್ತಿಯ, ಸಮುದಾಯದ, ಸಮಾಜದ, ಜಾತಿಯ,

ಶೋಷಿತ, ಶೋಷಣೆಯ, ಸ್ವಾತಂತ್ರ್ಯದ, ದೇಶಪ್ರೇಮದ, ಸ್ವಾಭಿಮಾನ ಮೊದಲಾದ ಅಂಶಗಳನ್ನು ತಿಳಿಯಲು ಲಾವಣಿಗಳು ಸಹಾಯಕವಾಗುತ್ತವೆ. ಜಾನಪದ ಸಾಹಿತ್ಯದ ಮೂಲಕ ನಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಕಟ್ಟಿಕೊಡುವಲ್ಲಿ ಲಾವಣಿಗಳು ಸಹಾಯಕವಾಗುತ್ತವೆ. ಸಮಾಜದ ಬಹುಪಾಲು ಗಮನವನ್ನು ಸೆಳೆಯುವ ಸಾಮಾನ್ಯ ಅಭಿರುಚಿಯ ವಸ್ತುಗಳನ್ನುಳ್ಳ ಹಾಡುಗಳು ಇಂದಿಗೂ ಹಾಡಿಸಿಕೊಳ್ಳುತ್ತಿವೆ.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಲಾವಣಿಗಳು ವಹಿಸಿದ ಪಾತ್ರ ಅಮೂಲ್ಯವಾದುದ್ದಾಗಿದೆ. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದಂತಹ ವೀರರ ಕಥೆಗಳನ್ನು ಲಾವಣಿಗಳ ಮೂಲಕ ಹೇಳುತ್ತಾ ಚಾರಿತ್ರಿಕತೆಯನ್ನು ಕಟ್ಟಿಕೊಡುತ್ತಿವೆ. ಸ್ವಾತಂತ್ರ್ಯಕ್ಕಾಗಿ ಹೋರಾಡಿ ವೀರಮರಣವನ್ನು ಹೊಂದಿದಂತಹ ವೀರರು ಲಾವಣಿಗಳ ವಸ್ತುವಾದರು. ಅಂಥವರಲ್ಲಿ ಸಿಂಧೂರ ಲಕ್ಷ್ಮಣ, ಸಂಗೊಳ್ಳಿ ರಾಯಣ್ಣನಂತವರು ಪ್ರಮುಖರು. ಸಾಮ್ರಾಜ್ಯಶಾಹಿಯ ವಿರುದ್ಧ ಹಾಗೂ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಇಂತಹ ಅನೇಕ ಹೋರಾಟಗಾರರು ಲಾವಣಿಗಳ ನಾಯಕರಾಗಿದ್ದಾರೆ. ಸ್ವಾತಂತ್ರ್ಯ ನಂತರದ ಕಾಲದಲ್ಲಿ ಐತಿಹಾಸಿಕ ಜನಪದ ಹಾಡುಗಳನ್ನು ಹಾಗೂ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸಿ ಅಧ್ಯಯನ ಮಾಡಿದವರಲ್ಲಿ ಪಿ.ಕೆ. ರಾಜಶೇಖರ ಮತ್ತಿಘಟ್ಟ ಕೃಷ್ಣಮೂರ್ತಿ, ಕ್ಯಾತನಹಳ್ಳಿ ರಾಮಣ್ಣ ಮುಂತಾದವರನ್ನು ಗುರುತಿಸಬಹುದು. ಸಂಗೊಳ್ಳಿ ರಾಯಣ್ಣನ ಸಮಕಾಲದಲ್ಲಿಯೇ ಸಂಗ್ರಹಿಸಿದಂತಹ ಹಾಡುಗಳೆಂದರೆ, ಫ್ಲೀಟ್ ಅವರು ಸಂಗ್ರಹಿಸಿದವುಗಳು. ರಾಯಣ್ಣನ ಕುರಿತು ಇದ್ದಂತಹ ಜನಪದ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸಿ, ಬ್ರಿಟಿಷರ ಬಗ್ಗೆ ಜನರಲ್ಲಿ ಇದ್ದಂತಹ ಅಭಿಪ್ರಾಯಗಳನ್ನು ಸಂಗ್ರಹಿಸುವುದಕ್ಕಾಗಿ ಮಾಡಿರಬಹುದಾದರೂ ಈ ಕಾರ್ಯ ಭಾರತೀಯರಲ್ಲಿ ಜಾಗೃತಿಯನ್ನು ಮೂಡಿಸುವಂತಹದ್ದು.

ಲಾವಣಿಗಳಲ್ಲಿ ಕೇವಲ ಘಟನೆಗಳು ಮಾತ್ರ ದಾಖಲಾಗಿರದೆ, ಸಾಂಸ್ಕೃತಿಕ ಸಂಗತಿಗಳನ್ನು ಒಳಗೊಂಡಿರುತ್ತದೆ. ಹಾಗೂ ಅವುಗಳ ಪ್ರಭಾವದಿಂದ ಭಾವನೆಗಳನ್ನು ಧ್ವನಿಸುತ್ತದೆ. ಇದರಿಂದಲೇ ಐತಿಹಾಸಿಕ ಘಟನೆಗಳನ್ನು ಜನತೆಯು ಗತಿಸಿಹೋದ ಸಂಗತಿಗಳು ಎಂದು ಪರಿಭಾವಿಸದೆ ಹೆಮ್ಮೆಯ ಸಂಕೇತವಾಗಿ ಪ್ರಸ್ತುತವಾಗಿಸಿಕೊಳ್ಳುವ ಕ್ರಿಯೆ ನಿರಂತರವಾಗಿ ನಡೆಯುತ್ತಿರುತ್ತದೆ. ಎಂದು ಬೆಳವಾಡಿ ಮಂಜುನಾಥ್ ಅವರು ಲಾವಣಿಗಳ ಚಾರಿತ್ರಿಕ ಮಹತ್ವದ ಕುರಿತಂತೆ ಈ ಮಾತುಗಳು ಪ್ರಸ್ತುತವೆನಿಸುತ್ತವೆ. ನಾಡಿಗಾಗಿ ತಮ್ಮ ಪ್ರಾಣವನ್ನೇ ಬಲಿದಾನ ನೀಡಿದಂತಹ ಅನೇಕ ವೀರರ ಕತೆ ವೀರಕಾವ್ಯವಾಗಿ ಮಾನ್ಯವಾಗುತ್ತದೆ. ಲಾವಣಿಗಳು ದುರಂತ ಕಾವ್ಯಗಳ ಲಕ್ಷಣಗಳನ್ನು ಒಳಗೊಂಡಿದ್ದರೂ ಇತಿಹಾಸ ರಚನೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ.

"ಲಾವಣಿ ಪ್ರಪಂಚದಲ್ಲಿ ಶೃಂಗಾರ ಮತ್ತು ಸಾಮಾಜಿಕ ಕಥಾವಸ್ತುಗಳಿಂದ ಕೂಡಿದ ಲಾವಣಿಗಳಿಗಿಂತ ಹೆಚ್ಚು ಪ್ರಭಾವ ಬೀರಿದಂತವು. ವೀರರಸ ಪ್ರಧಾನವಾದ ಲಾವಣಿಗಳು. ನಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಜಾನಪದದ ಮೂಲಕ ನಿರ್ವಹಿಸುವ ತುರ್ತೊಂದು ಸ್ವಾತಂತ್ರ್ಯ

ಸಂದರ್ಭದಲ್ಲಿ ಉಂಟಾಯಿತು. ಹೀಗಾಗಿ ರಾಷ್ಟ್ರೀಯ ಹೋರಾಟ ಸಂದರ್ಭವಂತೂ ಲಾವಣಿ ಜನಪದ ಸಾಹಿತ್ಯದ ಪ್ರಕಾರಗಳಲ್ಲಿ ಹೆಚ್ಚುಗಾರಿಕೆಯನ್ನು ತಂದುಕೊಟ್ಟಿತು. ವ್ಯಕ್ತಿ ಮತ್ತು ಸಮಾಜ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರ-ಶೂರರ ಕಥಾನಕಗಳು ಈ ಸಂದರ್ಭದ ಪ್ರಮುಖ ಆಕರ್ಷಣೆಗಳಾದವು. ಪೌರಾಣಿಕ ಪಾತಾಳಿಯಿಂದ ಐತಿಹಾಸಿಕ ಪಾತಳಿಯತ್ತ ಇಲ್ಲಿನ ಲಾವಣಿಗಳು ಚಲನಗೊಂಡವು. ತನ್ನ ಜನರ ಸ್ವಾತಂತ್ರ್ಯಕ್ಕಾಗಿ ಅವರ ಬದುಕಿನ ಭವ್ಯತೆಗಾಗಿ ಹೋರಾಡಿ ಮಡಿದ ಸಾಂಸ್ಕೃತಿಕ ವೀರರು ಹಾಡಿನ ವಸ್ತುವಾದರು. ಸಿಂಧೂರ ಲಕ್ಷ್ಮಣ, ಸಂಗೊಳ್ಳಿ ರಾಯಣ್ಣನಂತಹ ಹುಲಿಗಳು ಏಕಕಾಲಕ್ಕೆ ನಾಡಿನ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಹೋರಾಡಬೇಕಿತ್ತು. ಚಳುವಳಿಯನ್ನು ಸಂಘಟಿಸಬೇಕಿತ್ತು. ಅದೇ ವೇಳೆಗೆ ತಾನು ಬದುಕುತ್ತಿರುವ ವಾತಾವರಣದಲ್ಲಿದ್ದ ಸಾಮಾಜಿಕ ಅಸಮಾನತೆಯ ವಿರುದ್ಧವೂ ಹೋರಾಡಬೇಕಿತ್ತು. ಅಲಕ್ಷಿತ ವರ್ಗದಿಂದ ಬಂದ ಈ ಇಬ್ಬರೂ ಶೂರರು ದೇಶಿ ಮತ್ತು ಸ್ವದೇಶಿ ಪಾರತಂತ್ರದ ವಿರುದ್ಧ ಕತ್ತಿ ಮಸೆದರು. ಕೊನೆಗೆ ಸ್ಥಾಪಿತ ಹಿತಾಸಕ್ತಿಗಳ ಕೈವಾಡದಿಂದ ಕತ್ತರಿಸಲ್ಪಟ್ಟರು."[೩] ಸ್ವಾತಂತ್ರ್ಯ ಚಳುವಳಿ ಹಾಗೂ ಸಾಮಾಜಿಕ ಅಸಮಾನತೆಯನ್ನು ಕುರಿತಂತೆ ಲಾವಣಿಗಳು ತಿಳಿಸುತ್ತವೆ.

ಸಮಕಾಲೀನ ಆಳರಸರ ಹೇಳಿಕೆಯ ವಿರುದ್ಧ ಪ್ರತಿಭಟಿಸುವ, ಹೋರಾಡುವ ವೀರರ ವಸ್ತು ವಿಷಯಗಳನ್ನಿಟ್ಟುಕೊಂಡು ಹಾಡುಗಳನ್ನು ರಚಿಸುವ ಧೈರ್ಯ ಜನಪದ ಕವಿಗಳಿಗೆ ಇರುತ್ತದೆ. ರಾಯಣ್ಣನ ಕುರಿತು ರಚಿಸಿರುವಂತಹ ಹೆಚ್ಚು ಜನಪದ ಸಾಹಿತ್ಯವು ಅವನ ಸಮಕಾಲೀನರಿಂದಲೇ ರಚನೆ ಮಾಡಿರುವುದನ್ನು ಕಾಣುತ್ತೇವೆ. ರಾಯಣ್ಣನ ಕುರಿತು ಲಾವಣಿ ರಚಿಸಿದವರಲ್ಲಿ ಹೆಬ್ಬಳ್ಳಿಯ ಬಸವ ಕವಿ, ಶಾಹೀರ ಶಾಮರಾವ, ಸಂಗೊಳ್ಳಿಯ ಬಡಿಗ್ಯಾ ಮತ್ತು ನೇಸರಗಿಯ ಚೌಬರಿ ಅಡಿವೆಪ್ಪ ಗೌಡ ಮುಂತಾದವರು ರಾಯಣ್ಣನ ಕಾಲದಲ್ಲಿ ಲಾವಣಿಗಳನ್ನು ರಚಿಸಿರುವುದನ್ನು ಕಾಣಬಹುದು. ಇವರ ಕೃತಿಗಳಿಗೆ ಹೆಚ್ಚಿನ ಮಹತ್ವವಿದೆ. ಜೊತೆಗೆ ಐತಿಹಾಸಿಕ ಮಹತ್ವವೂ ಸಹ ಇದೆ.

ಕಿತ್ತೂರು ಬ್ರಿಟಿಷರ ವಶವಾದ ನಂತರ ಸಂಗೊಳ್ಳಿ ರಾಯಣ್ಣ ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸಲು ಹಾಗೂ ಬ್ರಿಟಿಷರನ್ನು ಹೊರಹಾಕಲು ಹೋರಾಟ ಮಾಡುತ್ತಾನೆ. ಸೆರೆಮನೆಯಿಂದ ಬಿಡುಗಡೆಹೊಂದಿ ಸಂಗೊಳ್ಳಿಗೆ ಬಂದ ನಂತರ ಆಡಳಿತದಲ್ಲಾದ ಬದಲಾವಣೆ, ಕಿತ್ತೂರು ಸಂಸ್ಥಾನದ ನೆನಪು, ರಾಣಿ ಚೆನ್ನಮ್ಮಳನ್ನು ಬಂಧನದಿಂದ ಮುಕ್ತಗೊಳಿಸಿ ಮತ್ತೆ ಅಧಿಕಾರಕ್ಕೆ ತರಬೇಕೆಂದು ಮನಸ್ಸಿನಲ್ಲಿ ಅಂದುಕೊಂಡಿದ್ದನು. ಸ್ವಾತಂತ್ರ್ಯ, ಸ್ವಾಭಿಮಾನ, ನಾಡಪ್ರೇಮಿಯಾದ ಸಂಗೊಳ್ಳಿ ರಾಯಣ್ಣ ಹೋರಾಟಕ್ಕೆ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾನೆ.

ಸಂಗೊಳ್ಳಿ ರಾಯಣ್ಣನ ಗೆಳೆಯರಾದ ಚನ್ನಬಸವ ಹಾಗೂ ವಡ್ಡರ ಯಲ್ಲಣ್ಣ ಇವರು ಮುಂದೆ ಹೋರಾಟ ಮಾಡಬೇಕೆಂಬುದನ್ನು ಹೇಳಿದಾಗ ವಾಲೀಕಾರಿಕೆಯ ಜೊತೆ-ಜೊತೆಗೆ

ಹೋರಾಟದ ಸಿದ್ಧತೆಗಳನ್ನು ಮಾಡಿಕೊಳ್ಳಬೇಕೆಂದು ಹೇಳಿದರು. ಸಂಗೊಳ್ಳಿ ರಾಯಣ್ಣ ವಾಲೀಕಾರಿಕೆಯನ್ನು ಮಾಡಲು ಮನಸ್ಸಿಲ್ಲದಿದ್ದರೂ ಸಹ ಗೆಳೆಯರು ಸೂಚಿಸಿದ ಸಲಹೆಗಳ ಮೇರೆಗೆ ಒಪ್ಪಿಕೊಂಡು ವಾಲೀಕಾರಿಕೆಯನ್ನು ಮುಂದುವರೆಸುತ್ತಾನೆ. ಇದರ ಜೊತೆಗೆ ಸಂಗೊಳ್ಳಿಯ ಯುವಕರನ್ನು ಒಂದೆಡೆ ಗರಡಿ ಮನೆಯಲ್ಲಿ ಸೇರಿಸಿ ಯುದ್ಧಾಭ್ಯಾಸ ಹಾಗೂ ಕಿತ್ತೂರು ದಾಸ್ಯದಲ್ಲಿರುವುದನ್ನು ಹಾಗೂ ಕಿತ್ತೂರು ಬ್ರಿಟಿಷರಿಂದ ಸ್ವತಂತ್ರಗೊಳಿಸಬೇಕೆಂದು ಜನರಿಗೆ ತಿಳಿಸತೊಡಗುತ್ತಾನೆ. ಹೀಗೆ ಸಂಗೊಳ್ಳಿ ರಾಯಣ್ಣನು ಜನತೆಯಲ್ಲಿ ನಾಡ ಪ್ರೇಮವನ್ನು ಹಾಗೂ ಸಂಘಟನೆಯನ್ನು ಮಾಡತೊಡಗುತ್ತಾನೆ. ಹೋರಾಟಕ್ಕೆ ಬೇಕಾದ ಶಸ್ತ್ರಾಸ್ತ್ರಗಳನ್ನು ಗೋಕಾಕ್ ಬಳಿಯ ಉದಗಟ್ಟಿಯ ರೈತ ಬಸಣ್ಣನ ಮನೆಯಲ್ಲಿ ಸಂಗ್ರಹ ಮಾಡತೊಡಗುತ್ತಾನೆ.

ರಾಯಣ್ಣ ಹೋರಾಟದ ಸಿದ್ಧತೆಗಳು ಮಾಡುತ್ತಿರುವುದನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಸಂಗೊಳ್ಳಿ ಕುಲಕರ್ಣಿ, ರಾಯಣ್ಣನಿಗೆ ಕೆಲಸಗಳನ್ನು ಹೆಚ್ಚಾಗಿ ಹೇಳತೊಡಗಿದ. ಬ್ರಿಟಿಷರ ಆಡಳಿತ ಬಂದ ನಂತರ ಗ್ರಾಮಗಳಲ್ಲಿ ಇವರೆ ರಾಜರಂತೆ ನಡೆದುಕೊಳ್ಳತೊಡಗಿದರು. ಕುಲಕರ್ಣಿ ರಾಯಣ್ಣನ್ನು ಕಂಡರೆ ಸಿಡಿಮಿಡಿಗೊಳ್ಳುತ್ತಿದ್ದ. ರಾಯಣ್ಣನನ್ನು ತನ್ನ ಹಿಡಿತದಲ್ಲಿಡಲು ಪ್ರಯತ್ನಿಸುತ್ತಿದ್ದ. ಆದರೆ ಸ್ವಾಭಿಮಾನಿಯಾದ ರಾಯಣ್ಣ ಆತನಿಗೆ ಸರಿಯೆನಿಸಿದ ಕೆಲಸಗಳನ್ನು ಮಾಡುತ್ತಿದ್ದ.

ಬ್ರಿಟಿಷರು ಕಿತ್ತೂರನ್ನು ವಶಪಡಿಸಿಕೊಂಡ ನಂತರ ತಮ್ಮ ನೀತಿಗಳನ್ನು ಕಿತ್ತೂರಿನಲ್ಲಿ ಜಾರಿಗೆ ತಂದರು. ಅಂತಹವುಗಳಲ್ಲಿ ಜಮೀನಿನ ಅಳತೆಯು ಒಂದು. ಕುಲಕರ್ಣಿಗಿಂತ ರಾಯಣ್ಣನಿಗೆ ಆಸ್ತಿ ಹೆಚ್ಚಾಗಿದ್ದರಿಂದ ಕುಲಕರ್ಣಿಗೆ ರಾಯಣ್ಣನನ್ನು ಕಂಡರೆ ಅಸೂಯೆ ಪಡುತ್ತಿದ್ದ. ಜಮೀನಿನ ಅಳತೆಯ ನಂತರ ಅಳತೆಗಿಂತ ಹೆಚ್ಚಾಗಿ ಇರುವುದಕ್ಕೆ ೩೨ ರೂಪಾಯಿಗಳನ್ನು ಕಂದಾಯ ಕೊಡಬೇಕೆಂದು ಹೇಳುತ್ತಾನೆ. ಆಗ ರಾಯಣ್ಣ ನಾವು ಇದುವರೆಗೂ ಕಂದಾಯವನ್ನು ಕೊಟ್ಟಿಲ್ಲ ಈಗಲೂ ಕೊಡುವುದಿಲ್ಲವೆಂದು ಹೇಳುತ್ತಾನೆ.

೧೮೨೪ರಲ್ಲಿ ಕಿತ್ತೂರು ಪತನವಾದ ನಂತರ ರಾಯಣ್ಣ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಬೇಕು, ದೇಸಾಯಿಯವರ ಆಡಳಿತವನ್ನು ಮರಳಿ ಸ್ಥಾಪಿಸಬೇಕು ಹಾಗೂ ಬ್ರಿಟಿಷರ ವಿರುದ್ಧ ಹೋರಾಟ ಮಾಡುವುದಕ್ಕೆ ಸಿದ್ಧತೆಗಳನ್ನು ಮಾಡಿಕೊಂಡು ಬ್ರಿಟಿಷರ ವಶದಲ್ಲಿದ್ದಂತಹ ಒಂದೊಂದೇ ಕಚೇರಿಗಳ ಮೇಲೆ ದಾಳಿ ಮಾಡಿ, ಬ್ರಿಟಿಷರ ನಿದ್ದೆಗೆಡಿಸುತ್ತಾನೆ. ಕಿತ್ತೂರಿನ ಜನರಲ್ಲಿ ಸ್ವಾತಂತ್ರ್ಯ, ಸ್ವಾಭಿಮಾನ, ದೇಶಾಭಿಮಾನ, ಕಿತ್ತೂರಿನ ಬಗ್ಗೆ ಜಾಗೃತಿಯನ್ನು ಮೂಡಿಸಿ, ಜನರು ಹೋರಾಟದಲ್ಲಿ ಭಾಗವಹಿಸುವಂತೆ ಮಾಡಿ, ಬ್ರಿಟಿಷರಿಗೆ ಸಿಂಹ ಸ್ವಪ್ನವಾಗುತ್ತಾನೆ. ಕಿತ್ತೂರಿನ ಸುತ್ತಮುತ್ತಲಿನ ಪ್ರದೇಶದ ಜನರನ್ನು ಕುರಿತು ಬ್ರಿಟಿಷ್ ಅಧಿಕಾರಿಯು ಆ ಭಾಗದ ಗ್ರಾಮದ ಶೇತ್ ಸನದಿಗಳು ಹಮಾಲ್ದಾರರಿಗೆ ಬಂಡಾಯಗಾರರ ವಿರುದ್ಧ ಏನು ಸಹಾಯ ನೀಡಲಿಲ್ಲ. ಅವರು ಬಂಡಾಯಗಾರರ ಜೊತೆ ಸಹಕರಿಸಿ ಅವರಿಗೆ ಮಾಹಿತಿ ನೀಡುತ್ತಾರೆ. ಕಿತ್ತೂರು ನಾಡಿನ ಪ್ರಜೆಗಳಾಗಿದ್ದವರೆಲ್ಲರೂ

ಹೀಗೆ ಮಾಡುತ್ತಾರೆ ಎಂದು ವರದಿಯನ್ನು ಮಾಡಿದ್ದಾನೆ. ರಾಯಣ್ಣನು ಮಾಡುತ್ತಿದ್ದಂತಹ ಹೋರಾಟದಲ್ಲಿ ಕಿತ್ತೂರಿನ ಜನರು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ರಾಯಣ್ಣನಿಗೆ ಸಹಾಯವನ್ನು ಮಾಡುತ್ತಿದ್ದರು. ರಾಯಣ್ಣನು ದಾರಿತಪ್ಪಿಸಲು ಜನರಿಗೆ ತಿಳಿಸಿದ ಸ್ಥಳಕ್ಕೆ ಹೋಗದೆ, ಬೇರೆ ಸ್ಥಳಕ್ಕೆ ಹೋಗಿ ದಾಳಿ ಮಾಡುತ್ತಿದ್ದನು. ಕಿತ್ತೂರಿನ ಜನರು ರಾಯಣ್ಣನನ್ನು ಪ್ರೀತಿಯಿಂದ ಸತ್ಕರಿಸಿ ಹೋರಾಟಕ್ಕೆ ತಮ್ಮ ಬೆಂಬಲವನ್ನು ವ್ಯಕ್ತಪಡಿಸುತ್ತಿದ್ದರು.

ರಾಯಣ್ಣನನ್ನು ಬ್ರಿಟಿಷರು ನೇರವಾಗಿ ಹಿಡಿಯಲಾಗದೆ ಭಾರತದಾದ್ಯಂತ ನಡೆಸಿದ ಕುತಂತ್ರ ನೀತಿಯನ್ನು ಕಿತ್ತೂರಿನಲ್ಲೂ ಹಾಗೂ ರಾಯಣ್ಣನನ್ನೂ ಹಿಡಿಯುವಾಗ ಇದೇ ನೀತಿಯನ್ನು ಮತ್ತೊಮ್ಮೆ ಪ್ರಯೋಗಿಸುತ್ತಾರೆ. ಭಾರತದಲ್ಲಿ ಬ್ರಿಟಿಷರ ಆಡಳಿತ ಅಥವಾ ಅಧಿಕಾರವನ್ನು ಪಡೆದ ರೀತಿಯನ್ನು ಹಾಗೂ ಪಡೆದ ನಂತರದ ಬ್ರಿಟಿಷರ ನೀತಿಗಳು ಯಾವ ರೀತಿಯಲ್ಲಿ ನಮ್ಮ ಸ್ವತಂತ್ರವನ್ನು ಕಸಿದುಕೊಂಡದ್ದು, ನಮ್ಮವರಿಂದಲೇ ಎನ್ನುವುದನ್ನು ನಾವು ಎಂದಿಗೂ ಮರೆಯಬಾರದು. ಲಿಂಗನಗೌಡ ಮತ್ತು ವೆಂಕನಗೌಡರು ರಾಯಣ್ಣನ ಜೊತೆ ಸೇರಿ ಕಪಟ ನಾಟಕವಾಡುತ್ತಾ, ಮೋಸದಿಂದ ರಾಯಣ್ಣನನ್ನು ಹಿಡಿದು ಕೊಡುತ್ತಾರೆ. ನಂತರ ಬ್ರಿಟಿಷರು ವಿಚಾರಣೆಯ ನಾಟಕವಾಡಿ ಗಲ್ಲಿಗೇರಿಸುತ್ತಾರೆ. ಇದು ರಾಯಣ್ಣನ ಚರಿತ್ರೆಯಾದರೆ. ನಮ್ಮ ಜನರು ಹಾಡುಗಳು ಮೂಲಕ ರಾಯಣ್ಣನ ವೀರತ್ವ, ಸಾಹಸ, ಹೋರಾಟ, ಜೀವನ ಮುಂತಾದ ಅಂಶಗಳನ್ನು ಒಳಗೊಂಡಂತೆ ಕಥೆಗಳಲ್ಲಿ, ಹಾಡುಗಳಲ್ಲಿ ಹೇಳಿಕೊಂಡು ಬಂದಿದ್ದಾರೆ. ಸಂಗೊಳ್ಳಿ ರಾಯಣ್ಣನ ಜೀವನವು ಮುಂದಿನ ಸ್ವಾತಂತ್ರ್ಯ ಹೋರಾಟಗಾರರಿಗೆ ದಾರಿಯಾಗಿದ್ದಾನೆ. ಸಂಗೊಳ್ಳಿ ರಾಯಣ್ಣನ ಕುರಿತ ಕಥೆ ಹಳೆಯದಾದರೂ ಸಾಹಿತ್ಯ ಚರಿತ್ರೆಗಳೆರಡರಲ್ಲೂ ರಾಯಣ್ಣ ಬ್ರಿಟಿಷರ ವಿರುದ್ಧ ಹೋರಾಡಿದ ಸಾಹಸದ ಚಿತ್ರಣವಿದೆ. ಬ್ರಿಟಿಷರ ಆಳ್ವಿಕೆಗೆ ಸಂಬಂಧಿಸಿದಂತೆ, ರಾಯಣ್ಣನ ಬಾಲ್ಯ, ಮನೆತನ, ವೃತ್ತಿ, ಪರಿಸರ ಮುಂತಾದ ವಿಷಯಗಳನ್ನು ರಾಯಣ್ಣನ ಸಮಗ್ರ ಜೀವನವನ್ನು ತಿಳಿಯಲು ಜನಪದ ಸಾಹಿತ್ಯ ಅದರಲ್ಲೂ ಮುಖ್ಯವಾಗಿ ಲಾವಣಿಗಳು ಸಹಾಯಕವಾಗುತ್ತವೆ.

ಕಿತ್ತೂರು ಸಂಸ್ಥಾನ ಹಾಗೂ ರಾಯಣ್ಣನ ಮನೆತನಕ್ಕೆ ಯಾವ ರೀತಿಯ ಸಂಬಂಧ ಇತ್ತು ಎನ್ನುವುದನ್ನು ಕುರಿತು ಈ ಕೆಳಗಿನ ಲಾವಣಿಯು ತಿಳಿಸುತ್ತದೆ.

> 'ಸಂಗೊಳ್ಳಿ ರಾಯಣ್ಣನ ತಂದೆತಂದೆಯ ರೋಗಣ್ಣನೆಂಬುವ ರಣಧೀರ
> ವೀರಪ್ಪ ದೇಸಾಯಿಯ ಕಾಲದೊಳಾತ ಕಿತ್ತೂರ ಸೇನೆಯ ಸರದಾರ
> ರೋಗಣ್ಣವೀರತೆ ನೋಡಿ ನಾಡದೊರೆ ವಿಸ್ಮಯಪಟ್ಟಣ ಹರುಷದಲಿ
> ಸಾವಿರ ಒಂಟಿ ಸರದಾರನೆಂಬುವ ಬಿರುದನು ಕೊಟ್ಟನು ಮಹತಿನಲಿ
> ರೋಗಣ್ಣನಾತನು ನಾಟಿಔಷಧಿಯಿ ವೈದ್ಯ ಪರಿಣತಿಯ ಪಡೆದವನು
> ಉಚಿತಔಷಧಿತೆಯ ರೋಗಣ್ಣ ಮನೆತನವೆಂಬ ಜನನುಡಿಯ ಸಿರಿಯವನು.'[೪]

ಸಂಗೊಳ್ಳಿ ರಾಯಣ್ಣನ ಮನೆತನವನ್ನು ಕುರಿತು ಲಾವಣಿಕಾರ ಕಿತ್ತೂರು ಸಂಸ್ಥಾನದ ಸೈನ್ಯದಲ್ಲಿ ಸೈನಿಕರಾಗಿ ಹೋರಾಟದಲ್ಲಿ ಚಾಣಾಕ್ಷತೆಯನ್ನು ತೋರುತ್ತಿದ್ದರು. ರಾಘಣ್ಣನು ಚಿಣಗಿ ಕೊವಾಡ ಯುದ್ಧದಲ್ಲಿ ತೋರಿದ ಸಾಹಸಕ್ಕಾಗಿ ಅಂದಿನ ದೊರೆ ವೀರಪ್ಪ ದೇಸಾಯಿ ಈತನಿಗೆ 'ಸಾವಿರ ಒಂಟಿ ಸರದಾರ' ಎಂಬ ಬಿರುದನ್ನು ಕೊಟ್ಟು ಗೌರವಿಸಿದನು. ಹಾಗೂ ರೋಗಣ್ಣನು ಜನರಿಗೆ ಉಚಿತವಾಗಿ ಔಷಧವನ್ನು ನೀಡುತ್ತಿದ್ದರಿಂದ ಇವರ ಮನೆತನಕ್ಕೆ ರೋಗಣ್ಣವರ ಎಂದು ಹೆಸರು ಬಂದಿರುವುದನ್ನು ಲಾವಣಿಗಳಲ್ಲಿ ಕಾಣಬಹುದು. ಲಾವಣಿಗಳಿಂದ ಲಾವಣಿಗಳಿಗೆ ಸ್ವಲ್ಪ ಭಿನ್ನವಾದ ಅಂಶಗಳಿದ್ದರೂ ಸಾಮಿಪ್ಯದ ಹೋಲಿಕೆ ಇರುವುದನ್ನು ಕಾಣುತ್ತೇವೆ.

'ಬೆಳಗಾಂವಿ ಜಿಲ್ಲಾಪೈಕಿ ಸಂಪಗಾವಿ ತಾಲೂಕಿನೊಳಗ
ಸಂಗವಳ್ಳಿ ಎಂಬಸಣ್ಣ ಹಳ್ಳಿ ಇತ್ತೊ ಹದ್ದಿನೊಳಗ
ತಾಯಿ ಕೆಂಚವ್ವನ ಹೊಟ್ಯಾಗ ಬೆಳೆದಾನು ರಾಯಣ್ಣಾಗ
ರೋಗಣ್ಣವರ ರಾಯನೆಂದು ಹೆಸರು ಆದಾನು ದೇಶದ ಮ್ಯಾಗ
ಜಾತಿಯಿಂದ ರಾಯಣ್ಣ ತಾನು ಕುರುಬ ಆಗಿದ್ದನಾಗ
ಸಂಗವಳ್ಳಿ ವಾಲಿಕಾರಿಕೆ ಇತ್ತ ಅವರ ವಂಶಕ್ಕಾಗ
ಸಂಗವಳ್ಳಿ ಕುಲಕರ್ಣಿಕಿ ಮಾಡುತ್ತಿದ್ದನು ಬಾಳಣ್ಣಾಗ
ಅಷ್ಟ ಹೊತ್ತಿಗೆ ಇಂಗ್ರೇಜಿ ದರಬಾರ ಬಂದಿತು ದೇಶದ ಮ್ಯಾಗ
ಇಂಗ್ರೇಜಿ ಕಾಯದೆ ಪ್ರಕಾರ ಹುಕುಮು ಕಳಿಸ್ಯಾರು ಬಾಳಣ್ಣಗಾಗ'[೫]

ಈ ಮೇಲಿನ ಲಾವಣಿಯು ಸಂಗೊಳ್ಳಿ ರಾಯಣ್ಣನ ಪರಿಚಯವನ್ನು ಮಾಡಿಕೊಡುತ್ತದೆ. ರಾಯಣ್ಣನ ಮನೆತನ, ತಂದೆ, ತಾಯಿ, ವೃತ್ತಿ, ಜಾತಿಯ ಕುರಿತು ಲಾವಣಿಕಾರರು ಸ್ಪಷ್ಟವಾದಂತಹ ಮಾಹಿತಿಯನ್ನು ಈ ಲಾವಣಿಯಲ್ಲಿ ತಿಳಿಸಿದ್ದಾರೆ. ರಾಯಣ್ಣನ ಮನೆತನಕ್ಕೆ ವಂಶಪರಂಪರೆಯಾಗಿ ವಾಲಿಕಾರ ವೃತ್ತಿಯು ಇತ್ತೆಂದು ಈ ಲಾವಣಿಯ ಮೂಲಕ ತಿಳಿಯಬಹುದಾಗಿದೆ. ಸಂಗೊಳ್ಳಿಯ ಕುಲಕರ್ಣಿ ಬಾಳಪ್ಪನ ಕುರಿತು ಮಾಹಿತಿಯಿದೆ. ಕಿತ್ತೂರು ಬ್ರಿಟಿಷರ ವಶವಾಗಿರುವುದರ ಕುರಿತು ಮಾಹಿತಿ ದೊರೆಯುತ್ತದೆ. ಕಿತ್ತೂರು ಬ್ರಿಟಿಷರ ವಶವಾದ ನಂತರ ಜಮೀನಿನ ಅಳತೆ ಮಾಡಿ ಕಂದಾಯವನ್ನು ನೀಡುತ್ತಿದ್ದಂತಹ ವಿಷಯದ ಕುರಿತು ಮಾಹಿತಿಯನ್ನು ತಿಳಿಯಲು ಸಹಾಯಕವಾಗುತ್ತದೆ.

ಸಂಗೊಳ್ಳಿ ರಾಯಣ್ಣನ ಬಾಲ್ಯ, ಗಾತ್ರ, ಗೆಳೆಯರು ಮುಂತಾದ ವಿಷಯಗಳನ್ನು ತಿಳಿಸುವಂತಹ ಲಾವಣಿ ಈ ಕೆಳಗಿನಂತಿದೆ.

'ಏ ಸಿಂಹದಂತ ಸಂಗೊಳ್ಳಿರಾಯ

ಭೂಮಿಗೆ ಬಿದ್ದಾಂಗ ಸೂರ್ಯನ ಛಾಯ

ನೆತ್ತರ ಕಾವಲಿ ಹರಿಸಿದಾನೋ ಕಿತ್ತೂರ ನಾಡಾಗ

ಬಾಳ ಬಂಟಸ್ತಾನ ಪದವಿ ಇತ್ತ ಅವಗ

ಸೃಷ್ಟಿಯೊಳಗೆ ಹುಟ್ಟಿ ಬಂದ ಶ್ರೇಷ್ಠನಾಗಿ ಹೋಗಿದಾನೆ

ದುಷ್ಟ ರಾವಣಾಸುರನು ಲಂಕಾ ಸುಟ್ಟಾಂಗ

ಹಿಂಗ ಸಂಪಗಾವಿ ಬೀಡಿ ಕಚೇರಿ ಸುಟ್ಟಾನ ಕಲಕಿದೊಳಗ

ಕುರುಬರ ಜಾತಿಯಿಂದ ಬೀರ ರೂಪದಲ್ಲಿ ಸೂರ್ಯ ಚಂದ್ರ

ಪಂಚಪಾಂಡವರೊಳಗೆ ಭೀಮ ಹುಟ್ಟಿ ಬಂದಾಂಗ'[೬]

ಲಾವಣಿಕಾರರು ಇಲ್ಲಿ ರಾಯಣ್ಣನನ್ನ ಸಿಂಹದಂತಹ ಶಕ್ತಿಯನ್ನು ಹೊಂದಿದ್ದಾನೆಂದು ವರ್ಣಿಸಿದ್ದಾರೆ. ರಾಯಣ್ಣ ನಡೆದಾಡುತ್ತಿದ್ದರೆ ಭೂಮಿಗೆ ಬೆಳಕಿದ್ದಂತೆ ಹಾಗೂ ದುಷ್ಟರನ್ನು ನಾಶಮಾಡುವುದಕ್ಕಾಗಿಯೇ ರಾಯಣ್ಣ ಹುಟ್ಟಿ ಬಂದಿದ್ದಾನೆ ಎನ್ನುವ ಹಾಗೆ ಹೇಳಿದ್ದಾರೆ. ರಾಯಣ್ಣ ಪಾಂಡವರಲ್ಲಿ ಭೀಮನಂತಹ ಶಕ್ತಿಯನ್ನು ಹೊಂದಿದ್ದನು ಎಂದು ಲಾವಣಿಕಾರರು ರಾಯಣ್ಣನ ಶಕ್ತಿಸಾಮರ್ಥ್ಯಗಳನ್ನು ಕುರಿತು ಹೇಳಿದ್ದಾರೆ. ಬ್ರಿಟಿಷರ ದಬ್ಬಾಳಿಕೆ, ಅನ್ಯಾಯ, ಶೋಷಣೆಯ ವಿರುದ್ದ ಹೋರಾಟ ಮಾಡುವುದಕ್ಕಾಗಿಯೇ ರಾಯಣ್ಣ ಜನಿಸಿದ್ದಾನೆ ಎನ್ನುವ ಸಂದೇಶವನ್ನು ಈ ಲಾವಣಿ ಸಾರುತ್ತದೆ.

ಸಂಗೊಳ್ಳಿ ರಾಯಣ್ಣನ ಗೆಳೆಯರ ಕುರಿತು ಲಾವಣಿಗಳ ಮೂಲಕ ತಿಳಿಯಬಹುದು. ರಾಯಣ್ಣನಿಗೆ ಜೀವಕ್ಕೆ ಜೀವ ಕೊಡುವಂತಹ ಗೆಳೆಯರಿದ್ದರು. ಅಂತವರಲ್ಲಿ ವಡ್ಡರ ಯಲ್ಲಣ್ಣ, ಬಿಚ್ಚುಗತ್ತಿ ಚನ್ನಬಸವ ಪ್ರಮುಖರು ಇವರನ್ನು ಕುರಿತು ಈ ಕೆಳಗಿನ ಲಾವಣಿ ಹೀಗೆ ಹೇಳುತ್ತದೆ.

'ಸಂಗೊಳ್ಳಿ ರಾಯಣ್ಣ ವಡ್ಡರ ಯಲ್ಲಣ್ಣ

ಬಿಚ್ಚುಗತ್ತಿ ಚೆನ್ನಬಸಣ್ಣ

ಅಪರೂಪದ ಗೆಳೆತನ ಲೋಕದೊಳಿಲ್ಲಣ್ಣ

ನಾಡ ಕಿತ್ತೂರ ಹೆಸರ ಮೆರಿಸ್ಯಾರಣ್ಣ'[೭]

ಜೀವಕ್ಕೆ ಜೀವ ಕೊಡುವಂತಹ ಗೆಳೆಯರನ್ನು ಹೊಂದಿದ್ದಂತಹ ರಾಯಣ್ಣನು ಗೆಳೆಯರ ಜೊತೆ ಸೇರಿ ಕಿತ್ತೂರಿನಲ್ಲಿ ನಡೆದ ಎರೆಡು ಯುದ್ಧಗಳಲ್ಲಿ ಭಾಗವಹಿಸಿದ್ದರು. ಕಿತ್ತೂರು ಬ್ರಿಟಿಷರ ವಶವಾದ ನಂತರ ಮತ್ತೆ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಲು ರಾಯಣ್ಣ ಹಾಗೂ ಸ್ನೇಹಿತರು

ಹೋರಾಟಕ್ಕೆ ಮುಂದಾಗುತ್ತಾರೆ. ಬಿಚ್ಚುಗತ್ತಿ ಚನ್ನಬಸವ ಕತ್ತಿವರಸೆಯಲ್ಲಿ ನೈಪುಣ್ಯತೆಯನ್ನು ಹೊಂದಿದ್ದರೆ, ವಡ್ಡರ ಯಲ್ಲಣ್ಣ ಗುರಿ ಹೊಡೆಯುವುದರಲ್ಲಿ ನೈಪುಣ್ಯತೆಯನ್ನು ಹೊಂದಿದ್ದ. ಇಂತಹ ಗೆಳೆಯರನ್ನು ಸೇರಿ ಮತ್ತೆ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಲು ಹೋರಾಟವನ್ನು ಮಾಡುತ್ತಾನೆ.

ಕಿತ್ತೂರು ಬ್ರಿಟಿಷರ ವಶವಾದ ಮೇಲೆ ರಾಜ ಪರಿವಾರದವರನ್ನು ಹಾಗೂ ಅನೇಕ ಸೈನಿಕರನ್ನು ಸೆರೆಮನೆಗೆ ಹಾಕುತ್ತಾರೆ. ಅದರಲ್ಲಿ ರಾಯಣ್ಣನು ಒಬ್ಬ. ಕೆಲವು ದಿನಗಳ ನಂತರ ರಾಯಣ್ಣ ಬಿಡುಗಡೆಗೊಂಡು ಸಂಗೊಳ್ಳಿಗೆ ಹಿಂತಿರುಗಿ ಕೃಷಿ ಹಾಗೂ ವಾಲೀಕಾರಿಕೆ ವೃತ್ತಿಯನ್ನು ಮಾಡುತ್ತಾನೆ. ಕಿತ್ತೂರು ಬ್ರಿಟಿಷರ ವಶವಾದ ನಂತರ ಕಿತ್ತೂರಿನಲ್ಲಿ ಕೆಲವು ಹೊಸ ಕಾಯ್ದೆಗಳನ್ನು ಜಾರಿಗೆ ತಂದರು.

“ಹೊಸ ಕಾಯ್ದೆ ಪ್ರಕಾರ ಖಾಲಸಾ
ನೋಕರಿ ಜಮೀನ ಪೂರಾ
ಹಾಸಿ ಸರಪಳಿ ಹೊಲಾ ಅಳದವರಾ
ಹೊಸ ಪಂಚರ ಹೇಳತಾರ ಕೊಡೊಸಾರಾ
ವರ್ಷಕ್ಕ ಐದ – ಹತ್ತ ನೂರಾ
ಕಾಸ ಕೊಡುವದಿಲ್ಲ ರಾಯಣ್ಣ ವಾಶ್ಯಾಡಿದೊ ಜೋರಾ”[೮]

ಭಾರತದಾದ್ಯಂತ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸುತ್ತಿದ್ದ ಬ್ರಿಟಿಷರು ಭಾರತದಲ್ಲಿ ಅದಾಯಗಳಿಸುವುದಕ್ಕಾಗಿಯೇ ಜಮೀನ್ದಾರಿ ಪದ್ದತಿ, ರೈತವಾರಿ ಪದ್ದತಿ ಹೀಗೆ ಕೆಲವೊಂದು ಕಾಯ್ದೆಗಳನ್ನು ಜಾರಿಗೆ ತಂದರು. ಹಾಗೆಯೇ ಕಿತ್ತೂರನ್ನು ವಶಪಡಿಸಿಕೊಂಡ ನಂತರ ಕಿತ್ತೂರಿನಲ್ಲಿ ಕೆಲವೊಂದನ್ನು ಜಾರಿಗೆ ತಂದರು. ಅಂತವುಗಳಲ್ಲಿ ಇನಾಂ ಕಾಯ್ದೆ ಒಂದಾಗಿದೆ. ಈ ಕಾಯ್ದೆಯ ಮೂಲಕ ಬ್ರಿಟಿಷರು ಆರ್ಥಿಕವಾಗಿ ಸಬಲರಾದರು. ಕಿತ್ತೂರಿನಲ್ಲಿ ಈ ಕಾಯ್ದೆಯನ್ನು ಜಾರಿಗೊಳಿಸಿದ್ದರಿಂದ ಗ್ರಾಮಗಳಿಗೆ ನೇಮಿಸಿದಂತಹ ಗೌಡ, ಪಟೇಲ, ಕುಲಕರ್ಣಿಗಳ ಮೂಲಕ ಕಂದಾಯವನ್ನು ಸಂಗ್ರಹಿಸುವಂತಹ ವ್ಯವಸ್ಥೆಯನ್ನು ಜಾರಿಗೆ ತಂದರು.

ಸಂಗೊಳ್ಳಿ ರಾಯಣ್ಣನ ಹೋರಾಟಕ್ಕೆ ಮುಖ್ಯವಾದ ಕಾರಣವೆಂದರೆ, ಕುಲಕರ್ಣಿ ಬಾಳಪ್ಪನು ಮಲಪ್ರಭಾ ನದಿಯಲ್ಲಿ ಸ್ನಾನ ಮಾಡಿ ತನ್ನ ಬಟ್ಟೆಗಳನ್ನು ತೊಳೆದುಕೊಡಲು ರಾಯಣ್ಣನಿಗೆ ಹೇಳುತ್ತಾನೆ. ಈ ಸಂದರ್ಭವನ್ನು ಲಾವಣಿಕಾರರು ಹೀಗೆ ಹಾಡಿದ್ದಾರೆ.

“ಜಳಕಾ ಮಾಡಿ ಕಲ್ಲ ಮ್ಯಾಗ ಪಂಜೆ ಬಿಟ್ಟು ಬಂದಾನಾಗ
ಕಲ್ಲ ಮ್ಯಾಗಿನ ಪಂಜೆ ಸೆಳೆದು ಕೊಡಲೇ ರಾಯ ನನಗ

ಇಷ್ಟ ಕೇಳಿ ರಾಯಪ್ಪ ಸಿಟ್ಟ ಬಾಳಾದಾನೊ ಅವನ ಮ್ಯಾಗ
ನಿನ್ನ ಪಂಜೆ ಸೆಳೆಯಾಕ ನಾನು ಮಡಿವಾಳವೆಲ್ಲೋ ಬಾಳ್ಯಾ ಈಗ
ಕಡಿ ಅಂದರ ನೂರಾಳು ಕಡಿಯಾಂವ ನೋಡೋ ಇನ್ನಮ್ಯಾಗ
ಇಂಥಾ ದ್ಯೋಮ್ಯಾ ಕೆಲಸಾ"[೯]

ರಾಯಣ್ಣನ ಸಿಟ್ಟು, ಸ್ವಾಭಿಮಾನವನ್ನು ಲಾವಣಿಕಾರರು ಈ ರೀತಿಯಲ್ಲಿ ಚಿತ್ರಿಸಿದ್ದಾರೆ. ನಮ್ಮ ಆತ್ಮಾಭಿಮಾನಕ್ಕೆ ದಕ್ಕೆಯಾಗುವಂತಹ ಯಾವ ಕೆಲಸವನ್ನು ನಾವು ಮಾಡುವುದಿಲ್ಲ ಎಂಬುದನ್ನು ಹೇಳುತ್ತಾನೆ. ಈ ಘಟನೆಯ ನಂತರ ಕುಲಕರ್ಣಿ ರಾಯಣ್ಣನನ್ನು ವಾಲೀಕಾರಿಕೆ ಕೆಲಸದ ಮೇಲೆ ಲಕೋಟೆಯನ್ನು ಕೊಟ್ಟು ಕಳುಹಿಸುತ್ತಾನೆ. ಸಂಪಗಾವಿಗೆ ತೆಗೆದುಕೊಂಡು ಹೋಗಿ ಕೊಟ್ಟ ನಂತರ ರಾಯಣ್ಣನಿಗೆ ಗೊತ್ತಾಗುತ್ತದೆ. ನಾ ಮೋಸ ಹೋದೆ ಎಂದು. ಕುಲಕರ್ಣಿಯು ಲಕೋಟೆಯಲ್ಲಿ ರಾಯಣ್ಣ ನನ್ನುನ್ನು ಕೊಲೆ ಮಾಡಲು ಬಂದಿದ್ದನೆಂದು ಬರೆದು ಸೆರೆಮನೆಗೆ ಹಾಕಿಸುತ್ತಾನೆ. ಈ ಸಂದರ್ಭವನ್ನು ಲಾವಣಿಯಲ್ಲಿ ಈ ಕೆಳಗಿನ ಹಾಗೆ ಚಿತ್ರಿಸಿದ್ದಾರೆ.

ಯಾಕೊ ಯಾಕೋ ಬಾಳಪ್ಪಣ್ಣ ಯಾಕ ಕರಿಸಿದಿ ಹೇಳೊ ನನಗ
ಇಷ್ಟ ಕೇಳಿ ಬಾಳಪ್ಪ ತಾನು ಹೇಳುತ್ತಿದ್ದಾನು ರಾಯಣ್ಣಗಾಗ
ಸಂಪಗಾವಿ ಚಾಕರಿ ಬಂದೈತಲೆ ತಮ್ಮ ನಿನಗ
ಇಷ್ಟ ಕೇಳಿ ಬಾಳಪ್ಪ ತಾನು ಲಕೋಟಿ ಕೊಟ್ಟನೊ ರಾಯಣ್ಣಗಾಗ
ಮಳ್ಳತನಕ ಬಿದ್ದು ರಾಯಾ ಲಕೋಟಿ ತಗೊಂಡಾನಾಗ
ಬಿರಿ ಬಿರಿ ಬಂದಾನೊ ತನ್ನ ಅರಮನೆಯೊಳಗ
ಬಿಚ್ಚುಗತ್ತಿ ಚನಬಸ್ಯ ತಮ್ಮಾ ಜೋಕೆಪ್ಪ ಮನೆಕಡೆಗೆ
ಸಂಜೆ ಮೂರು ತಾಸು ಹೊತ್ತಿರತ ಕಚೇರಿತ್ತೊ ಭರಪೂರ ಆಗ ಸಂಪಗಾವ್ಯಾಗ
ದೌಡಾಯಿಸಿ ಹೋದಾನು ಬಂಟ ಸಂಪಗಾವಿ ಕಚೇರ್ಯಾಗ
ಟೊಣ್ಯಾ ಸುಬೇದಾರ ಕಾಗದ ಓದಿಕೊಂತಾನಾಗ
ಕಾಗದ ಓದಿ ಸಿಬೇದಾರ ಕರಕರ ಹಲ್ಲ ತಿಂದನಾಗ
ಅವನು ವಿಚಾರಮಾಡಲಿಲ್ಲ ದೂಡಿಬಿಟ್ಟಾರೊ ತುರಂಗದಾಗ
ಅವನ ದೂಡಿದ ಸುದ್ದಿ ಮುಟ್ಟಿತೊ ಸಂಗೊಳ್ಳಿಗಾಗ
ಅಷ್ಟು ಹೊತ್ತಿಗೆ ವೈರಿ ಬಾಳ್ಯಾ ಪಿತೂರಿ ನಡಸ್ಯಾನೊ ಸಂಗೊಳ್ಯಾಗ"[೧೦]

ರಾಯಣ್ಣನನ್ನು ಸಂಪಗಾವಿಗೆ ಕಳುಹಿಸಿದ ನಂತರ ಚಾವಡಿಗೆ ಕೆಂಚವ್ವನನ್ನು ಕರೆಯಿಸಿ ಕಂದಾಯದ ಹಣವನ್ನು ಕೊಡಬೇಕೆಂದು ಕೇಳುತ್ತಾನೆ. ರಾಯಣ್ಣ ಬಂದ ನಂತರ ಕೊಡುತ್ತಾನೆ ಎಂದು ಹೇಳಿದರೂ ಕೇಳದೆ, ಕುಲಕರ್ಣಿ ವಯಸ್ಸಾದ ಕೆಂಚವ್ವನ ಬೆನ್ನಿನ ಮೇಲೆ ಬೀಸುವ ಕಲ್ಲನ್ನು ಹೇರಿ ಹಿಂಸೆಗೆ ಗುರಿಪಡಿಸುತ್ತಾನೆ. ಈ ವಿಷಯ ತಿಳಿದ ಬಿಚ್ಚುಗತ್ತಿ ಚೆನ್ನಬಸವ ಕಂದಾಯದ ಹಣಕ್ಕೆ ಜಾಮೀನಾಗಿ ಚಾವಡಿಯಿಂದ ಮನೆಗೆ ಕರೆದುಕೊಂಡು ಬರುತ್ತಾನೆ.

ಮೇಲುಗಿರಿ ರಂಗನಗೌಡರು ರಾಯಣ್ಣನಿಗೆ ಜಾಮೀನುಕೊಟ್ಟು, ರಾಯಣ್ಣ ಕುಲಕರ್ಣಿಯ ಮೇಲೆ ಸಿಟ್ಟಾಗಿ ಮೂರು ದಿನಗಳ ಕಾಲ ಸೆರೆಯಲ್ಲಿರಿಸುತ್ತಾರೆ. ಸೆರೆಮನೆಯಿಂದ ಬಿಡುಗಡೆಗೊಂಡ ನಂತರ ಸಂಪಗಾವಿ ಕಚೇರಿಯಿಂದ ಹೊರಬಂದು ನಡು ಹಗಲಿನಲ್ಲಿ ಈ ಕಚೇರಿಯನ್ನು ಸುಟ್ಟು ಹಾಕುತ್ತೇನೆಂದು ಶಪಥ ಹಾಕುತ್ತಾನೆ.

ಅಷ್ಟ ಹೊತ್ತಿಗೆ ಸುಭೇದಾರ ಕೇಳಿದಾನು ರಾಯಾಗಾಗ
ಸಂಪಗಾವ್ಯಾಗ ಮೂರು ದಿವಸ ಆತಲೆ ರಾಯಾ
ನೀನು ಜಾಮೀನು ಕೊಟ್ಟು ಹೋಗಲೆ ನಮಗಾ
ಕೇಳಿ ರಾಯಪ್ಪ ತಾನು ಕಣ್ಣತುಂಬ ನೀರತಂದಾನಾಗ
ಈ ಊರ ಒಲಗ ಗುರುತಿಲ್ಲ ಅಂತಾನು ಯಾರಿಗೀಗ
ಮೇಲಗಿರಿ ರಂಗನಗೌಡ್ರ ಕಣ್ಣ ಚಿವಟಿ ಹೇಳ್ಯಾನಾಗ
ಅಷ್ಟ ನೋಡಿ ರಾಯಪ್ಪ ತಾನು ಹೇಳುತಿದ್ದಾನ ಸುಭೇದಾರಗ
"ಮೇಲಗಿರಿ ರಂಗನಗೌಡ್ರ ಜಮೀನ ಕೊಟ್ಟಾನ್ರಿ ಆಗ
ಸಂಜೆ ಮೂರಗಳಿಗಿರತ ಬಿಟ್ಟಾರು ಬಂಟನ್ನಾಗ
ದೀನಾಂತ ಕಟಂಜನ ಜಿಗಿದು ನಿಂತಾನು ರಸ್ತೆದಮ್ಯಾಗ
ಡಗ್ಗಾಲು ಮಂಡಿ ಊರಿ ಬಂಟಾ ಚೀರಲಬ್ಬಿ ಹೊಡೆದನಾಗ
ಸುಭೇದಾರಾ ನಿನ್ನ ಕರಯಳು ಜನಿವಾರಾ ಹಕತೀನಿ ಕೊರಳಾಗ
ಸಂಪಗಾವಿ ಕಛೇರಿಗೆ ಬೆಂಕಿ ಹಚ್ಚತೇನಿ ಮಧ್ಯಾಹ್ನದಾಗ"[೧೧]

ಮಾಡಿರದ ತಪ್ಪಿಗಾಗಿ ಶಿಕ್ಷೆ ಅನುಭವಿಸಿದ್ದರಿಂದ ಸಿಟ್ಟಿನಿಂದ ರಾಯಣ್ಣ ಈ ರೀತಿಯ ಸವಾಲು ಹಾಕಿ ಸಂಗೊಳ್ಳಿ ಕಡೆಗೆ ಹೊರಟ. ಸಂಗೊಳ್ಳಿಗೆ ಹೋದ ನಂತರ ಕುಲಕರ್ಣಿ ಮಾಡಿದ ಅವಾಂತರಗಳನ್ನು ಕೇಳಿ ಕುಲಕರ್ಣಿಯನ್ನು ಜೀವಂತ ಬಿಡುವುದಿಲ್ಲವೆಂದು ಹುಡುಕಿಕೊಂಡು ಮನೆಗೆ

ಹೊರಟ, ಕುಲಕರ್ಣಿಯ ಮನೆಗೆ ಹೋದಾಗ ಕುಲಕರ್ಣಿಯ ಹೆಂಡತಿ ಪತಿ ಭಿಕ್ಷೆ ಬೇಡಿದಕ್ಕೆ ಕುಲಕರ್ಣಿಗೆ ಕೊನೆಯ ಎಚ್ಚರಿಕೆಯನ್ನು ಕೊಟ್ಟು, ಸಂಗೊಳ್ಳಿಯನ್ನು ತೊರೆಯಲು ನಿರ್ಧರಿಸುತ್ತಾನೆ.

ಅದೇ ದಿನ ರಾತ್ರಿ ಕುಲಕರ್ಣಿಯ ಬಣವೆಯ ರಾಶಿಯನ್ನು ಸುಡುವುದರ ಮೂಲಕ ರಾಯಣ್ಣ ತನ್ನ ಹೋರಾಟವನ್ನು ಪ್ರಾರಂಭಿಸುತ್ತಾನೆ. ಇಂತಹ ಘಟನೆಗಳಿಂದ 'ರಾಯಣ್ಣನ ಅಥವಾ ಕಿತ್ತೂರಿನ ಇತಿಹಾಸದಲ್ಲಿ ಮಹತ್ತರವಾದ ಚಳುವಳಿಗೆ ನಾಂದಿಯಾಯಿತು ಎಂದು ಹೇಳಬಹುದು. ಅನ್ಯಾಯ ಶೋಷಣೆಗಳಿಂದ ಬ್ರಿಟಿಷರ ವಿರುದ್ಧ ಹೋರಾಟ ಮಾಡಬೇಕೆಂದು ರಾಯಣ್ಣನಂತೆಯೇ ಅನೇಕರು ಕಾಯುತ್ತಿದ್ದರು. ಅಂತವರೆಲ್ಲರನ್ನು ಒಂದೆಡೆ ಸೇರಿಸಿ ಬ್ರಿಟಿಷರನ್ನು ಕಿತ್ತೂರಿನಿಂದ ಹೊರ ಹಾಕಬೇಕೆಂದು ಯೋಜನೆಗಳನ್ನು ರೂಪಿಸತೊಡಗಿದನು. ಹೋರಾಟಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡು ಜನಬೆಂಬಲಕ್ಕಾಗಿ ಕಾಯತೊಡಗಿದನು. ಜನರ ಪ್ರೋತ್ಸಾಹ ಹಾಗೂ ಹಣ ಬೆಂಬಲಕ್ಕಾಗಿ ಯೋಚಿಸುತ್ತಿರುವಾಗ ಕಿತ್ತೂರಿನ ಕೊನೆಯ ದೊರೆ ಶಿವಲಿಂಗರುದ್ರ ಸರ್ಜನು ದತ್ತು ತೆಗೆದುಕೊಂಡಂತಹ ಕಿತ್ತೂರಿಗೆ ದತ್ತು ಪುತ್ರನನ್ನು ತೆಗೆದುಕೊಂಡಿದ್ದ ಮಾಸ್ತಮರಡಿಯ ಶಿವಲಿಂಗಪ್ಪ (ಸವಾಯಿ ಮಲ್ಲಸರ್ಜ)ನನ್ನು ಮುಂದಿಟ್ಟುಕೊಂಡು, ಹೋರಾಟಮಾಡಬೇಕೆಂದು ಸಿದ್ಧತೆಗಳನ್ನು ಮಾಡಿಕೊಂಡರು. ಸವಾಯಿ ಮಲ್ಲಸರ್ಜನನ್ನು ರಾತ್ರೋ ರಾತ್ರಿ ಕರೆದುಕೊಂಡು ಬಂದು ಸುರಕ್ಷಿತವಾಗಿ ಹಂಡಿಬಡಗನಾಥ ಬೆಟ್ಟಕ್ಕೆ ಕರೆದೊಯ್ಯುತ್ತಾರೆ. ಇಲ್ಲಿಂದ ರಾಯಣ್ಣನು ಯುದ್ಧಕ್ಕೆ ಬ್ರಿಟಿಷರ ವಿರುದ್ಧ ಹೋರಾಟವನ್ನು ಪ್ರಾರಂಭಿಸಿ ಸಿದ್ಧರಾಗುತ್ತಾರೆ. ಬಾಳನಾಯಕ, ಅಪ್ಪೋಜಿ ನಾಯಕ, ಬಂಡಾರಿ ಬಾಪು ಮುಂತಾದ ಸಮಾನ ಮನಸ್ಕರೊಂದಿಗೆ ಸೇರಿ ರಾಯಣ್ಣ ಹೋರಾಟಕ್ಕೆ ಸೈನ್ಯದ ಹಾಗೂ ಇತರ ಹೋರಾಟದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾನೆ. ರಾಯಣ್ಣನ ಸೈನ್ಯ ಹೋರಾಟಕ್ಕೆ ಸುರಪುರದ ಅರಸನ ಸಹಾಯ ಪಡೆದಿರುವುದು ಕಂಡುಬರುತ್ತದೆ.

"ಸುರಪುರ ಅರಸಂದು ಸಹಾಯ ತಕ್ಕೊಂಡು
ಮೂರನೂರ ಬೇಡರದೊಂದು ಕೂಡಿಸಿದಂ ಹಿಂಡು
ದೀರ ಗಜವೀರನ್ನು ಸಂಗಡ ಕರಕೊಂಡಾ
ಮೀರಿದಾಂವ ಚನ್ನಬಸಣ್ಣ ಮುಖಂಡ"[೧೨]

ರಾಯಣ್ಣನು ಸುರಪುರದ ಅರಸನ ಹತ್ತಿರ ಹೋಗಿ ತಾನು ಮಾಡಬೇಕೆಂದಿರುವ ಉದ್ದೇಶವನ್ನು ತಿಳಿಸಿದ ನಂತರ, ರಾಯಣ್ಣ ಮೂರುನೂರು ಬೇಡರ ಸೈನ್ಯದಲ್ಲಿ ತಾನೆ ಆರಿಸಿಕೊಂಡು ದಂಡನ್ನು ಕಟ್ಟುತ್ತಾನೆ. ಬ್ರಿಟಿಷರ ವಿರುದ್ಧ ಹೋರಾಟಕ್ಕೆ ಬೇಕಾದಷ್ಟು ದಂಡು ಇನ್ನು ಹೆಚ್ಚಿಗೆ ದಂಡು ಬೇಕೆಂದು ಶಿವನಗುತ್ತಿಯ ಅರಸನ ಸಹಾಯ ಕೇಳುತ್ತಾನೆ. ಅವನಿಂದ ನಿರೀಕ್ಷಿತ ಸಹಾಯ ದೊರೆಯದಿದ್ದಾಗ ಶಿವನಗುತ್ತಿಯ ಸುತ್ತ-ಮುತ್ತಲಿನ ಪ್ರದೇಶಗಳಲ್ಲಿ ಹಾನಿ ಮಾಡುತ್ತಿದ್ದ ಬಂಡಾರಿ ಭಾಪು ಎಂಬ ದರೋಡೆಕೋರನನ್ನು ಸಂಹರಿಸಿದನು. ಶಿವನಗುತ್ತಿಯಿಂದ ಹಿಂದುರುಗಿದ ಕೆಲವು ದಿನಗಳವರೆಗೆ ಹೋರಾಟದ ಯೋಜನೆಗಳನ್ನು ರೂಪಿಸಿಕೊಂಡು ಹೋರಾಟಕ್ಕೆ ಸಿದ್ಧರಾಗುತ್ತಾರೆ.

ಬ್ರಿಟಿಷರ ವಿರುದ್ಧ ರಾಯಣ್ಣನು ಮೊದಲ ದಾಳಿ ೧೮೩೦ ಜನವರಿ ೫ ರಂದು ಪ್ರಾರಂಭವಾಯಿತು. ಬೀಡಿ ಕಚೇರಿಯಲ್ಲಿ ಸಾಕಷ್ಟು ಹಣವಿದೆಯೆಂದು ಮಾಹಿತಿ ಪಡೆದ ರಾಯಣ್ಣನ ತಂಡ ಬೀಡಿ ಕಚೇರಿಯ ಮೇಲೆ ದಾಳಿ ಮಾಡಿತು. ಆದರೆ ರಾಯಣ್ಣನು ದಾಳಿ ಮಾಡುವುದಕ್ಕಿಂತ ಒಂದು ದಿನ ಮುಂಚಿತವಾಗಿ ಕಚೇರಿಯಲ್ಲಿದ್ದ ೨೮ ಸಾವಿರ ರೂಪಾಯಿಗಳನ್ನು ಮುಂಬೈಗೆ ಕಳುಹಿಸಲಾಗಿತ್ತೆಂದು ಬ್ರಿಟಿಷ್ ಅಧಿಕಾರಿಯಾಗಿ ನಿಸ್ಬತ್‌ರವರು ಮುಂಬೈ ಸರ್ಕಾರಕ್ಕೆ ಬರೆದ ಪತ್ರದಲ್ಲಿ ಹೇಳಿದ್ದಾರೆ. ರಾಯಣ್ಣನ ತಂಡ ಬೀಡಿ ಕಚೇರಿಯ ಮೇಲೆ ದಾಳಿ ಮಾಡಿ ಕಚೇರಿಯಲ್ಲಿದ್ದ ಕಾಗದ ಪತ್ರಗಳೆಲ್ಲವನ್ನು ಸುಟ್ಟು ಹಾಕಿದರು. ಖಜಾನೆಯಲ್ಲಿದ್ದ ೧೯೦೦ ರೂಪಾಯಿಗಳನ್ನು ವಶಪಡಿಸಿಕೊಂಡರು. ಬೀಡಿಯಿಂದ ರಾಯಣ್ಣನ ತಂಡ ನಂದಗಡಕ್ಕೆ ಬಂದರು. ಕಿಲ್ಲೆದಾರನನ್ನು ಬೆದರಿಸಿ ಕಂದಾಯದ ಹಣವನ್ನು ನಮಗೆ ಕೊಡಬೇಕೆಂದು ಹೇಳಿದರು. ನಂದಗಡದ ಊರಿನ ಪರವಾಗಿ ಒಂದು ಸಾವಿರ (೧೦೦೦) ರೂಪಾಯಿಗಳನ್ನು ಪಡೆಯಲಾಯಿತು ಎಂದು ಸ್ವತಃ ರಾಯಣ್ಣನೇ ವಿಚಾರಣೆಯ ವೇಳೆ ಒಪ್ಪಿಕೊಂಡಿದ್ದಾನೆ. ಬ್ರಿಟಿಷರು ಕಿತ್ತೂರು ಸಂಸ್ಥಾನವನ್ನು ವಶಪಡಿಸಿಕೊಂಡ ನಂತರ ಖಾನಾಪುರವನ್ನು ಸೈನ್ಯಠಾಣ್ಯವನ್ನಾಗಿ ಮಾಡಿಕೊಂಡಿದ್ದರು. ಖಾನಾಪುರದಲ್ಲಿ ಮೇಜರ್ ಪಿಕರಿಂಗ್ ಎಂಬಾತನ ನೇತೃತ್ವದಲ್ಲಿ ಬ್ರಿಟಿಷರ ಸೇನಾಪಡೆಯಿತ್ತು. ರಾಯಣ್ಣ ಹಾಗೂ ಸಹಚರರು ಖಾನಾಪುರವನ್ನು ಪ್ರವೇಶಿಸಿ ಸೈನ್ಯಠಾಣ್ಯವನ್ನು ಸುಟ್ಟುಹಾಕಿದರು. ಹಾಗೂ ಖಾನಾಪುರದಲ್ಲಿ ನಡೆದ ದಾಳಿಯಲ್ಲಿ ರಾಯಣ್ಣನ ಗುಂಪಿನಲ್ಲಿದ್ದ ಒಬ್ಬನು ಸತ್ತನೆಂದು ಕರ್ನಲ್ ಮ್ಯಾಕ್ಲೆಯೊಡನಿಗೆ ಪಿಕರಿಂಗ್ ಬರೆದ ಪತ್ರದಲ್ಲಿ ಮಾಹಿತಿಯಿದೆ.

ರಾಯಣ್ಣನ ಪ್ರಮುಖ ದಾಳಿಗಳಲ್ಲಿ ಸಂಪಗಾವಿ ಕಚೇರಿಯ ಮೇಲೆ ಮಾಡಿದ ದಾಳಿಯಾಗಿದೆ. ಕುಲಕರ್ಣಿ ಬಾಳಪ್ಪನ ಪಿತೂರಿಯಿಂದ ಮೂರುದಿನಗಳ ಕಾಲ ತಪ್ಪು ಮಾಡದೆ ಸೆರೆಮನೆಯಲ್ಲಿ ಶಿಕ್ಷೆಯನ್ನು ಅನುಭವಿಸಿ ಸೆರೆಮನೆಯಿಂದ ಬಿಡುಗಡೆಗೊಂಡ ನಂತರ ಹೊರಬಂದು ಪ್ರತಿಜ್ಞೆ ಮಾಡುತ್ತಾನೆ. ಈ ಕಚೇರಿಯನ್ನು ನಡುಹಗಲಿನಲ್ಲಿ ಸುಟ್ಟುಹಾಕುತ್ತೆನೆಂದು ಶಪಥ ಹಾಕುತ್ತಾನೆ. ಈ ವಿಷಯ ಜಾನಪದ ಸಾಹಿತ್ಯದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಈ ಪ್ರಸಂಗವನ್ನು ಲಾವಣಿಕಾರರು ಹೀಗೆ ಲಾವಣಿಯಲ್ಲಿ ವಿವರಿಸಿದ್ದಾರೆ.

"ಅಷ್ಟ ಹೊತ್ತಿಗೆ ಸುಭೇದಾರ ಕೇಳಿದಾನು ರಾಯಾಗಾಗ
ಸಂಪಗಾವ್ಯಾಗ ಮೂರು ದಿವಸ ಆತಲೆ ರಾಯಾ
ನೀನು ಜಮೀನ ಕೊಟ್ಟು ಹೋಗಲೆ ನಮಗಾ
ಕೇಳಿ ರಾಯಪ್ಪ ತಾನು ಕಣ್ಣತುಂಬಾ ನೀರತಂದಾನಾಗ
ಈ ಊರ ಒಳಗ ಗುರುತಿಲ್ಲ ಅಂತಾನು ಯಾರಗೀಗ

ಮೇಲಗಿರಿ ರಂಗನಗೌಡಾ ಕಣ್ಣ ಚಿವಟಿ ಹೇಳ್ಯಾನಾಗ
ಅಪ್ಪ ನೋಡಿ ರಾಯಪ್ಪ ತಾನು ಹೇಳುತಿದ್ದಾನ ಸುಭೇದಾರಗ
ಮೇಲಗಿರಿ ರಂಗನಗೌಡ್ರ ಜಾಮೀನ ಕೊಟ್ಟಾನ್ರಿ ಆಗ
ಸಂಜೆ ಮೂರಗಳಿರತ ಬಿಟ್ಟಾರು ಬಂಟನ್ನಾಗ
ದೀನಂತ ಕಟಂಜನ ಜಿಗಿದು ನಿಂತಾನು ರಸ್ತೆದ ಮ್ಯಾಗ
ಡಗ್ಗಾಲು ಮಂದಿ ಊರಿ (ಬಂಟಾ) (ಚೀರಲಪ್ಪ) ಹೊಡೆದನಾಗ
ಸುಭೈದಾರ ನಿನ್ನ ಕರುಳು ಜನಿವಾರ ಹಾಕತೀನ ಕೊರಳಾಗ
ಸಂಪಗಾವಿ ಕಛೇರಿಗೆ ಹಚ್ಚತೇನಿ ಮಧ್ಯಾಹ್ನದಾಗ”[೧೩]

ಎಂದು ಬಿಡುಗಡೆಯ ನಂತರ ಪ್ರತಿಜ್ಞೆಯನ್ನು ಮಾಡಿ ಬಂದಿರುತ್ತಾನೆ. ಆ ಪ್ರತಿಜ್ಞೆಯನ್ನು ರಾಯಣ್ಣ ತನ್ನ ಹೋರಾಟದ ಸಂದರ್ಭದಲ್ಲಿ ೧೮೩೦ ಜನವರಿ ೧೩ ರಂದು ನಡುಹಗಲಿನಲ್ಲಿಯೇ ಸಂಪಗಾವಿ ಕಛೇರಿಯ ಮೇಲೆ ದಾಳಿ ಮಾಡಿ ಕಛೇರಿಯನ್ನು ಸುಟ್ಟು ಹಾಕುತ್ತಾನೆ. ಸಂಪಗಾವಿಯ ಅಮಾಲ್ದಾರನಾದ ಕೃಷ್ಣರಾವನು ರಾಯಣ್ಣ ಯಾವ ಸಮಯದಲ್ಲಾದರೂ ದಾಳಿ ಮಾಡಬಹುದೆಂದು ಹೆದರಿ ಕಚೇರಿಯಲ್ಲಿದ್ದ ಹಣವನ್ನು ಮಸೀದಿಯ ಮೇಲಿರಿಸಿ ಕಾವಲಿಗೆ ಕೆಲವರನ್ನು ನೇಮಿಸಿರುತ್ತಾನೆ. ರಾಯಣ್ಣನು ಸಂಪಗಾವಿಗೆ ಬಂದ ನಂತರ ಕಾವಲಿಗಿದ್ದವರು ರಾಯಣ್ಣನ ಸಂಗಡ ಸೇರಿಕೊಳ್ಳುತ್ತಾರೆ. ಕಚೇರಿಯಲ್ಲಿದ್ದ ಕಾಗದ ಪತ್ರಗಳನ್ನೆಲ್ಲಾ ಸುಟ್ಟು ಹಾಕಿ ಕಚೇರಿಗೆ ಬೆಂಕಿ ಹಚ್ಚುತ್ತಾರೆ. ಹಾಗೂ ಕೃಷ್ಣರಾವನ ಮನೆಗೂ ಬೆಂಕಿ ಹಚ್ಚಿಸಿದರು. ಸಂಪಗಾವಿಯ ಕಡೆಯಿಂದ ಬ್ರಿಟಿಷರ ಹೆಚ್ಚಿನ ಸೇನೆ ಬರುತ್ತಿರುವ ಸುದ್ದಿಯನ್ನು ತಿಳಿದು ಸಂಪಗಾವಿಯಿಂದ ದೇಶನೂರು ಗುಡ್ಡದ ಮೂಲಕ ಮರೆಯಾಗುತ್ತಾರೆ.

ಕಿತ್ತೂರಿನ ಜನತೆ ರಾಯಣ್ಣನ ಹೋರಾಟಕ್ಕೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಎಲ್ಲಾ ರೀತಿಯ ಸಹಾಯವನ್ನು ಮಾಡುತ್ತಿದ್ದರು. ರಾಯಣ್ಣ ಜನರಿಗೊಂದು ಮಾಹಿತಿ ತಿಳಿಸಿ ತಾನು ಮತ್ತೊಂದು ಕಡೆ ದಾಳಿ ಮಾಡುತ್ತಿದ್ದ. ಜನರು ಬ್ರಿಟಿಷರ ದಾರಿಯನ್ನು ತಪ್ಪಿಸಲು ರಾಯಣ್ಣನ ಕುರಿತು ಸುಳ್ಳು ಮಾಹಿತಿಯನ್ನು ತಿಳಿಸುತ್ತಿದ್ದರು. ರಾಯಣ್ಣನ ಕುರಿತು ಜನರು ಬ್ರಿಟಿಷರಿಗೆ ಬಗೆ-ಬಗೆಯ ಕಡೆಯ ಇರುವಿಕೆಯನ್ನು ಹೇಳುತ್ತಿದ್ದರು. ಇಂತಹ ಮಾಹಿತಿಗಳಿಂದ ಬ್ರಿಟಿಷರು ಗೊಂದಲಗೊಂಡು ಸೈನ್ಯವನ್ನು ಹರಿದು ಹಂಚಿ ಹೋಗುವಂತೆ ಜನತೆ ರಾಯಣ್ಣನಿಗೆ ಸಹಕಾರವನ್ನು ಕೊಡುತ್ತಿದ್ದರು.

ಸಂಪಗಾವಿಯ ಕಚೇರಿಯ ಮೇಲೆ ರಾಯಣ್ಣ ದಾಳಿ ಮಾಡುತ್ತಿರುವ ವಿಷಯವನ್ನು ತಿಳಿದ ಅಮಲ್ದಾರ ಹೆಚ್ಚಿನ ಸೈನ್ಯದೊಂದಿಗೆ ಸಂಪಗಾವಿಯ ಕಡೆಗೆ ಹೊರಟು ಬರುತ್ತಿರುವ

ವಿಷಯ ರಾಯಣ್ಣನಿಗೆ ತಿಳಿದು ಸಂಪಗಾವಿಯನ್ನು ತೊರೆದನು. ನಂತರ ರಾಯಣ್ಣನಿಗೆ ಅಮಲ್ದಾರನ ಸೈನ್ಯ ಎದುರಾಯಿತು. ರಾಯಣ್ಣನ ಹಾಗೂ ಬ್ರಿಟಿಷ್ ಸೇನೆಯು ಮುಖಾಮುಖಿ ಹೋರಾಟ ಮಾಡುತ್ತಿರುವಾಗ ಅಮಲ್ದಾರನು ಬೆಳಗಾಂವ ಹಾಗೂ ಧಾರವಾಡದಿಂದ ಹೆಚ್ಚಿನ ಸೈನ್ಯವನ್ನು ಕರೆಯಿಸಿ ಕಳುಹಿಸಿದ್ದರು. ಎಲ್ಲಾ ದಿಕ್ಕುಗಳಿಂದಲೂ ಸೈನ್ಯ ತರಿಸಿ ರಾಯಣ್ಣನನ್ನು ಹಿಡಿಯಬೇಕೆಂದು ಯೋಜನೆಯನ್ನು ರೂಪಿಸಿಕೊಂಡರು. ಆದರೆ ಈ ವಿಚಾರ ರಾಯಣ್ಣನಿಗೆ ತಿಳಿದು ತನ್ನ ಸಂಗಡಿಗರೊಂದಿಗೆ ದೇಶನೂರು ಅರಣ್ಯದೊಳಗೆ ಮರೆಯಾಯಿತು.

ಸಂಪಗಾವಿಯಿಂದ ರಾಯಣ್ಣನ ತಂಡವು ದೇಶನೂರು ಅರಣ್ಯದೊಳಗೆ ಸೇರಿಕೊಂಡು ರಾಯಣ್ಣನ ತಂಡವು ಕೆಲ ಸಮಯ ವಿಶ್ರಾಂತಿಯನ್ನು ಪಡೆದು ಮುಂದಿನ ಕಾರ್ಯಗಳಿಗೆ ಸಿದ್ಧತೆಯನ್ನು ಮಾಡತೊಡಗಿತು. ಸಂಗಡಿಗರನ್ನು ಎರಡು ತಂಡಗಳನ್ನಾಗಿ ಮಾಡಿಕೊಂಡು, ಒಂದು ತಂಡ ರಾಯಣ್ಣನ ನೇತೃತ್ವದಲ್ಲಿ ಸುಮಾರು ಒಂದು ಸಾವಿರದಷ್ಟು ಸಂಗಡಿಗರೊಂದಿಗೆ ಸಂಗೊಳ್ಳಿಯ ಮೇಲೆ ದಾಳಿ ಮಾಡಲು ಹೊರಟಿತು. ಈ ವಿಷಯ ಕುಲಕರ್ಣಿಗೆ ತಿಳಿದು ಹೆದರಿ ಅಡಗಿಕೊಳ್ಳಲು ದಾರಿ ಹುಡುಕುತ್ತಿದ್ದ. ಸಂಗೊಳ್ಳಿಗೆ ರಾಯಣ್ಣ ಬರುತ್ತಿರುವ ಸುದ್ಧಿಯನ್ನು ತಿಳಿದ ಸಂಗೊಳ್ಳಿಯ ಜನತೆಯು ರಾಯಣ್ಣನ ಸ್ವಾಗತಕ್ಕಾಗಿ ಕಾಯುತ್ತಿದ್ದರು. ಸಂಗೊಳ್ಳಿಯ ಸರಕಾರಿ ಚಾವಡಿ ಹಾಗೂ ಚಾವಡಿಯಲ್ಲಿದ್ದಂದಹ ಕಾಗದ ಪತ್ರಗಳನೆಲ್ಲಾ ಸುಟ್ಟು ಹಾಕಿದರು. ಹಾಗೂ ಬ್ರಿಟಿಷರಿಗೆ ಸಹಾಯ ಮಾಡುತ್ತಿದ್ದಂತಹ ಕೆಲವರನ್ನು ಬೆದರಿಸಿ ಬ್ರಿಟಿಷರ ಅಥವಾ ಸರ್ಕಾರದ ಕೆಲಸಗಳನ್ನು ಹಾಗೂ ಅವರಿಗೆ ಯಾವುದೇ ರೀತಿಯ ಸಹಾಯ ಮಾಡಬಾರದೆಂದು ಎಚ್ಚರಿಕೆಯನ್ನು ಕೊಟ್ಟು ಸಂಗೊಳ್ಳಿಯನ್ನು ತೊರೆದನು.

ಬ್ರಿಟಿಷರು ರಾಯಣ್ಣನು ಯಾವ ಸಮಯದಲ್ಲಾದರೂ ದಾಳಿ ಮಾಡಬಹುದೆಂದು ಸದಾ ಭಯದ ಸ್ಥಿತಿಯಲ್ಲಿ ಇರುತ್ತಿದ್ದರು. ರಾಯಣ್ಣನ ಯುದ್ಧ ನೀತಿ ಅಥವಾ ಯುದ್ಧತಂತ್ರ ರಾತ್ರಿಯ ವೇಳೆಯಲ್ಲಿ ಇದ್ದಕ್ಕಿದ್ದಂತೆ ದಾಳಿ ಮಾಡುವುದಾಗಿತ್ತು. ರಾಯಣ್ಣನನ್ನು ಹಿಡಿಯಲಾಗದ ಬ್ರಿಟಿಷರಿಗೆ ರಾಯಣ್ಣ ಸಿಂಹಸ್ವಪ್ನನಾಗಿದ್ದನು. ಸಂಪಗಾವಿಯ ಅಮಲ್ದಾರ ರಾಯಣ್ಣನನ್ನು ಹಿಡಿಯಲೇಬೇಕೆಂದು ಹಗಲಿರುಳು ಹುಡುಕುತ್ತಿದ್ದ. ಆದರೆ ಅಮಲ್ದಾರನ ಯೋಚನೆಗಳ ವಿರುದ್ಧವಾಗಿ ದಾಳಿಗಳನ್ನು ಮಾಡುತ್ತಿದ್ದ. ಸಂಗೊಳ್ಳಿಯಿಂದ ರಾಯಣ್ಣ ಕುರುವಿನಕೊಪ್ಪ-ಮಾಸ್ತಿಕೊಪ್ಪಗಳ ಕಡೆ ಹೋಗಿರುವ ಮಾಹಿತಿಯನ್ನು ಪಡೆದ ಅಮಲ್ದಾರನು ಸೈನ್ಯವನ್ನು ಕಳುಹಿಸಿದ. ಆದರೆ ರಾಯಣ್ಣ ದಾರಿಯನ್ನು ಬದಲಿಸಿ ಕಿತ್ತೂರಿನ ಕಡೆ ಹೊರಟು ಹೋಗಿದ್ದನು.

ಬ್ರಿಟಿಷರು ರಾಯಣ್ಣನ ದಾಳಿಗಳಿಂದ ಕಂಗೆಟ್ಟು ಹಿಡಿಯಲಾಗದೆ ಹೋದಾಗ ಹಾಗೂ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದ್ದ ರಾಯಣ್ಣನ ಹೋರಾಟದ ಹಿಂದೆ ಕಿತ್ತೂರು ಸಂಸ್ಥಾನದವರ ಪರೋಕ್ಷ ಬೆಂಬಲಗಳಿವೆ ಎಂದು ಊಹಿಸಿ, ಕಿತ್ತೂರು ಸಂಸ್ಥಾನದ ಕೊನೆಯ ರಾಣಿಯಾದ ವೀರಮ್ಮನನ್ನು

ಬೈಲುಹೊಂಗಲದಿಂದ ಕುಸುಗಲ್ಲಿಗೆ ಸ್ಥಳಾಂತರಿಸಲಾಯಿತು. ವೀರಮ್ಮನನ್ನು ಸ್ಥಳಾಂತರಿಸುವ ವಿಷಯ ಕಿತ್ತೂರಿನ ಜನತೆಗೆ ದುಃಖದ ಜೊತೆಗೆ ಬ್ರಿಟಿಷರ ವಿರುದ್ಧ ಮತ್ತಷ್ಟು ಆಕ್ರೋಶದ ಭಾವನೆ ಬೆಳೆಯಿತು. ಆದರೆ ಕಿತ್ತೂರಿನ ಜನತೆ ನಿಸ್ಸಾಯಕರಾಗಿದ್ದರು. ಈ ವಿಷಯ ರಾಯಣ್ಣನಿಗೆ ತಿಳಿದು ರಾಣಿಯ ಸ್ಥಳಾಂತರವನ್ನು ತಪ್ಪಿಸಲು ತನ್ನ ಸಹಚರರೊಂದಿಗೆ ಬಂದಿದ್ದ. ಆದರೆ ಬ್ರಿಟಿಷರು ರಾಯಣ್ಣ ಬರಬಹುದೆಂದು ಹೆಚ್ಚಿನ ಸೈನ್ಯದೊಂದಿಗೆ ವೀರಮ್ಮನನ್ನು ಸ್ಥಳಾಂತರಿಸಿದರು.

ದಿನದಿಂದ ದಿನಕ್ಕೆ ರಾಯಣ್ಣನ ದಾಳಿಗಳು ಹೆಚ್ಚಾಗಿ ಬ್ರಿಟಿಷರು ರಾಯಣ್ಣನನ್ನು ಹಿಡಿಯಲೇಬೇಕೆಂದು ಬ್ರಿಟಿಷರು ರಾಯಣ್ಣನು ರಾತ್ರಿ ವೇಳೆಯಲ್ಲಿ ಅಡಗಿಕೊಳ್ಳುವ ತಾಣಗಳಿಗೆ ಹುಡುಕಿಕೊಂಡು ಹೊರಟರು. ಈ ವಿಷಯ ರಾಯಣ್ಣನಿಗೆ ತಿಳಿದು ತಂತ್ರಕ್ಕೆ ಪ್ರತಿತಂತ್ರವೆಂಬಂತೆ ರಾಯಣ್ಣನು ಬ್ರಿಟಿಷರಿಗೆ ದೂರದಲ್ಲಿ ತಾನಿರುವ ತಾಣವನ್ನು ತೋರಿಸುವಂತೆ ಹಾಗೂ ಬ್ರಿಟಿಷರಿಗೆ ದಾರಿ ತಪ್ಪಿಸಲು ಅಡುಗೆ ಮಾಡುವ ಹಾಗೆ ಬೆಂಕಿಯನ್ನು ಹಚ್ಚಿ ಅಲ್ಲಿಂದ ದೂರ ಸರಿದರು. ಇದನ್ನು ಕಂಡ ಬ್ರಿಟಿಷ್ ಸೇನೆಯು ರಾಯಣ್ಣನ ತಂಡ ಇಲ್ಲಿಯೇ ಇದೆ ಎಂದು ಗುಂಡಿನ ಸುರಿಮಳೆ ಸುರಿಸಿದರು. ಈ ಘಟನೆಯನ್ನು ನಮ್ಮ ಲಾವಣಿಕಾರರು ಬಹಳ ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

"ತವಕದಿಂದ ತಯಾರಾಗಿ
ಗಿಡಕ ಜ್ಯಾಂವಿಗಿ ಕಟ್ಟಿ ದೂರ ಹೋಗಿ ನಿಂತಾರೋ
ಹೂಲಿಳ ಹಿಡಿಸೂತಾ
ಇಲ್ಲೇ ಇದಾನ ರಾಯನಾಯಕ
ಅಂದು ನೋಡೋ ಅವರು ಆಗ ಪೈರ ಘಟ್ಟ
ಹೊಡೆದಾರೋ ಸುತ್ತಾ

ಗುಂಡ ಮದ್ದು ಅವಟ ಗುಂಡು
ಗರನಾಲು ಟುಬಾಕಿ ಕರುಲಿ
ಹೊಡೆವುತಾರೊ ಇಲ್ಲ ಪುರುಸೊತ್ತಾ

ಆವಾಜ ತಡಪಡ ಅಳ್ಳ ಉರಿದಾಂಗ
ಕೊಳ್ಳದೊಳಗಿನ ಗಿಡಕ ಹೊರದಾರ
ಗುದ್ಧ ನಾದ್ಧಿಡಿತ ಗದಣಿಸುತ
ಮೂರ ತಾಸ ಹೊಡದಾರೈಲ್ಲಾ

ಮದ್ದು ಗುಂಡು ತೀರಿ ಹೋತಿ

ಮುನಿದಾನು ಅವರಿಗೆ ಭಗವಂತ"[೧೪]

ರಾಯಣ್ಣನ ಯುದ್ಧ ತಂತ್ರವಾದ ಗೆರಿಲ್ಲಾ ಯುದ್ಧದ ಈ ತಂತ್ರವು ಬ್ರಿಟಿಷರ ಸೈನ್ಯ ರಾಯಣ್ಣನನ್ನು ಹಿಡಿಯಲು ಅರಣ್ಯ ಪ್ರದೇಶದೊಳಗೆ ಬಂದಂತಹ ಸಂದರ್ಭದಲ್ಲಿ ಈ ವಿಷಯ ರಾಯಣ್ಣನಿಗೆ ಮೊದಲೆ ಬ್ರಿಟಿಷ್ ಸೈನ್ಯ ಬರುವ ಮಾಹಿತಿಯನ್ನು ತಿಳಿದು ಗಿಡ ಮರಗಳಿಗೆ ಪಂಜುಗಳನ್ನು ಕಟ್ಟಿ ದೂರ ಸರಿಯುತ್ತಾರೆ.

ಭ್ರಮೆಯಿಂದ ಬ್ರಿಟಿಷರು ರಾಯಣ್ಣನ ದಂಡು ಇಲ್ಲಿಯೆ ಇದೆಯೆಂದು ಭಾವಿಸಿ ಮದ್ದು-ಗುಂಡುಗಳು ಕಾಲಿಯಾಗುವವರೆಗೆ ಹೊಡೆಯುತ್ತಾರೆ. ಗುಂಡುಗಳ ಶಬ್ದನಿಂತ ನಂತರ ರಾಯಣ್ಣ ಮತ್ತು ಆತನ ಸಹಚರರು ಬ್ರಿಟಿಷ್ ಸೈನ್ಯದ ಸುತ್ತ ಸುತ್ತುವರೆದರು. ರಾಯಣ್ಣ ಅನಿರೀಕ್ಷಿತವಾಗಿ ಬಂದಿದ್ದರಿಂದ ವಿಚಲಿತರಾದ ಸೇನೆಯು ನಿರಾಯುಧನಾಗಿ ನಿಂತಿತ್ತು. ಇದೆ ಸರಿಯಾದ ಸಮಯವೆಂದು ರಾಯಣ್ಣನ ತಂಡವು ಮನಬಂದಂತೆ ಬ್ರಿಟಿಷ್ ಸೇನೆಯನ್ನು ತುಂಡರಿಸತೊಡಗಿತು.

"ಕುರಿಯೊಳಗ ತೋಳ ಹೊಕ್ಕ ಮುರ ಮುರದ

ಒಗಿಗದ ಹಿರಿಹಿರಿದು ಕಡದಾರ ಕತ್ತೀಲಿ

ಸುತ್ತಗಟ್ಟಿ ಕತ್ತಿ ಮಂದಿ ಎತ್ತೆತ್ತೋಗಗೋಡದ ಕಡದಾರ

ಮುತ್ತಗಿ ಹಾಕ್ಯಾರೋ ದಂಡಿನ ಮ್ಯಾಲಿ

ಪಿಸ್ತೂಲಾ ಪಿರಂಗ ಹಿರದು

ಬಾಕ ಬಿಲ್ಲು ಬಾಲೆಲೊಗದು

ನಾಕನೂರಾಮಂದಿ ಕೊಂದರಲ್ಲಿ

ಕಂಡಮಂದಿ ಚಂಡಿ ಕೋದಾರ

ರುಂಡ ಬಿದ್ದವು ಗೊತ್ತ ಇಲ್ಲದ

ತುಂಡ ತುಂಡ ಮಾಡ್ಯಾರೊಂದೆ ಏಟು

ಕೊಳ್ಳದೊಳಗ ಕತಂತ್ರ ಆಗಿ ನೆತ್ತರಕಾವಲಿ

ಅರದೀತಣ್ಣ ಹಿಂತಾ ಶರಿ ಸೂರಿ ಆಗಿದ್ದಿಲ್ಲೊಯಲ್ಲಿ

ಉಳದ ಮಂದಿ ತೆಳಗ ಬಿದ್ದು

ಕಕ್ಕಿ ಚಲ್ಲಿ ಹಲ್ಲ ಕಚ್ಚಿ

ಕಲ್ಲ ಹೊತ್ತಾರಣ್ಣ ತೆಲಿ ಮ್ಯಾಲಿ

ಆದಕೈಲೆ ಉರಯಕ ಯೆದ್ದು

ಹೋದ ಕಿತ್ತೂರ ತಳದಮ್ಯಾಲಿ

ತೇತಪಿರಂಗರ ದಂಡಿತ್ತಲ್ಲಿ

ಸೂರಿ ಮಾಡಿ ಬಿಡುವುನಂತಾರ

ಯಾರು ರಾಜ್ಯ ಆಳದಾಂಗ

ಮೀರಿ ಇರುವುನನಾವು ಲೋಕದಲಿ"[೧೫]

ಈ ಮೇಲಿನ ಲಾವಣಿಯು ಬ್ರಿಟಿಷ್ ಸೈನ್ಯ ರಾಯಣ್ಣನನ್ನು ಹುಡುಕುತ್ತಾ ಅರಣ್ಯ ಪ್ರದೇಶದೊಳಗೆ ಬಂದಾಗ ಬ್ರಿಟಿಷ್ ಸೈನ್ಯದ ದಾರಿ ತಪ್ಪಿಸಿ ಸೈನ್ಯದ ಹಿಂದಿನಿಂದ ದೂತ್ತೆಂದು ದಾಳಿ ಮಾಡಿದ ಸಂದರ್ಭದಲ್ಲಿ ರಾಯಣ್ಣ ಹಾಗೂ ಸಹಚರರು ಬ್ರಿಟಿಷ್ ಸೈನ್ಯವನ್ನು ಸುತ್ತುವರೆದು ಮನಬಂದಂತೆ ಸೈನಿಕರ ರುಂಡವನ್ನು ತಗೆಯುವ ಈ ಸನ್ನಿವೇಶವನ್ನು ಲಾವಣಿಕಾರರು ಚಿತ್ರಿಸಿದ್ದಾರೆ. ಹೀಗೆ ರಾಯಣ್ಣನು ತನ್ನ ಆಲೋಚನೆಯಿಂದ ಬ್ರಿಟಿಷ್ ಸೇನೆಯನ್ನು ಸೋಲಿಸಲು ಮಾಡಿದ ರೀತಿಯನ್ನು ನಮ್ಮ ಲಾವಣಿಕಾರರು ಕಣ್ಣಿಗೆ ಕಟ್ಟುವಂತೆ ಕಟ್ಟಿಕೊಟ್ಟಿದ್ದಾರೆ. ಇದು ರಾಯಣ್ಣನ ಯುದ್ಧ ನೀತಿಯ ತಂತ್ರವಾಗಿತ್ತು.

ಈ ರೀತಿಯ ರಾಯಣ್ಣನ ದಾಳಿಗಳಿಂದ ಬ್ರಿಟಿಷರಿಗೆ ರಾಯಣ್ಣನನ್ನು ಸೆರೆಯಿಡಿಯುವುದು ಕಷ್ಟವಾಗಿತ್ತು. ಏಕೆಂದರೆ ರಾಯಣ್ಣ ಬ್ರಿಟಿಷರ ವಿರುದ್ದ ಎಲ್ಲಿಯೂ ನೇರವಾಗಿ ಯುದ್ಧವನ್ನು ಮಾಡಲಿಲ್ಲ. ರಾಯಣ್ಣ ಯಾವಾಗ? ಎಲ್ಲಿ? ಹೇಗೆ ದಾಳಿ ಮಾಡುತ್ತಾನೋ ಎನ್ನುವುದು ಯಾವೊಬ್ಬ ಬ್ರಿಟಿಷ್ ಅಧಿಕಾರಿಗಳಿಗೆ ಯಾವುದೇ ರೀತಿಯ ಮಾಹಿತಿಗಳಿರಲಿಲ್ಲ. ಇಂದು ಇಲ್ಲಿ ದಾಳಿ ಮಾಡಿದನೆಂದರೆ ನಾಳೆ ೩೦-೪೦ ಕಿ. ಮೀ. ದೂರದ ಪ್ರದೇಶದಲ್ಲಿ ದಾಳಿ ಮಾಡುತ್ತಿದ್ದ. ರಾಯಣ್ಣ ಹಾಗೂ ರಾಯಣ್ಣನ ತಂಡ ಒಂದು ಕಡೆಯಿಂದ ಮತ್ತೊಂದು ಕಡೆ ಕ್ಷಿಪ್ರವಾಗಿ ಸಂಚರಿಸುತ್ತಿತ್ತು. ಹಾಗಾಗಿ ಬ್ರಿಟಿಷರಿಗೆ ರಾಯಣ್ಣನನ್ನು ನೇರವಾಗಿ ಹಿಡಿಯುವುದು ಸಾದ್ಯವಿರಲಿಲ್ಲ. ಬ್ರಿಟಿಷರು ಭಾರತದಾದ್ಯಂತ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿದ ನೀತಿಯನ್ನು ರಾಯಣ್ಣನನ್ನು ಸೆರೆಯಿಡಿಯುವುದಕ್ಕೆ ತಮ್ಮವರನ್ನೆ ಬಳಸಿಕೊಂಡು ಸೆರೆಯಿಡಿದರು. ಇದರಿಂದ ಬ್ರಿಟಿಷರು ರಾಯಣ್ಣನನ್ನು ನೇರವಾಗಿ ಹಿಡಿಯಲು ಸಾಧ್ಯವಿಲ್ಲವೆಂದು ಅರಿತು ಭಾರತದಾದ್ಯಂತ ನಡೆಸಿದ ಕುತಂತ್ರದ ನೀತಿಯನ್ನು ಅನುಸರಿಸಿಲು ಮುಂದಾಗುತ್ತಾರೆ.

ಅವನ ಹಿಡದ ಕೊಟ್ಟರ

ನಿಮಗ ಇನಾಮು ಕೊಡತೇವಂತ

ಡಂಗುರ ಸಾಹೇಬ ಹೊಡಸಿದಾನ ಹತ್ತಿಸಿಟ್ಟಾ

ಸೂರಿಮಾಡಿ ಬಿಟ್ಟಾನಣ್ಣಾ ಯಾರು ಇರದ ಆಗಲಿಲ್ಲಾವಂಗ
ಮೀರಿ ಕುಂತ ಸರವರ ವಳಗ ಬಂಟಾ
ಹರುಷದಿಂದ ಮೂವರು ಕೂಡಿ
ಕುಶಾಲದಿಂದ ಮಾತಾಡಿ
ಮಸಲತ್ತ ಮಾಡ್ಯಾರೊ ಕುನಗಂಟಾ
ಸರ್ದಾರನ ಮುಂದ ಹೋಗಿ ವರ್ಧಿ ಕೊಟ್ಟ
ಹೇಳತಾರು ಕಾಯವ ಮಾಡಿ ಮಾತ ಗಟ್ಟಿಮುಟ್ಟಾ
ರಾಯನಾಯಕನ ಹಿಡದ ನಿಮಗ
ತಂದ ಕೊಡತೇವಂತ ಬಂದರ
ಮೂವರು ಕೂಡಿ ಕಾಗದ ಬರಕೊಟ್ಟಾ
ರಾಯನಾಯಕನಲ್ಹೋಗಿ
ಭಾಂವ ಸುದ್ದ ಮಾತನಾಡ್ಯಾರ
ಜೀವಂವದೊಳಗಿನ ಕಾಳಜಿ ಎಲ್ಲಾ ಬಿಟ್ಟಾ”[೧೬]

ಬ್ರಿಟಿಷರಿಗೆ ರಾಯಣ್ಣನನ್ನು ಹಿಡಿಯಲಾಗದೆ ಇದ್ದಂತಹ ಸಂದರ್ಭದಲ್ಲಿ ರಾಯಣ್ಣನನ್ನು ಹಿಡಿದುಕೊಟ್ಟವರಿಗೆ ಬಹುಮಾನ, ಹಣ, ಜಮೀನು ನೀಡುವುದಾಗಿ ಡಂಗುರ ಸಾರಿದರು. ಆದರೆ ಕಿತ್ತೂರಿನ ಜನತೆ ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ರಾಯಣ್ಣನ ಹೋರಾಟವನ್ನು ಬೆಂಬಲಿಸುತ್ತಿದ್ದರು. ಹಾಗಾಗಿ ರಾಯಣ್ಣನನ್ನು ಹಿಡಿದುಕೊಡಲು ಯಾರೂ ಮುಂದೆ ಬರಲಿಲ್ಲ. ರಾಯಣ್ಣನನ್ನು ಹಿಡಿದುಕೊಡಲು ಯಾರೊಬ್ಬರು ಬರದಿದ್ದನ್ನು ಕಂಡು ಬ್ರಿಟಿಷರು ಮತ್ತಷ್ಟು ಚಿಂತಿತರಾದರು.

ಸಂಪಗಾವಿಯ ಅಮಲ್ದಾರನಾದ ಕೃಷ್ಣರಾವ್ ರಾಯಣ್ಣನ ದಾಳಿಗಳಿಂದ ಭಯಬೀತನಾಗಿದ್ದ ಹಾಗೂ ತನ್ನ ಮೇಲಾಧಿಕಾರಿಗಳಿಂದ ರಾಯಣ್ಣನ್ನು ಹಿಡಿಯುವುದಕ್ಕೆ ಅದೇಶಗಳನ್ನು ಮೇಲಿಂದ ಮೇಲೆ ಕಳುಹಿಸುತ್ತಿದ್ದರು. ಇಂತಹ ಸಂದರ್ಭದಲ್ಲಿ ಕೃಷ್ಣರಾವ್‌ಗೆ ಕಿತ್ತೂರು ಸಂಸ್ಥಾನದ ಕೊನೆಯ ದೊರೆ ಶಿವಲಿಂಗರುದ್ರಸರ್ಜನಿಗೆ ಮಕ್ಕಳಿರಲಿಲ್ಲ. ಹಾಗೂ ಅನಾರೋಗ್ಯದಿಂದ ಬಳಲುತ್ತಿರುವ ಸಂದರ್ಭದಲ್ಲಿ ಕಿತ್ತೂರಿನ ಪಟ್ಟಕ್ಕೆ ದತ್ತು ತೆಗೆದುಕೊಳ್ಳುವಾಗ ಖೂದನಪೂರದ ಲಿಂಗನಗೌಡನಿಗೆ ತನ್ನ ಮಗನನ್ನು ದತ್ತು ಕೊಡಬೇಕೆಂದುಕೊಂಡಿದ್ದ ಆದರೆ, ರಾಣಿ ಚೆನ್ನಮ್ಮ ಲಿಂಗನಗೌಡನ ಮಗನ ಬದಲಿಗೆ ಮಾಸ್ತಮರಡಿಯ ಬಾಳಪ್ಪ ಗೌಡರ ಮಗನನ್ನು ದತ್ತು ತೆಗೆದುಕೊಂಡಿದ್ದರಿಂದ ಲಿಂಗನಗೌಡನಿಗೆ ಅಸಮದಾನವಿತ್ತು. ಇದನ್ನು ಸೂಕ್ಷ್ಮವಾಗಿ ಗ್ರಹಿಸಿದ ಕೃಷ್ಣರಾವನು ಲಿಂಗನಗೌಡನನ್ನು

ಕರೆಯಿಸಿ ಬೆದರಿಸಿ ಆಸೆ-ಅಕಾಂಕ್ಷೆಗಳನ್ನೊಡ್ಡಿ ರಾಯಣ್ಣನನ್ನು ಹಿಡಿದುಕೊಡುವುದಕ್ಕೆ ಒಪ್ಪಿಸುತ್ತಾನೆ. ಲಿಂಗನಗೌಡನು ಭಯಪಡುತ್ತಿದ್ದ ಕಾರಣದಿದಾಗಿ ನೇಗಿನಹಾಳದ ವೆಂಕನಗೌಡನನ್ನು ಜೊತೆಗೆ ಒಪ್ಪಿಸಿ ರಾಯಣ್ಣನ ಹೋರಾಟಕ್ಕೆ ಸಹಾಯ ಹಾಗೂ ಪ್ರೋತ್ಸಾಹದ ಜೊತೆಗೆ ನಾವು ನಿಮ್ಮೊಂದಿಗೆ ಹೋರಾಟಕ್ಕೆ ಬರುತ್ತೆವೆಂದು ಹೇಳಿ ರಾಯಣ್ಣನ ತಂಡದೊಂದಿಗೆ ಸೇರಿಕೊಂಡು ಹಿಡಿದುಕೊಂಡು ಪೂರ್ವ ಯೋಜನೆಯನ್ನು ಹಾಕಿಕೊಂಡು ಇವರ ಜೊತೆ ಸೈನ್ಯವನ್ನು ಕಳುಹಿಸಿತು.

ನಿನ್ನ ಕಡತಿ ಇರತೆವಣ್ಣಾ
ನಮ್ಮನ್ನ ಮಾತ್ರ ಉಳವಿಕೊಳ್ಳೊ
ಆಣೆ ಮಾಡಿ ಬಂದಿದೇವೋ ಹೊಂಟಾ

ಉಪ್ಪು ಗೊಬ್ಬರ ಮುಟ್ಟಿ
ಉರವ ದೀವಿಗೆ ಮುಂದಕುಂತ
ಹೇಳತಾರೋ ಕ್ರಿಯಾ ಕೊಟ್ಟಾ ಕೊಟ್ಟಾ
ಸಾವಿರ ದೇವರ ಆಣೆ ಕೊಟ್ಟು
ಅಕಟವಾಗಿ ಇದ್ದರಣ್ಣಾ
ಘಳಿಯಲಿಲ್ಲೊ ಮನಸ್ಸಿನ್ಯಾನ ಸಿಟ್ಟಾ"[೧೭]

ಖೂದನಪುರದ ಲಿಂಗನಗೌಡ ಹಾಗೂ ನೇಗಿನಾಳದ ವೆಂಕನಗೌಡರು ರಾಯಣ್ಣನ ತಂಡವನ್ನು ಸೇರಿಕೊಂಡು ನಾವು ನಿನ್ನ ಹೋರಾಟದಲ್ಲಿ ಭಾಗಿಯಾಗುತ್ತೇವೆಂದು ಹೇಳಿ, ಅಣೆ, ಪ್ರಮಾಣಗಳನ್ನು ಮಾಡಿ ರಾಯಣ್ಣನ ತಂಡದಲ್ಲಿ ಸೇರಿಕೊಳ್ಳುತ್ತಾರೆ. ಕಿತ್ತೂರಿನ ಸ್ವಾತಂತ್ರ್ಯ ಹೋರಾಟದಲ್ಲಿ ನಾವು ಭಾಗಿಯಾಗಿ ನಿನ್ನೊಂದಿಗೆ ಬ್ರಿಟಿಷರ ಅನ್ಯಾಯ, ದೌರ್ಜನ್ಯ, ಶೋಷಣೆಯ ವಿರುದ್ದ ಹೋರಾಟವನ್ನು ಮಾಡೋಣವೆಂದು ಹೇಳಿ ಕಪಟತನದಿಂದ ಸೇರಿಕೊಂಡರು.

ರಾಯಣ್ಣನನ್ನು ನಂಬಿಸಲು ಕೆಲವು ದಾಳಿಗಳಲ್ಲಿ ಭಾಗವಹಿಸುವ ಹಾಗೆ ಕಪಟ ನಾಟಕವಾಡಿದರು. ರಾಯಣ್ಣ ಇವರಿಬ್ಬರ ಮೇಲೆ ನಂಬಿಕೆಯಿಟ್ಟು ತನ್ನ ತಂಡದೊಂದಿಗೆ ಸೇರಿಕೊಂಡನು ರಾಯಣ್ಣನು ಮಾಡುತ್ತಿದ್ದ ಕೆಲ ದಾಳಿಗಳಲ್ಲಿ ಇವರು ರಾಯಣ್ಣನನ್ನು ನಂಬಿಸಲು ದಾಳಿಗಳಲ್ಲಿ ಭಾಗವಹಿಸುವ ಹಾಗೆ ಕಪಟ ನಾಟಕವಾಡಿದರು. ರಾಯಣ್ಣ ಇವರಿಬ್ಬರ ಮೇಲೆ ನಂಬಿಕೆಯಿಟ್ಟು ತನ್ನ ತಂಡದೊಂದಿಗೆ ಸೇರಿಕೊಂಡನು.

ರಾಯಣ್ಣನ ಕೊನೆಯ ದಾಳಿ ಗಿಡದ ಹುಬ್ಬಳ್ಳಿಯ ಮೇಲೆ ಮಾಡಿದ ದಾಳಿಯಾಗಿದೆ. ಈ ದಾಳಿಯಲ್ಲಿ ಲಿಂಗನಗೌಡ ಹಾಗೂ ವೆಂಕನಗೌಡರು ಭಾಗವಹಿಸಿದ್ದರು. ಈ ದಾಳಿಯ ನಂತರ

ರಾಯಣ್ಣನು ತನ್ನ ಅಡಗು ತಾಣಕ್ಕೆ ಹೋಗುವಾಗ ಗೌಡರಿಬ್ಬರೂ ಹಳ್ಳದಲ್ಲಿ ಸ್ನಾನ ಮಾಡಿಕೊಂಡು ಹೋಗುವುದೆಂದು ಹೇಳಿ ರಾಯಣ್ಣನನ್ನು ಹಿಂದೆ ಕರೆದುಕೊಂಡು ಹೊರಟರು.

ಮಂದಿನೆಲ್ಲಾ ಮುಂದ ಕಳವಿ
ಹೊಂದಿಕ್ಕಿಂದ ನಾಲ್ವರ ನಾವು
ಹಿಂದ ಹೋಗುನಂತರ ಅತಿ ನಿವಳಾ
ಮಾತಕೇಳಿ ರಾಯಣ್ಣ ಮನಸೋತ
ಅವರ ಬೆನ್ನ ಹತ್ತಿದ
ಇಸವಾಸಕ ಬಿದ್ದ ಆದಮಳ್ಳಾ
ಹಳ್ಳಕ ಹೋಗಿ ಜಳಕ ಮಾಡಿ
ಉಣ್ಣು ಯಾಳೇಕ ಹೋಗುನಂದರ
ಕೇಳಿದ ರಾಯಣ್ಣ ಮಾತಗೋಳ
ಕತ್ತಿ ಇಟ್ಟ ಕಬರ ಬಿಟ್ಟ
ತೊಟ್ಟ ಚಣ್ಣ ತಗಿಯಾಕ ಕುಂತನ
ಒತ್ತಿ ಹಿಡಿದಾರ ಬಂದ ಮಾಡಿ ಬಾಳಾ"[೧೮]

ಮೊದಲೆ ಸಂಚು ರೂಪಿಸಿಕೊಂಡು ಬಂದಿದ್ದ ಇವರಿಗೆ ಸ್ನಾನ ಮಾಡುವ ಸಮಯವೇ, ರಾಯಣ್ಣನನ್ನು ಹಿಡಿಯಲು ಸೂಕ್ತ ಸಮಯವೆಂದು ಭಾವಿಸಿ, ನಂತರ ಮೊದಲೆ ಸಂಚು ರೂಪಿಸಿಕೊಂಡು ಬಂದಂತೆ ತನ್ನ ಸೈನ್ಯವನ್ನು ಪೊದೆಗಳಲ್ಲಿ ಕುಳಿತಿರಲು ಹೇಳಿ, ಸ್ನಾನ ಮಾಡುವಾಗ ರಾಯಣ್ಣನಲ್ಲಿದ್ದ ಕತ್ತಿಯನ್ನು ಉಪಾಯವಾಗಿ ತೆಗೆದುಕೊಂಡು ತನ್ನವರನ್ನು ಕರೆಯಿಸಿಕೊಂಡರು. ನಿರಾಯುಧನಾಗಿದ್ದ ರಾಯಣ್ಣನ ಮೇಲೆ ಮುಗಿಬಿದ್ದು ಹಿಡಿದು ಕಟ್ಟಿದರು. ಹೀಗೆ ಮೋಸದ ಮೂಲಕ ರಾಯಣ್ಣನನ್ನು ಹಿಡಿದ ನಂತರ ಗೌಡರಿಬ್ಬರು ರಾಯಣ್ಣನ ಖಡ್ಗವನ್ನು ತೆಗೆದುಕೊಂಡು ಹೋಗಿ ರಾಯಣ್ಣನ ಸಂಗಡಿಗರಿಗೆ ತೋರಿಸಿ ಬ್ರಿಟಿಷರ ಸೈನ್ಯ ರಾಯಣ್ಣನನ್ನು ಹಿಡಿದುಕೊಂಡೊದರು. ರಾಯಣ್ಣ ನೀವು ತಪ್ಪಿಸಿಕೊಳ್ಳಬೇಕೆಂದು ಖಡ್ಗಕೊಟ್ಟಿರುವುದಾಗಿ ಹೇಳಿ ತೋರಿಸಿದರು. ಇದನ್ನು ಕಂಡ ರಾಯಣ್ಣನ ಸಂಗಡಿಗರು ಚಲ್ಲಾಪಿಲ್ಲಿಯಾಗಿ ಅರಣ್ಯದೊಳಗೆ ಓಡಿಹೋದರು. ಮತ್ತೆ ಕೆಲವರು ತಾವಾಗಿಯೇ ಬಂದು ಶರಣಾದರು.

ರಾಯಣ್ಣನ ಹಿಡಿದ ಸುದ್ದಿ ಕಿತ್ತೂರಿನಾದ್ಯಂತ ತಿಳಿದು ಕಿತ್ತೂರಿನ ಜನತೆ ದುಃಖಿತರಾದರು. ರಾಯಣ್ಣನನ್ನು ಧಾರವಾಡದ ಸೆರೆಮನೆಗೆ ಹಾಕಿದರು. ವಿಚಾರಣೆಯನ್ನು ಮಾಡತೊಡಗಿದರು.

ರಾಜದ್ರೋಹ, ಬಂಡುಕೋರ, ಸುಲಿಗೆ ಮಾಡಿದವನು ಹೀಗೆ ಅನೇಕ ಆರೋಪಗಳನ್ನು ರಾಯಣ್ಣನ ಮೇಲೆ ಹೇರಿ ವಿಚಾರಣೆ ಎಂಬ ಕಪಟ ನಾಟಕವಾಡಿ ಗಲ್ಲು ಶಿಕ್ಷೆಯನ್ನು ವಿಧಿಸಿದರು. ರಾಯಣ್ಣನ ಜೊತೆಗೆ ೧೨ಜನರನ್ನು ಬಂಧಿಸಿ ಉಳಿದವರನ್ನು ಬಿಡುಗಡೆಗೊಳಿಸಿದರು. ರಾಯಣ್ಣ ಮತ್ತು ಆರು ಜನರಿಗೆ ಗಲ್ಲು ಶಿಕ್ಷೆಯನ್ನು ಹಾಗೂ ಇನ್ನೂಳಿದ ಆರು ಜನರಿಗೆ ಕರಿನೀರಿನ ಶಿಕ್ಷೆಯನ್ನು ವಿಧಿಸಿದರು. ರಾಯಣ್ಣನ ದಾಳಿಗಳು ಹೆಚ್ಚಾಗಿ ನಂದಗಡದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡು ಬಂದಿದ್ದರಿಂದ ಮತ್ತೆ ಯಾರು ಹೋರಾಟ ಮಾಡಬಾರದೆಂಬ ಕಾರಣಕ್ಕೆ ರಾಯಣ್ಣನ್ನು ನಂದಗಡದಲ್ಲಿ ದಿನಾಂಕ ೨೬.೧.೧೮೩೧ರಂದು ಗಲ್ಲಿಗೇರಿಸಲಾಯಿತು. ಸನ್ಯಾಸಿವೇಶದಲ್ಲಿ ತಲೆಮರೆಸಿಕೊಂಡಿದ್ದ ರಾಯಣ್ಣನ ಆಪ್ತ ಸ್ನೇಹಿತ ಚೆನ್ನಬಸವ ರಾಯಣ್ಣನ ಸಮಾಧಿಯ ಮೇಲೆ ಒಂದು ಆಲದ ಮರವನ್ನು ನೆಟ್ಟನು. ದಿನಗಳೆದಂತೆ ಜನರು ರಾಯಣ್ಣನನ್ನು ಪೂಜಿಸತೊಡಗಿದರು. ಮಕ್ಕಳಾಗದವರು ಹರಕೆಯನ್ನು ಹೊತ್ತು ನಮಗೆ ರಾಯಣ್ಣನಂತಹ ಮಗುವಾಗಲೆಂದು ತೊಟ್ಟಿಲುಗಳನ್ನು ಕಟ್ಟಿ ಪೂಜಿಸತೊಡಗಿದರು. ಹೀಗೆ ಒಬ್ಬ ಸಾಮಾನ್ಯನಾದ ರಾಯಣ್ಣನು ಹೋರಾಡಿ ಕಿತ್ತೂರಿನ ಮನೆ ಮನೆಯವರಿಗೆ ಚಿರಪರಿಚಿತನಾಗಿದ್ದಾನೆ. ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ಉತ್ತರ ಕರ್ನಾಟಕದ ಜನತೆಗೆ ಸ್ಪೂರ್ತಿಯಾಗಿ ರಾಯಣ್ಣನು ಅಮರನಾಗಿದ್ದಾನೆ. ಜನತೆಯು ರಾಯಣ್ಣನನ್ನು ದೈವತ್ವಕ್ಕೆರಿಸಿ ಪೂಜಿಸುತ್ತಾರೆ. ಹಾಗೂ ಜಾತ್ರೆ, ಉತ್ಸವವನ್ನು ಪ್ರತಿವರ್ಷ ಮಾಡಿಕೊಂಡು ಬರುತ್ತಿರುವುದನ್ನು ಕಾಣಬಹುದು.

### ೫.೨. ತ್ರಿಪದಿ

ರಾಯಣ್ಣನ ಬಗ್ಗೆ ನಮಗೆ ಸಿಗುವ ಅಧಿಕೃತ ಮಾಹಿತಿಗಳೆಂದರೆ ಬ್ರಿಟಿಷರು ಬರೆದಂತಹ ದಾಖಲೆಗಳು. ಇದರ ಜೊತೆಗೆ ನಮ್ಮ ಜನರಿಂದ ಬೆಳೆದುಬಂದಂತಹ ಜನಪದ ಸಾಹಿತ್ಯವು ಅವನ ವ್ಯಕ್ತಿತ್ವ, ಹೋರಾಟದ ವಿವರವನ್ನು ತಿಳಿಸುತ್ತವೆ. ಹಾಗೂ ಅವನ ಹೋರಾಟದ ಪ್ರಭಾವವನ್ನು ಕಣ್ಣಿಗೆ ಕಟ್ಟುವಂತೆ ಜನಪದರು ಚಿತ್ರಿಸಿದ್ದಾರೆ. ಜಾನಪದ ಸಾಹಿತ್ಯವು ಕೆಲವೊಂದು ಸಲ ಅತಿಶಯೋಕ್ತಿಗಳಿಂದ ತುಂಬಿರುತ್ತದೆ. ಆದರೆ ಘಟನೆಯಲ್ಲಿನ ಅಂಶಗಳನ್ನು ತಿಳಿಯಲು ಸರಕಾರಿಯಾಗುತ್ತದೆ. ದಾಖಲೆಗಳಲ್ಲಿ ಕಾಣಲಾಗದ ಅನೇಕ ವಿವರಗಳನ್ನು ತಿಳಿಯಲು ಸಹಾಯಕವಾಗುತ್ತವೆ. ಸರಕಾರದ ದೃಷ್ಟಿಯಿಂದ ಅಧಿಕಾರಿಗಳು ತಮ್ಮ ವರದಿಗಳನ್ನು ನೀಡಿರುತ್ತಾರೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಟ ಮಾಡಿದ ಹೋರಾಟಗಾರರನ್ನು ಬ್ರಿಟಿಷರು ಪುಂಡರು, ತಂಟೆಕೋರರರು, ಗಲಭೆ ಮಾಡುವವರು ಎಂದು ಕರೆದಿದ್ದಾರೆ.

ಜನಪದ ಸಾಹಿತ್ಯದ ತಾಯಿ ಬೇರು ಎಂದು ಕರೆಯುವ ತ್ರಿಪದಿಗೆ ಕನ್ನಡ ಸಾಹಿತ್ಯದಲ್ಲಿ ಮೊದಲ ಸ್ಥಾನವಿದೆ. ತ್ರಿಪದಿಯು ರಾಗಬದ್ಧವಾಗಿ ಹಾಡುವಂತದ್ದು. ತ್ರಿಪದಿಯಲ್ಲಿ ಗೇಯತೆ ಮುಖ್ಯವಾಗಿರುತ್ತದೆ. ಒಂದೇ ತ್ರಿಪದಿಯನ್ನು ಬೀಸುವ, ಕುಟ್ಟುವ, ರಂಟೆ ಕುಂಟೆ ಹೊಡೆಯುವ

ಪ್ರಸಂಗಗಳಲ್ಲಿ ಬೇರೆ ಬೇರೆ ದಾಟಿಯಿಂದ ಹಾಡಬಹುದಾದಂತಹ ಸಾಹಿತ್ಯ. ಸ್ವಾತಂತ್ರ್ಯ ಹೋರಾಟಗಾರನಾದ ಸಂಗೊಳ್ಳಿ ರಾಯಣ್ಣನ ಕುರಿತು ಕೆಲವು ತ್ರಿಪದಿಗಳು ರಚನೆ ಗೊಂಡಿರುವುದನ್ನು ಕಾಣುತ್ತೇವೆ. ತ್ರಿಪದಿಗಳು ರಾಯಣ್ಣನ ಸಂಕ್ಷಿಪ್ತ ಇತಿಹಾಸವನ್ನು ತಿಳಿಯಲು ಸಹಾಯಕವಾಗುತ್ತವೆ.

ಬ್ರಿಟಿಷರ ಬಂಧನದಲ್ಲಿದ್ದ ಕಿತ್ತೂರು ರಾಣಿ ಚೆನ್ನಮ್ಮಳನ್ನು ಗುಪ್ತವೇಶದಿಂದ ರಾಯಣ್ಣನು ಗುಪ್ತವಾಗಿ ಕಂಡು ಕಿತ್ತೂರು ಸಂಸ್ಥಾನವನ್ನು ಮತ್ತೆ ಸ್ವಾತಂತ್ರ್ಯಗೊಳಿಸುತ್ತೇನೆ ಎಂದು ಹೇಳಿದಂತಹ ಮಾತುಗಳು ಈ ಕೆಳಗಿನಂತಿವೆ.

'ಗೆದ್ದ ಕಿತ್ತೂರ ತಂದು ಉದ್ದ ಬೀಳುವೆ ತಾಯಿ
ಕದ್ದ ಮಾತಲ್ಲ ನಿಮ್ಮಾಣಿ। ಇಲ್ಲದಿದ್ರ।
ಬಿದ್ದು ಹೋಗುವೆ ರಣದಾಗ॥'[೧೯]

ಸೆರೆಮನೆಯಲ್ಲಿದ್ದಂತಹ ರಾಣಿಯನ್ನು ಮಾರುವೇಶದಲ್ಲಿ ಭೇಟಿಯಾದ ರಾಯಣ್ಣನು ಹೋರಾಟ ಮಾಡಿ ಕಿತ್ತೂರನ್ನು ಜಯಿಸುತ್ತೇನೆ. ಇಲ್ಲದಿದ್ದರೆ ರಣದಾಗ ವೀರಮರಣವನ್ನು ಹೊಂದುತ್ತೇನೆ. ಒಬ್ಬ ನಿಜವಾದ ವೀರನಿಗೆ ಇರುವುದು ಎರಡೇ ದಾರಿ. ಒಂದು ಗೆಲುವು ಇಲ್ಲವೇ ವೀರ ಮರಣ ಎಂದು ಹೇಳುವ ಸಂದೇಶವನ್ನು ಈ ತ್ರಿಪದಿಯು ತಿಳಿಸುತ್ತದೆ.

ರಾಯಣ್ಣನ ಕುರಿತ ಲಾವಣಿಗಳ ಜೊತೆಗೆ ಕೋಲಾಟದ ಪದಗಳು, ಗೀಗಿ ಪದಗಳು, ಹಂತಿ ಪದಗಳು, ತ್ರಿಪದಿಗಳು, ಡೊಳ್ಳು ಪದಗಳು ಮುಂತಾದವುಗಳನ್ನು ಕಾಣಬಹುದು. ಇಂತಹ ಜಾನಪದ ಪ್ರಕಾರಗಳು ರಾಯಣ್ಣನ ಚರಿತ್ರೆ ಹಾಗೂ ಸ್ವಾತಂತ್ರ್ಯ ಹೋರಾಟದ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುತ್ತವೆ.

'ಸಂಗೊಳ್ಳಿ ರಾಯಣ್ಣ ಹಂಗ್ಹರಿದ ದಳವಾಯಿ
ದಂಗೆ ಎಬ್ಬಿಸಿದ ನಾಡಾಗೊ ।ಕಿತ್ತೂರ।
ಕಂಗೆಟ್ಟ ಜನರೆಲ್ಲ ಕೂಡ್ಯಾರೊ॥'[೨೦]

ರಾಯಣ್ಣ ನಡೆಸಿದಂತಹ ಸ್ವಾತಂತ್ರ್ಯ ಹೋರಾಟದ ಕುರಿತ ಈ ತ್ರಿಪದಿಯು ಸಂಗೊಳ್ಳಿ ರಾಯಣ್ಣನು ಬಲಾಢ್ಯರಾದಂತಹ ಬ್ರಿಟಿಷರ ವಿರುದ್ಧ ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸುವುದಕ್ಕಾಗಿ ಹೋರಾಟದ ಸಿದ್ಧತೆಗಳನ್ನು ಮಾಡಿಕೊಳ್ಳು ಸಂದರ್ಭದಲ್ಲಿ ಕಿತ್ತೂರಿನ ಜನರು ರಾಯಣ್ಣನನ್ನು ನಾಯಕನನ್ನಾಗಿ ಸ್ವಿಕರಿಸಿದರು. ಕಿತ್ತೂರನ್ನು ಸ್ವತಂತ್ರಗೊಳಿಸಲು ಆರಂಭಿಸಿದ ಹೋರಾಟದಲ್ಲಿ ಕಿತ್ತೂರಿನ ಜನರು ಯಾವ ರೀತಿಯಲ್ಲಿ ರಾಯಣ್ಣನಿಗೆ ಸಹಕಾರ ಹಾಗೂ ಹೋರಾಟದಲ್ಲಿ ಕೂಡಿಕೊಂಡರು ಎಂಬಂತಹ ಅಂಶವನ್ನು ಈ ಮೇಲಿನ ತ್ರಿಪದಿಯು ರಾಯಣ್ಣನ ಹೋರಾಟದ ಚಿತ್ರಣವನ್ನು ಚಿತ್ರಿಸುತ್ತದೆ.

'ಸಂಗೊಳ್ಳಿ ರಾಯಣ್ಣ ಮಂಗ್ಯಾನ ಕುಲದಾಂವ
ಟೊಂಗಿ ಟೊಂಗೆಲ್ಲ ಜಿಗಿದಾನ।ರಾಯಣ್ಣ।
ಇಂಗರಾಜ್ಗ ಕಯ್ಯ ಕೊಟ್ಟಾನ॥'[೨೧]

ಸಂಗೊಳ್ಳಿ ರಾಯಣ್ಣ ಹೋರಾಟದ ಸಿದ್ದತೆಗಳನ್ನು ಮಾಡಿಕೊಂಡ ನಂತರ ಬ್ರಿಟಿಷರ ದಾರಿ ತಪ್ಪಿಸಿ ದಾಳಿಗಳನ್ನು ಮಾಡುತ್ತಿದ್ದ. ರಾಯಣ್ಣ ಶಿವಾಜಿಯ ಹಾಗೆ ಗೆರಿಲ್ಲಾ ಯುದ್ಧ ನೀತಿಯನ್ನು ಅನುಸರಿಸಿದ್ದರಿಂದ ರಾಯಣ್ಣ ಕಿತ್ತೂರಿನಾದ್ಯಂತ ಸಂಚರಿಸುತ್ತಿದ್ದ. ರಾಯಣ್ಣ ಯಾವ ಸಮಯದಲ್ಲಿ ಎಲ್ಲಿ ಹೇಗೆ ದಾಳಿ ಮಾಡುತ್ತಿದ್ದನೆಂದು ಯಾರಿಗೂ ತಿಳಿಯುತ್ತಿರಲಿಲ್ಲ. ಈ ತ್ರಿಪದಿಯು ರಾಯಣ್ಣನ ಹೋರಾಟದ ಹಾಗೂ ವ್ಯಕ್ತಿತ್ವದ ಚಿತ್ರಣವನ್ನು ನೀಡುತ್ತದೆ. ಬ್ರಿಟಿಷರ ಒಂದೊಂದೆ ಕಚೇರಿಗಳ ಮೇಲೆ ದಾಳಿ ಮಾಡಿ, ಬ್ರಿಟಿಷರಿಗೆ ಸಿಂಹಸ್ವಪ್ನವಾದಾಗ ರಾಯಣ್ಣನ ಕಾರ್ಯಚಟುವಟಿಕೆಗಳ ಚುರುಕುತನವನ್ನು ಈ ತ್ರಿಪದಿಯು ತಿಳಿಸುತ್ತದೆ.

ಸಂಗೊಳ್ಳಿಯ ಕುಲಕರ್ಣಿ ಬಾಳಪ್ಪ ಮತ್ತು ರಾಯಣ್ಣನನ್ನು ಕುರಿತ ಈ ಕೆಳಗಿನ ತ್ರಿಪದಿಯು ಕುಲಕರ್ಣಿಯ ದ್ವೇಷವನ್ನು ತಿಳಿಯಲು ಸಹಾಯಕವಾಗುತ್ತದೆ.

ಬೆಂಕಿ ಹಚ್ಯಾನೊ ಬಾಳ್ಯಾ ಶಾನಭಾಗ
ಹಲ್ಲು ಮಸಿತಾನೊ ರಾಯಣ್ಣ ಮ್ಯಾಗ।ಬಾಳ್ಯಾ।
ಹಸಿ ಬೆಂಕಿ ಕಟ್ಯಾನೊ ಪದರಾಗ॥"[೨೨]

ರಾಯಣ್ಣನ ಕುರಿತ ಪ್ರತಿಯೊಂದು ವಿವರಗಳನ್ನು ನಾವು ತ್ರಿಪದಿಗಳಲ್ಲಿ ಕಾಣಬಹುದು. ಜನಪದಕಾರರು ರಾಯಣ್ಣನನ್ನು ಮೋಸದಿಂದ ಹಿಡಿದು ಕೊಡುವ ಸನ್ನಿವೇಶವನ್ನು ಈ ಕೆಳಗಿನ ತ್ರಿಪದಿಯು

ನಾಡ ಕಟ್ಟು ರಾಯನಿಗೆ ಮೋಸಮಾಡ್ಯಾರೊ।
ಡೋರಿ ಮಡುವಿನ ದಂಡಿಮ್ಯಾಲ ಫಾಸಿಮಾಡ್ಯಾರೊ।ನಮ್ಮವರು।
ಭೂಮಿ ಸೀಮಿ ಆಸೆಕ ಹಿಡದು ಕೊಟ್ಟಾರೊ॥"[೨೩]

ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ತಮ್ಮ ಆಸೆ ಅಕಾಂಕ್ಷೆಗಳನ್ನು ಬದಿಗಿಟ್ಟು ಹೋರಾಟದಲ್ಲಿ ತೊಡಗಿದ್ದ ರಾಯಣ್ಣನಿಗೆ ನಂಬಿಕೆ ದ್ರೋಹಿಗಳಿಂದ ಹೋರಾಟ ವ್ಯರ್ಥವಾಯಿತು. ನಮ್ಮವರೆ ನಮಗೆ ಮೂಲ ಎನ್ನುವಂತೆ ರಾಯಣ್ಣನನ್ನು ಕುತಂತ್ರದ ಮೂಲಕ ಹಿಡಿದು ಗಲ್ಲಿಗೇರಿಸುತ್ತಾರೆ.

ತ್ರಿಪದಿಗಳು ಭಾರತದ ಸ್ವಾತಂತ್ರ್ಯ ಚಳುವಳಿಯ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಬಹಳ ಮಹತ್ವದ ಪಾತ್ರವನ್ನು ವಹಿಸುತ್ತದೆ. ಕಿತ್ತೂರು ಸಂಸ್ಥಾನವನ್ನು ಬ್ರಿಟಿಷರಿಂದ ಮುಕ್ತಗೊಳಿಸಿ ಕಿತ್ತೂರು

ದೇಸಾಯಿಯರ ಆಡಳಿತವನ್ನು ಮರಳಿ ಸ್ಥಾಪಿಸುವುದಕ್ಕಾಗಿ ರಾಯಣ್ಣ ಮಾಡಿದಂತಹ ಹೋರಾಟವು ನಮ್ಮವರಿಂದಲೇ ಅಂತ್ಯವಾಯಿತು.

**೫.೩. ಕೋಲು ಪದಗಳು**

ಕೋಲಾಟದ ಪದಗಳು ಚಾರಿತ್ರಿಕ ವಿಷಯಗಳನ್ನು ಒಳಗೊಂಡಿರುತ್ತವೆ. ಪೌರಾಣಿಕ, ಚಾರಿತ್ರಿಕ, ಸಾಮಾಜಿಕ ಮುಂತಾದ ಅಂಶಗಳು ಕೋಲಾಟದ ಹಾಡುಗಳ ವಸ್ತುವಾಗಿರುತ್ತವೆ. ಪ್ರಸ್ತುತ ದಿನಗಳಲ್ಲಿಯೂ ಗ್ರಾಮೀಣ ಪ್ರದೇಶಗಳಲ್ಲಿ ರಾತ್ರಿಯ ಸಮಯದಲ್ಲಿ ಕೋಲಾಟವಾಡುವಂತಹದನ್ನು ಇಂದಿಗೂ ಕಾಣಬಹುದು. ಐತಿಹಾಸಿಕ ವೀರರನ್ನು ಕುರಿತು ಕೋಲಾಟದ ಹಾಡುಗಳು ಹೆಚ್ಚು ಜನಪ್ರಿಯತೆಯನ್ನು ಗಳಿಸಿವೆ. ಸ್ವಾತಂತ್ರ್ಯ ಹೋರಾಟಗಾರನಾದ ಸಂಗೊಳ್ಳಿ ರಾಯಣ್ಣನ ಕುರಿತು ಕೋಲಾಟದ ಪದಗಳು ರಚನೆಗೊಂಡಿರುವದನ್ನು ಕಾಣಬಹುದು.

ಸಂಗೊಳ್ಳಿ ರಾಯಣ್ಣನನ್ನು ಕುರಿತಂತೆ ಲಾವಣಿಗಳ ಕಡೆಗೆ ಹೆಚ್ಚಿನ ಗಮನವನ್ನು ಕೊಟ್ಟಿದ್ದಾರೆ. ಲಾವಣಿಗಳು ಹೆಚ್ಚಾಗಿ ಸಂಗ್ರಹವಾಗಿದ್ದು, ಉಳಿದಂತಹ ಜನಪದ ಸಾಹಿತ್ಯದ ಸಂಗ್ರಹವಾಗಿರುವುದು ಬೆರಳಣಿಕೆಯಷ್ಟು ಮಾತ್ರ. ರಾಯಣ್ಣನನ್ನು ಕುರಿತು ಉತ್ತರ ಕರ್ನಾಟಕದಲ್ಲಿ ಇಂದಿಗೂ ಕೋಲಾಟದ ಪದಗಳು ಜನಪ್ರಿಯತೆಯನ್ನು ಪಡೆದಿವೆ. ರಾಯಣ್ಣನ ಕುರಿತು ಈ ಕೆಳಗಿನ ಕೋಲು ಪದವು ರಾಯಣ್ಣನ ವ್ಯಕ್ತಿತ್ವವನ್ನು ಚಿತ್ರಿಸುತ್ತದೆ.

'ಸಂಗೊಳ್ಳಿ ರಾಯಣ್ಣ ಸ್ವಂತಕ್ಕೆ ಶೂರಣ್ಣ ।
ಕಿತ್ತೂರ ನಾಡ ಹುಲಿಯಣ್ಣ॥ ಕೋಲು ಕೋಲೆಣ್ಣ ಕೋಲ ॥'[೨೪]

ರಾಯಣ್ಣನು ಸಾಹಸಿಯಾಗಿದ್ದು, ಕಿತ್ತೂರು ನಾಡಿನ ಹುಲಿಯಾಗಿದ್ದನು. ಕಿತ್ತೂರಿನಲ್ಲಿ ನಡೆಸಿದಂತಹ ಕಿತ್ತೂರು ಸಂಸ್ಥಾನದ ಹೋರಾಟಕ್ಕೆ ಕಿತ್ತೂರಿನ ಜನರನ್ನು ಸಜ್ಜುಗೊಳಿಸಿದ ರೀತಿಯನ್ನು ತಿಳಿಯಬಹುದು.

ಸಂಗೊಳ್ಳಿ ರಾಯಣ್ಣನ ಗೆಳೆಯರ ಕುರಿತು ಲಾವಣಿಗಳು ಮೂಲಕ ತಿಳಿಯಬಹುದು. ರಾಯಣ್ಣನಿಗೆ ಜೀವಕ್ಕೆ ಜೀವ ಕೊಡುವಂಹ ಗೆಳೆಯರಿದ್ದರು. ಅಂತವರಲ್ಲಿ ವಡ್ಡರ ಯಲ್ಲಣ್ಣ ಬಿಚ್ಚುಗತ್ತಿ ಚನ್ನಬಸವ ಪ್ರಮುಖರು ಇವರನ್ನು ಕುರಿತು

'ಸಂಗೊಳ್ಳಿ ರಾಯಣ್ಣ ವಡ್ಡರ ಯಲ್ಲಣ್ಣ
ಬಿಚ್ಚುಗತ್ತಿ ಚೆನ್ನಬಸಣ್ಣ
ಅಪರೂಪದ ಗೆಳೆತನ ಲೋಕದೊಳಿಲ್ಲಣ್ಣ
ನಾಡ ಕಿತ್ತೂರ ಹೆಸರ ಮೆರಿಸ್ಯಾರಣ್ಣ॥ ಕೋಲ ॥'[೨೫]

ಜೀವಕ್ಕೆ ಜೀವ ಕೊಡುವಂತಹ ಗೆಳೆಯರನ್ನು ಹೊಂದಿದ್ದಂತಹ ರಾಯಣ್ಣ. ಗೆಳೆಯರ ಜೊತೆ ಸೇರಿ ಕಿತ್ತೂರಿನ ಹೆಸರನ್ನು ಕೊಂಡಾಡುವಂತಹ ಕೆಲಸವನ್ನು ಮಾಡುತ್ತಿದ್ದಾರೆಂದು ತಿಳಿದುಬರುತ್ತದೆ. ಬಿಚ್ಚುಗತ್ತಿ ಚನ್ನಬಸವ ಕತ್ತಿವರಸೆಯಲ್ಲಿ ನೈಪುಣ್ಯತೆಯನ್ನು ಹೊಂದಿದ್ದರೆ ವಡ್ಡರ ಯಲ್ಲಣ್ಣ ಗುರಿ ಹೊಡೆಯುವುದರಲ್ಲಿ ನೈಪುಣ್ಯತೆಯನ್ನು ಹೊಂದಿದ್ದ. ಇಂತಹ ಗೆಳೆಯರನ್ನು ಸೇರಿ ಮತ್ತೆ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಲು ಹೋರಾಟವನ್ನು ಮಾಡುತ್ತಾನೆ.

ಕಿತ್ತೂರು ಸಂಸ್ಥಾನವನ್ನು ಸ್ವತಂತ್ರಗೊಳಿಸಲು ಹೋರಾಟವನ್ನು ಸಂಗೊಳ್ಳಿ ರಾಯಣ್ಣನು ಸಮಾನಮನಸ್ಕರೊಂದಿಗೆ ಸೇರಿ ಹೋರಾಟಕ್ಕೆ ಬೇಕಾದಂತಹ ಸಿದ್ಧತೆಗಳನ್ನು ಮಾಡಿಕೊಂಡು ಬ್ರಿಟಿಷರ ಒಂದೊಂದೇ ಕಚೇರಿಗಳ ಮೇಲೆ ದಾಳಿ ಮಾಡುತ್ತಾ ಬರುತ್ತಾನೆ. ಹೋರಾಟದ ಸಂದರ್ಭವನ್ನು ಕೋಲಾಟದ ಪದಗಳಲ್ಲಿ ರಾಯಣ್ಣನ ದಾಳಿಯನ್ನು ಪರಿಣಾಮಕಾರಿಯಾಗಿ ಚಿತ್ರಿಸಿವೆ. ರಾಯಣ್ಣನು ದಾಳಿ ಮಾಡಿ ಹಳ್ಳಿಗಳನ್ನು ಕೊಳ್ಳೆ ಹೊಡೆಯುವಂತಹ ಸಂದರ್ಭವನ್ನು ಈ ಕೆಳಗಿನ ಸಾಲುಗಳಲ್ಲಿ ಹಿಡಿದಿಟ್ಟಿದ್ದಾರೆ.

> 'ರಾಯನಾಯ್ಕನ ದಂಡು, ಕೊಳ್ಳಿ ಹೊಡೆದಿತ ಹಳ್ಳಿ।
> ಗುಡುಗು ಮಿಂಚಿನ ಅಡ ಮಳೆಯಂಗ॥ ಕೋಲ ॥'[೨೬]

ರಾಯಣ್ಣನ ಹೋರಾಟದ ಅಬ್ಬರವನ್ನು ಈ ಕೋಲಾಟದ ಪದದ ಮೂಲಕ ತಿಳಿಯಬಹುದು.

ಕೋಲಾಟದ ಪದಗಳು ಸರಳವಾಗಿ, ಸುಂದರವಾಗಿ, ಗ್ರಾಮೀಣ ಭಾಷೆಯಲ್ಲಿ ರಚನೆಯಾಗಿರುತ್ತವೆ. ಹಾಗೂ ಜನರಿಗೆ ಸುಲಭವಾಗಿ ಅರ್ಥವಾಗುವಂತಹ ಮಾಧ್ಯಮಗಳಲ್ಲಿ ಕೋಲಾಟದ ಪದಗಳು ಒಂದು. ಕೋಲಾಟದ ಪದಗಳು ಸಂಗೊಳ್ಳಿ ರಾಯಣ್ಣನ ಕ್ರಾಂತಿಕಾರಿ ಹೋರಾಟವನ್ನು ತಿಳಿಸುತ್ತಾ, ಬ್ರಿಟಿಷರು ರಾಯಣ್ಣನನ್ನು ಮೋಸದಿಂದ ಬಂಧಿಸಿದ್ದು ಹಾಗೂ ಗಲ್ಲಿಗೇರಿಸಿದ್ದನ್ನು ಜನರು ಈ ರೀತಿಯಲ್ಲಿ ಹಾಡಿರುವುದನ್ನು ಕಾಣುತ್ತೇವೆ.

**೫.೪. ಡೊಳ್ಳು ಪದಗಳು**

ಜನಪದ ಸಾಹಿತ್ಯದ ಪ್ರಕಾರಗಳಲ್ಲಿ ಒಂದಾದ ಡೊಳ್ಳಿನ ಪದಗಳು ಮಹತ್ವದ್ದಾಗಿವೆ. ಇವು ಆರಂಭಕಾಲದಲ್ಲಿ ಒಂದು ಸಮುದಾಯಕ್ಕೆ ಮಾತ್ರ ಸಿಮೀತವಾಗಿದ್ದವು. ಆದರೆ ಇಂದು ಡೊಳ್ಳಿನ ಪದಗಳನ್ನ ಎಲ್ಲಾ ಸಮುದಾಯದವರು ಹಾಡುತ್ತಿರುವುದನ್ನ ನಾವು ಕಾಣಬಹುದು. ಡೊಳ್ಳಿನ ಹಾಡುಗಳಲ್ಲಿ ಚರಿತ್ರೆ, ಪರಂಪರೆ, ಸಂಸ್ಕೃತಿ ಮುಂತಾದ ಅಂಶಗಳಿರುವುದನ್ನು ಗಮನಿಸಬಹುದು. ಸಂಗೊಳ್ಳಿ ರಾಯಣ್ಣನ ಕುರಿತು ಹಲವಾರು ಡೊಳ್ಳಿನ ಹಾಡುಗಳು ರಚನೆಗೊಂಡಿರುವುದನ್ನು ಕಾಣುತ್ತೇವೆ. ಅಂತಹುಗಳಲ್ಲಿ ಕೆಲವೊಂದನ್ನು ಇಲ್ಲಿ ವಿವರಿಸಲಾಗಿದೆ.

ಈ ಡೊಳ್ಳಿನ ಹಾಡುಗಳಲ್ಲಿ ಸಂಗೊಳ್ಳಿ ರಾಯಣ್ಣನ ಬಾಲ್ಯ, ತಂದೆ, ತಾಯಿ ವೃತ್ತಿ, ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ರಾಯಣ್ಣ ನಡೆಸಿದಂತಹ ಹೋರಾಟವನ್ನು ತಿಳಿಯಲು ಸಹಾಯಕವಾಗುತ್ತವೆ. ರಾಯಣ್ಣನ ಜಾತಿಯನ್ನು ಹಾಗೂ ರಾಯಣ್ಣನ ವ್ಯಕ್ತಿತ್ವವನ್ನು ಕುರಿತು ಈ ಕೆಳಗಿನ ಡೊಳ್ಳಿನ ಹಾಡಿನ ಮೂಲಕ ತಿಳಿಯಬಹುದು.

"ಕುರುಬರ ಹೊಟ್ಟಿಲೆ ಹುಟ್ಟಿ ಬಂದಿತು ರಾಯಣ್ಣನೆಂಬವ ಹೆಬ್ಬುಲಿ
ಕಿತ್ತೂರ ಕೇಸರಿ ಸಂಗೊಳ್ಳಿ ರಾಯಣ್ಣ ನೆಂಬುವಂತಾ ವೀರ ಕಲಿ
ಕೆಂಚಮ್ಮನೆಂಬುವ ತ್ಯಾಗ ಮಡಿಲಲಿ ಅರಳಿ ಬಂದ ಈ ಕಮಲ
ಭಾರತದಲಿ ಕನ್ನಡ ನಾಡೋಳು ಮಿನುಗುತ್ತಿರುವದು ಈ ವಿಮಲ
ಅರಿಗಳಿಗೆ ಭಯಾಂಕರನಾಗಿ ಸಮರದಲ್ಲಾ ವೈರಿಗಳ ಎದೆಯನು ಬಗೆದಾ"[೨೭]

ಈ ಮೇಲಿನ ಡೊಳ್ಳಿನ ಹಾಡು ರಾಯಣ್ಣನ ಜಾತಿ, ತಾಯಿ, ರಾಯಣ್ಣ ಶೌರ್ಯವನ್ನು ಹೇಳುತ್ತಿದೆ. ಕಿತ್ತೂರನ್ನು ಬ್ರಿಟಿಷರು ವಶಪಡಿಸಿಕೊಂಡ ನಂತರ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಲು ಹೋರಾಟ ಮಾಡುವಂತಹ ಸಂದರ್ಭದಲ್ಲಿ ರಾಯಣ್ಣ ಗೆರಿಲ್ಲಾಯುದ್ಧದ ಮೂಲಕ ಮಾಡಿದಂತಹ ಹೋರಾಟವನ್ನು ಚಿತ್ರಿಸುತ್ತದೆ.

ಬ್ರಿಟಿಷರ ವಿರುದ್ದ ರಾಯಣ್ಣ ಮಾಡಿದಂತಹ ಹೋರಾಟದ ಕುರಿತು,

"ಬಿಳಿಯ ರಾಳಿಕೆ ಇಂದು ಕೊನೆಯಾಗಲಿ ಎಂದು ಹೊರಾಟವ ಮಾಡದಧೀರ
ಬಿಳಿಯರ ಕಂಡರೆ ಸಿಂಹನೆ ತೆರದಲ್ಲಿ ಘರ್ಜಿಸುತ ತಾ ರಣದೊಳಗ
ಸಿಕ್ಕ ವೈರಿಗಳ ಪಕ್ಕೆಲಬು ಮುರಿದು ರಕ್ತದೊಕಳಿ ಯಾಡಿದ ಮಲ್ಲಾ
ರಕ್ತ ತಿಲಕನ್ನು ಬೆರಳಿಲೆ ಧರಸಿ ರಣ ಕಹಳೆಯ ಊದಿಸಿದಾತ
ಪಣಕ್ಕೆ ಎದೆಯೊಡ್ಡಿದ ವೀರಾ ರಣಕ ಟೊಂಕ ಕಟ್ಟಿ ತಾನಿಂತಾವನು
ನಂಜನುಂಡ ನಂಜುಂಡನು ತಾನಾಗಿ ಗಂಡ ಬೇರುಂಡನು ತಾನಾಗಿ
ಬಂಡ ಪುಂಡರ ರೂಂಡವನು ಚೆಂಡಾಡಿದ ವೀರ ಬೈರಾಗಿ
ಕಿತ್ತುರ ಗದ್ದಗೆ ಕಾಯಲಿಕ್ಕೆ ಅವಮೀಸಲಾಗಿ ಇಟ್ಟಿದ ಪ್ರಾಣ
ಚನ್ನಮ್ಮನ ಚರಣಕ್ಕೆ ಎರಗಿ ರಾಯಣ್ಣ ಅಂಗರಕ್ಷಕ ತಾನಾದಾ
ಕಿತ್ತೂರನಾಡಿನ ಕೀರ್ತಿ ಪತಾಕೆಯ ಮೆರೆಸ ಬೆಕೆಂದಿದ್ದನ ಇತಾ"[೨೮]

ಕಿತ್ತೂರಿನಲ್ಲಿ ಬ್ರಿಟಿಷರ ಆಳ್ವಿಕೆಯನ್ನು ಕೊನೆಗೊಳಿಸಿ ಕಿತ್ತೂರು ದೇಸಾಯಿಯರ ಅಡಳಿತವನ್ನು ಮರಳಿ ಸ್ಥಾಪಿಸುವುದಕ್ಕಾಗಿ ರಾಯಣ್ಣ ಮಾಡಿದ ಹೋರಾಟದ ಚಿತ್ರಣದ ಕುರಿತು ಮಾಹಿತಿಯನ್ನು ತಿಳಿಯಲು ಸಹಾಯಕವಾಗುತ್ತವೆ. ಈ ಹೋರಾಟದಲ್ಲಿ ರಾಯಣ್ಣ ಹಾಗೂ ಸಹಚರರು ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿರುವುದನ್ನು ಕಾಣುತ್ತೇವೆ.

ಈ ಮೇಲಿನ ಡೊಳ್ಳಿನ ಪದಗಳು ರಾಯಣ್ಣನ ಹೋರಾಟದ ಹಾಗೂ ಕಿತ್ತೂರು ಸಂಸ್ಥಾನದ ಬಗ್ಗೆ ದೇಶಪ್ರೇಮ, ನಾಡಪ್ರೇಮದಿಂದ ಹೋರಾಟವನ್ನು ಮಾಡುತ್ತಾನೆ. ಆದರೆ ದುರ್ದೈವದ ಮೂಲವೇ ಬೇರೆ. ಬ್ರಿಟಿಷರ ಕುತಂತ್ರದಿಂದ ರಾಯಣ್ಣನ ಅಂತ್ಯವಾಗುತ್ತದೆ.

"ಕೊಡಲಿಯ ಕಾವ ಕುಲಕ್ಕೆ ಮೂಲಾ ಎಂಬುವ ಮಾತು ಸುಳಲ್ಲಾ
ಮಲ್ಲಪ್ಪ ಶೆಟ್ಟಿಯ ಕಾರಸ್ಥಾನದಿಂದ ಕಿತ್ತೂರು ಸಂಸ್ತಾನ ಹಾಳಾತು
ಕುರುಬರ ಕುಲಪುತ್ರಾ ಮಾಡಿದ ಸತ್ವಾತ್ತಾ ಸಂಗೊಳ್ಳಿ ರಾಯಣ್ಣ ನುರಿನೇತ್ರಾ
ಮೊಸದಿ ಇವನನ್ನು ಬಂಧಿಸಿ ನಮ್ಮವರೆ ಮಾಡಿದರು ಘಾತಾ
ಕನ್ನಡ ರಾಜರಾಜೇಶ್ವರಿಯಾ ವರವೀರ ಕುವರನೆಂದೆನಿಸಿದನಾ
ಕುರುಬರ ಸಂತತಿಗೆಲ್ಲ ರಾಯಣ್ಣನು ಬೆಳಕ ನೀಡಿದಂಗ ಚೆಂದಿರನು
ಕುರುಬ ಕುಲದಲ್ಲಿ ಕುಲದೇವ ಬೀರಪ್ಪನಲಿ ಪಡೆದನ್ನಾವ ಮೋಕ್ಷವನು
ವಂಚನೆ ಮಾಡುವ ಜನರನ್ನು ನೀವು ನಂಬ ಬೇಡಿರೆಂದು ಹೇಳುವನು."[೨೯]

ಈ ಮೇಲಿನ ಡೊಳ್ಳು ಪದ ನಮ್ಮವರೆ ನಮಗೆ ಮೂಲ ಎನ್ನುವುದನ್ನು ಹಾಗೂ ಬ್ರಿಟಿಷರು ಭಾರತದಲ್ಲಿ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿದ ಮಾರ್ಗವನ್ನು ಕುರಿತು ಹೇಳುತ್ತದೆ. ಕಿತ್ತೂರು ಸಂಸ್ಥಾನ ಹಾಗೂ ರಾಯಣ್ಣನ ಹೋರಾಟಕ್ಕೆ ನಮ್ಮವರ ಕುತಂತ್ರದ ಮೂಲಕ ಅಂತ್ಯವಾಯಿತು. ಹೀಗೆಯೇ ಬ್ರಿಟಿಷರು ಭಾರತದಾದ್ಯಂತ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿದರು.

ಕನ್ನಡ ನಾಡಿನ ಹಾಗೂ ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ ವೀರರ ಚರಿತ್ರೆಯನ್ನು ತಿಳಿಯಬೇಕೆಂದರೆ, ಜನಪದ ಸಾಹಿತ್ಯದ ಮೊರೆ ಹೋಗಬೇಕಾಗುತ್ತದೆ. ಜನಪದ ಸಾಹಿತ್ಯವು ವ್ಯಕ್ತಿಯ ಹೋರಾಟದ ಚಿತ್ರಣವನ್ನು ಜನಪದರು ಜನರನ್ನು ಮಂತ್ರಮುಗ್ಧರನ್ನಾಗಿ ಮಾಡಿ ಅವರಲ್ಲಿ ವೀರಾವೇಶದ ಭಾವನೆಯನ್ನು ತುಂಬಿ ಅವರನ್ನು ಹೋರಾಟಕ್ಕೆ ಒಯ್ಯುವ ಶಕ್ತಿ ಸಾಮರ್ಥ್ಯವು ಜನಪದ ಸಾಹಿತ್ಯಕ್ಕೆ ಇದೆಯೆಂದು ಹೇಳಬಹುದು. ನಾಡಿನ ಹಿತಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರ ಮಹನೀಯರ ಜೀವನದ ಬಗ್ಗೆ ಜನಪದ ಸಾಹಿತ್ಯದ ಪ್ರಕಾರಗಳಾದ ಲಾವಣಿಗಳು, ಡೊಳ್ಳು ಹಾಡುಗಳು, ಕೋಲಾಟದ ಪದಗಳ ಮೂಲಕ ತಿಳಿಯಲು ಸಹಾಯಕವಾಗುತ್ತದೆ.

ಕಿತ್ತೂರು ಸಂಸ್ಥಾನ ಹಾಗೂ ರಾಯಣ್ಣನಿಗೆ ಸಂಬಂಧಿಸಿದಂತೆ ಜಾನಪದ ಹಾಗೂ ಲಿಖಿತ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಲವಾರು ಅಧ್ಯಯನಗಳು ನಡೆದಿರುವುದು ಕಂಡುಬರುತ್ತದೆ. ರಾಯಣ್ಣನಿಗೆ ಸಂಬಂಧಿಸಿದಂತೆ ಆತನ ಕಾಲಘಟ್ಟದಲ್ಲಿಯೇ ಹಾಗೂ ಸಮಕಾಲೀನ ಜನರು ರಾಯಣ್ಣನ ಹೋರಾಟ, ಜೀವನ, ಸಾಹಸವನ್ನು ಕುರಿತು ಕತೆಗಳ ಮೂಲಕ ಕಟ್ಟಿಕೊಟ್ಟಿದ್ದಾರೆ. ಇದರ ಜೊತೆಗೆ ನಾಟಕ, ಕತೆ, ಕಾದಂಬರಿಗಳು ರಚನೆಯಾಗಿರುವುದನ್ನು ಗಮನಿಸಬಹುದು. ರಾಯಣ್ಣನ ಕುರಿತು ಹೆಚ್ಚಿನ ಮಾಹಿತಿಗಳು ದೊರೆಯುವುದು ಜನಪದ ಸಾಹಿತ್ಯದಲ್ಲಿ ಮಾತ್ರ.

"ಕನ್ನಡ ನಾಡಿನ ಚರಿತ್ರೆಯಲ್ಲಿ ಚೆನ್ನಮ್ಮ ಹಾಗೂ ಸಂಗೊಳ್ಳಿ ರಾಯಣ್ಣ ತಮ್ಮ ದೇಶಾಭಿಮಾನದಿಂದ ಹಾಗೂ ಸ್ವಾತಂತ್ರ್ಯ ಪ್ರೇಮದಿಂದ ಪ್ರಸಿದ್ಧರಾಗಿದ್ದಾರೆ. ಪರಕೀಯರಾದ ಬ್ರಿಟಿಷರನ್ನು ನಮ್ಮ ದೇಶದಿಂದ ಒದ್ದೋಡಿಸಬೇಕೆಂಬ ಅವರ ಪ್ರಯತ್ನ ಪ್ರಶಂಸನೀಯವಾದದ್ದು. ಇವರಿಬ್ಬರ ಹಾಗೂ ಈ ಹೋರಾಟದಲ್ಲಿ ಪಾಲ್ಗೊಂಡವರ ಸಾಹಸದ ಕತೆ ಇತಿಹಾಸದಲ್ಲಿ, ಜಾನಪದ ಲಾವಣಿಗಳಲ್ಲಿ ಹೇಳಲಾಗಿದೆ, ಬಣ್ಣಿಸಲಾಗಿದೆ. ಇವುಗಳಿಂದ ಜನಪದರು ಸ್ಫೂರ್ತಿ ಪಡೆಯಬಹುದಾಗಿದೆ. ಆ ಕಾಲದ ಒಂದೊಂದು ಸಂಗತಿಗಳು ಮೈನವಿರೇಳಿಸುವಂತಿದೆ."[೩೦]

ಸಂಗೊಳ್ಳಿ ರಾಯಣ್ಣನ ಬಗೆಗೆ ನಮಗೆ ಸಿಗುವಂತಹ ವಿವಿಧ ಆಕರಗಳು ಮತ್ತು ದಾಖಲೆಗಳನ್ನು ಅಧ್ಯಯನ ಮಾಡುವುದರ ಮೂಲಕ ಹಾಗೂ ಮುಕ್ತಮನಸ್ಸಿನಿಂದ, ವಿವೇಚನಾಯುಕ್ತ ಮನೋಭಾವದಿಂದ ಪರಿಶೀಲನೆ ಮಾಡಿದಾಗ ರಾಯಣ್ಣನ ಕುರಿತು ಮಹತ್ವದ ಸಂಗತಿಗಳು ಬೆಳಕಿಗೆ ಬರುತ್ತವೆ. ರಾಯಣ್ಣನ ಕುರಿತು ಬಂದಿರುವಂತಹ ಜನಪದ ಸಾಹಿತ್ಯದಲ್ಲಿ ರಾಯಣ್ಣನ ಮನೆತನ, ತಂದೆ, ತಾಯಿ, ವೃತ್ತಿ ಕಿತ್ತೂರು ಸಂಸ್ಥಾನದಲ್ಲಿ ಸೈನಿಕನಾಗಿ, ಕಿತ್ತೂರು ಸಂಸ್ಥಾನ ಬ್ರಿಟಿಷರ ವಶವಾದ ನಂತರ ಕಿತ್ತೂರನ್ನು ಮತ್ತೆ ಸ್ವತಂತ್ರಗೊಳಿಸಲು ನಡೆಸಿದಂತಹ ಹೋರಾಟವನ್ನು ತಿಳಿಯಲು ಜನಪದ ಸಾಹಿತ್ಯ ಸಹಾಯಕವಾಗುತ್ತದೆ. ರಾಯಣ್ಣನನ್ನು ಕುರಿತು ರಚನೆಗೊಂಡಿರುವಂತಹ ಎಲ್ಲಾ ಲಾವಣಿಗಳು ರಾಯಣ್ಣನ ಕುರಿತಂತಹ ಪ್ರಮುಖ ದಾಖಲೆಗಳಲ್ಲಿ ಲಾವಣಿಗಳು ಸಹ ಒಂದು ಎಂದು ಹೇಳಬಹುದು. ರಾಯಣ್ಣ ಲಾವಣಿಗಳಿಗೆ ಕಥಾವಸ್ತುವಾಗಿ ಹೆಚ್ಚು ಗಮನವನ್ನು ಸೆಳೆದಿದ್ದಾನೆ ಎಂದು ಹೇಳಬಹುದು.

ಸ್ವಾತಂತ್ರ್ಯಕ್ಕಾಗಿ ಹೋರಾಡಿದಂತಹ ವೀರರ ಕಥೆಗಳನ್ನು ಲಾವಣಿಗಳ ಮೂಲಕ ಹೇಳುತ್ತಾ ಹೊಸ ಚಾರಿತ್ರಿಕತೆಯನ್ನು ಕಟ್ಟಿಕೊಡುತ್ತಿವೆ. ಸ್ವಾತಂತ್ರ್ಯಕ್ಕಾಗಿ ಹೋರಾಡಿ ವೀರಮರಣವನ್ನು ಹೊಂದಿದಂತಹ ವೀರರು ಲಾವಣಿಗಳ ವಸ್ತುವಾದರು. ಅಂಥವರಲ್ಲಿ ಸಿಂಧೂರ ಲಕ್ಷ್ಮಣ, ಸಂಗೊಳ್ಳಿ ರಾಯಣ್ಣನಂತವರು ಪ್ರಮುಖರು. ಸಾಮ್ರಾಜ್ಯಶಾಹಿಯ ವಿರುದ್ಧ ಹಾಗೂ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಇಂತಹ ಅನೇಕ ಹೋರಾಟಗಾರರು ಲಾವಣಿಗಳ ನಾಯಕರಾಗಿದ್ದಾರೆ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಐತಿಹಾಸಿಕ ಜನಪದ ಹಾಡುಗಳನ್ನು ಹಾಗೂ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸಿ ಅಧ್ಯಯನ

ಮಾಡಿದವರಲ್ಲಿ ಪಿ.ಕೆ. ರಾಜಶೇಖರ ಮತ್ತಿಘಟ್ಟಿ ಕೃಷ್ಣಮೂರ್ತಿ, ಕ್ಯಾತನಹಳ್ಳಿ ರಾಮಣ್ಣ ಮುಂತಾದವರನ್ನು ಗುರುತಿಸಬಹುದು. ಸಂಗೊಳ್ಳಿ ರಾಯಣ್ಣನ ಸಮಕಾಲದಲ್ಲಿಯೇ ಸಂಗ್ರಹಿಸಿದಂತಹ ಹಾಡುಗಳೆಂದರೆ, ಫ್ಲೀಟ್ ಅವರು ಸಂಗ್ರಹಿಸಿದವುಗಳು. ರಾಯಣ್ಣನ ಕುರಿತು ಇದ್ದಂತಹ ಜನಪದ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸಿ, ಬ್ರಿಟಿಷರ ಬಗ್ಗೆ ಜನರಲ್ಲಿ ಇದ್ದಂತಹ ಅಭಿಪ್ರಾಯಗಳನ್ನು ಸಂಗ್ರಹಿಸುವುದಕ್ಕಾಗಿ ಮಾಡಿರಬಹುದಾದರೂ ಈ ಕಾರ್ಯ ಭಾರತೀಯರಲ್ಲಿ ಜಾಗೃತಿಯನ್ನು ಮೂಡಿಸುವಂತಹದ್ದು.

ತಲೆಮಾರಿನಿಂದ ತಲೆಮಾರಿಗೆ ಹರಿದು ಬರುತ್ತಿರುವ ಜನಪದ ಸಾಹಿತ್ಯವು ತನ್ನದೆ ಆದಂತಹ ಮಹತ್ವವನ್ನು ಹೊಂದಿದೆ. ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಇಂದಿಗೂ ಜನಪದ ಸಾಹಿತ್ಯ ಪ್ರಕಾರಗಳು ಜೀವಂತವಾಗಿರುವುದನ್ನು ಕಾಣುತ್ತೇವೆ.

ಉತ್ತರ ಕರ್ನಾಟಕದ ಭಾಗದಲ್ಲಿ ಲಾವಣಿಗಳು ಹೆಚ್ಚು ಜನಪ್ರಿಯತೆಯನ್ನು ಪಡೆದಿವೆ. ರಾಯಣ್ಣನ ಸ್ವಾತಂತ್ರ್ಯ ಹೋರಾಟವನ್ನು ಭಾರತದಾದ್ಯಂತ ವಿಸ್ತರಿಸಲು ಲಾವಣಿಗಳು ಪ್ರಮುಖ ಮಾಧ್ಯಮವಾಗಿರುವುದನ್ನು ಕಾಣಬಹುದು. ಜನಪದ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣನ ನೈಜ ಚಿತ್ರಣವನ್ನು ತಿಳಿಯಬಹುದು. ರಾಯಣ್ಣನ ವ್ಯಕ್ತಿತ್ವದ ವೈಶಿಷ್ಟಗಳನ್ನು ಜನಪದ ಸಾಹಿತ್ಯದಲ್ಲಿ ಪ್ರಮುಖವಾಗಿರುವ ಲಾವಣಿ ಸಾಹಿತ್ಯ ರಾಯಣ್ಣನನ್ನು ಸಮರ್ಥವಾಗಿ ಹಾಗೂ ವಿವರವಾಗಿ ರಾಯಣ್ಣನ ಸಂಪೂರ್ಣ ಚಾರಿತ್ರಿಕ ವಿವರವನ್ನು ಕಟ್ಟಿಕೊಟ್ಟಿವೆ.

ಜಾನಪದ ಸಾಹಿತ್ಯದಲ್ಲಿ ಐತಿಹ್ಯಗಳ ಅಧ್ಯಯನಕ್ಕೆ ವಿಶೇಷ ಮಹತ್ವವಿದೆ. ಚಾರಿತ್ರಿಕ ವ್ಯಕ್ತಿಯಾದ ರಾಯಣ್ಣನ ಕುರಿತು ಅಸಂಖ್ಯಾತ ಐತಿಹ್ಯಗಳು ಇರುವುದನ್ನು ಕಾಣುತ್ತೇವೆ. ಐತಿಹ್ಯಗಳನ್ನು ಕಥೆಗಳೆಂದು ಹಿಂದೆ ಸರಿಸದೆ, ಇಂತಹ ಎಷ್ಟೋ ಐತಿಹ್ಯಗಳು, ಕಥೆಗಳು ಅನೇಕ ವೇಳೆ ಐತಿಹಾಸಿಕ ಸತ್ಯಗಳೆ ಆಗಿರುತ್ತವೆ. ಆದ್ದರಿಂದ ರಾಯಣ್ಣನಿಗೆ ಸಂಬಂಧಪಟ್ಟ ಇಂತಹ ಲಾವಣಿಗಳು, ಐತಿಹ್ಯಗಳ, ವದಂತಿಗಳು ಮುಂತಾದವುಗಳನ್ನು ಇತಿಹಾಸ ರಚನೆಯಲ್ಲಿ ಬಳಸಿಕೊಳ್ಳಬೇಕೆಂದು ಹೇಳಲೇಬೇಕು. ಹೀಗೆ ಜನಪದ ಸಾಹಿತ್ಯ ಪ್ರಕಾರಗಳಾದ ಲಾವಣಿ, ಕೋಲುಪದ, ಡೊಳ್ಳುಪದ, ತ್ರಿಪದಿಗಳು ರಾಯಣ್ಣನಿಗೆ ಸಂಬಂಧಪಟ್ಟ ಹಲವಾರು ಮಾಹಿತಿಗಳಿವೆ. ಅಲ್ಲಿ ರಾಯಣ್ಣನ ವ್ಯಕ್ತಿತ್ವ, ಬ್ರಿಟಿಷರ ವಿರುದ್ಧ ಹೋರಾಡಿದ ಬಗ್ಗೆ, ಕಿತ್ತೂರು ಸಂಸ್ಥಾನದ ಬಗ್ಗೆ ಅವನಿಗಿರುವ ಶ್ರದ್ಧೆ-ನಿಷ್ಠೆಗಳು ವ್ಯಕ್ತವಾಗಿವೆ. ರಾಯಣ್ಣನ ಇತಿಹಾಸ ಅಷ್ಟೆ ಅಲ್ಲ ಕಿತ್ತೂರು ಸಂಸ್ಥಾನದ ಇತಿಹಾಸ ಪುನಾರಚಿಸುವಾಗ ರಾಯಣ್ಣನಿಗೆ ಸಂಬಂಧಿಸಿದ ಜನಪದ ಆಕರಗಳು ಪ್ರಮುಖ ಪಾತ್ರ ವಹಿಸುತ್ತವೆ.

**ಅಡಿ ಟಿಪ್ಪಣಿಗಳು**

೧. ಜಯಲಕ್ಷ್ಮಿ ಸೀತಾಪುರ, ಕನ್ನಡದಲ್ಲಿ ಐತಿಹಾಸಿಕ ಜನಪದ ಲಾವಣಿಗಳು, ಪುಟ, ೧೧

೨. ಬಸವರಾಜ ಮಲಶೆಟ್ಟಿ, ಡಾ. ಬಸವರಾಜ ಮಲಶೆಟ್ಟಿ ಅವರ ಆಯ್ದ ಲೇಖನಗಳು, ಪುಟ, ೭೫

೩. ವೀರೇಶ ಬಡಿಗೇರ.(ಸಂ), ಹಳೆಯ ಲಾವಣಿಗಳು ಪುಟ– ಪ್ರಸ್ತಾವನೆ.

೪. ಸೂರ್ಯನಾಥ ಕಾಮತ್ (ಸಂ) ಸಂಗೊಳ್ಳಿ ರಾಯಣ್ಣ, ಲೇಖನ, ಜ್ಯೋತಿ ಹೊಸೂರ, ಜನಪದ ಸಾಹಿತ್ಯದಲ್ಲಿ ಮೂಡಿಬಂದ ರಾಯಣ್ಣ, ಪುಟ,೪೯

೫. ನಿಂಗಣ್ಣ ಸಣ್ಣಕ್ಕಿ, ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ, ಪುಟ, ೨೪

೬. ಸೂರ್ಯನಾಥ ಕಾಮತ್ (ಸಂ) ಸಂಗೊಳ್ಳಿ ರಾಯಣ್ಣ, ಲೇಖನ, ಜ್ಯೋತಿ ಹೊಸೂರ, ಜನಪದ ಸಾಹಿತ್ಯದಲ್ಲಿ ಮೂಡಿಬಂದ ರಾಯಣ್ಣ, ಪುಟ,೩೪

೭. ಅದೇ, ಪುಟ,೩೧

೮. ಅದೇ, ಪುಟ, ೧೮

೯. ನಿಂಗಣ್ಣ ಸಣ್ಣಕ್ಕಿ, ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ, ಪುಟ, ೨೫

೧೦. ಶಿವಾನಂದ ಗುಬ್ಬಣ್ಣವರ, ಕಿತ್ತೂರ ಜನಪದ ಸಾಹಿತ್ಯ, ಪುಟ, ೧೫೮

೧೧. ನಿಂಗಣ್ಣ ಸಣ್ಣಕ್ಕಿ, ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ, ಪುಟ, ೨೭

೧೨. ಅದೇ, ಪುಟ, ೩೫

೧೩. ಅದೇ, ಪುಟ, ೨೭

೧೪. ಅದೇ, ಪುಟ, ೦೬

೧೫. ಅದೇ, ಪುಟ, ೦೭

೧೬. ಅದೇ, ಪುಟ, ೦೮

೧೭. ಅದೇ, ಪುಟ, ೦೯

೧೮. ಅದೇ, ಪುಟ, ೧೧

೧೯. ಸೂರ್ಯನಾಥ ಕಾಮತ್ (ಸಂ) ಸಂಗೊಳ್ಳಿ ರಾಯಣ್ಣ, ಲೇಖನ, ಜ್ಯೋತಿ ಹೊಸೂರ, ಜನಪದ ಸಾಹಿತ್ಯದಲ್ಲಿ ಮೂಡಿಬಂದ ರಾಯಣ್ಣ, ಪುಟ, ೨೯

೨೦. ಅದೇ, ಪುಟ, ೩೦

೨೧. ಅದೇ, ಪುಟ, ೩೦

೨೨. ಶಂಕರ ಲಮಾಣಿ, ಹಾಲುಮತದ ವೀರತಾಥೆ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಪುಟ, ೩೪

೨೩. ಅದೇ, ಪುಟ, ೧೩೪

೨೪. ಅದೇ, ಪುಟ, ೩೧

೨೫. ಅದೇ, ಪುಟ, ೩೧

೨೬. ಅದೇ, ಪುಟ, ೩೧

೨೭. ಈರಪ್ಪ ಮ. ಹಿಂಜಿಡ್ಡಿ, ಡೊಳ್ಳಿನ ಹಾಡುಗಳು, ಪುಟ, ೧೯

೨೮. ಅದೇ, ಪುಟ, ೧೯

೨೯. ಎಚ್. ಎಸ್. ಪಾಟೀಲ, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಪುಟ, ೧೦

ಅಧ್ಯಾಯ : ಆರು

# ಸಂಗೊಳ್ಳಿ ರಾಯಣ್ಣ : ಜೀವನ ಚರಿತ್ರೆಗಳು

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಥೆ, ಕಾದಂಬರಿ, ನಾಟಕ, ಆತ್ಮಕಥೆ, ಜೀವನ ಚರಿತ್ರೆ ಮುಂತಾದ ಸಾಹಿತ್ಯ ಪ್ರಕಾರಗಳನ್ನು ಕಾಣುತ್ತೇವೆ. ಬ್ರಿಟಿಷರು ಭಾರತದಲ್ಲಿ ವಸಾಹತುಶಾಹಿಯನ್ನು ಸ್ಥಾಪಿಸಿದ ನಂತರ ಭಾರತದಲ್ಲಿ ಹಲವಾರು ಯೋಜನೆಗಳನ್ನು ಜಾರಿಗೆ ತಂದರು. ಅಂತಹವುಗಳಲ್ಲಿ ಶಿಕ್ಷಣವು ಒಂದು. ಪ್ರಾಚೀನ ಭಾರತದಲ್ಲಿ ಮೇಲ್ವರ್ಗದವರಿಗೆ ಮಾತ್ರ ಸೀಮಿತವಾಗಿದ್ದಂತಹ ಶಿಕ್ಷಣವನ್ನು ಬ್ರಿಟಿಷರು ಎಲ್ಲರಿಗೂ ಶಿಕ್ಷಣ ದೊರೆಯುವಂತೆ ಮಾಡಿದರು. ಆಧುನಿಕ ಶಿಕ್ಷಣದ ಪ್ರಭಾವದಿಂದ ಭಾರತೀಯರಲ್ಲಿ ಜಾಗೃತಿಯಾಗತೊಡಗಿತು. ಅಂತಹವುಗಳಲ್ಲಿ ಸಾಹಿತ್ಯವೂ ಸಹ ಒಂದು.

ಯುರೋಪಿಯನ್ನರ ಆಗಮನಕ್ಕಿಂತ ಪೂರ್ವದಲ್ಲಿ ಭಾರತದಲ್ಲಿ ಸಾಹಿತ್ಯ, ಶಿಕ್ಷಣ ಮುಂತಾದವುಗಳು ಕೇವಲ ಮೇಲ್ವರ್ಗದವರಿಗೆ ಮಾತ್ರ ಸೀಮಿತವಾಗಿದ್ದವು. ಆದರೆ ಬ್ರಿಟಿಷರ ಆಗಮನದ ನಂತರ ಅದರಲ್ಲಿಯೂ ಬ್ರಿಟಿಷರು ಭಾರತದಲ್ಲಿ ವಸಾಹತುಶಾಹಿಯನ್ನು ಸ್ಥಾಪಿಸಿದ ನಂತರ ಭಾರತದಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿದರು. ಇದರ ತರುವಾಯ ಭಾರತೀಯ ಶಿಕ್ಷಣದಲ್ಲಿ ಬದಲಾವಣೆಯಾಯಿತು. ಯೂರೋಪಿನ ಸಾಹಿತ್ಯ, ಸಾಮಾಜಿಕತೆ, ರಾಜಕೀಯತೆ, ಆರ್ಥಿಕತೆಯ ಅರಿವು ಭಾರತೀಯರಿಗೆ ದೊರೆಯಿತು. ಸ್ವಾತಂತ್ರ್ಯ ಸಮಾನತೆಗಾಗಿ ಭಾರತೀಯರನ್ನು ಒಂದುಗೂಡಿಸುವಲ್ಲಿ ಶಿಕ್ಷಣದ ಹಾಗೂ ಸಾಹಿತ್ಯದ ಪಾತ್ರ ತುಂಬ ಮಹತ್ವದ ಸ್ಥಾನವನ್ನು ಪಡೆಯುತ್ತದೆ ಎಂದು ಹೇಳಬಹುದು.

ಸಂಗೊಳ್ಳಿ ರಾಯಣ್ಣನ ಕುರಿತು ಐತಿಹಾಸಿಕ ವಿಷಯಗಳಿಗೆ ಸಂಬಂಧಿಸಿದಂತೆ ಸಾಹಿತ್ಯ ರಚನೆಗೆ ಮುಖ್ಯ ಆಕರಗಳು ದೊರಕುವುದು ತೀರಾ ವಿರಳ. ೧೯ನೇ ಶತಮಾನದ ನಂತರ ಚಾರಿತ್ರಿಕ ವಿಷಯಗಳಿಗೆ ಸಂಬಂಧಿಸಿದಂತಹ ಆಕರಗಳು ದೊರಕುತ್ತವೆ. ಇದಕ್ಕಿಂತ ಪೂರ್ವದಲ್ಲಿ

ನಡೆದಂತಹ ಐತಿಹಾಸಿಕ ಘಟನೆಗಳಿಗೆ ಆಕರಗಳಿಗಾಗಿ ಹೆಚ್ಚಾಗಿ ಜನಪದ ಸಾಹಿತ್ಯದ ಮೊರೆ ಹೋಗಬೇಕಾಗುತ್ತದೆ. ಹಾಗೂ ಬ್ರಿಟಿಷರು ನಡೆಸಿದಂತಹ ಪತ್ರ ವ್ಯವಹಾರಗಳು ರಾಯಣ್ಣನಿಗೆ ಸಂಬಂಧಿಸಿದ ಪ್ರಮುಖ ಆಕರಗಳು. ಇಂತಹ ಆಕರಗಳನ್ನು ಇಟ್ಟುಕೊಂಡು ಲೇಖಕರು ಅಂದಿನ ಕಾಲದ ಸೂಕ್ಷ್ಮ ವಿಷಯಗಳನ್ನು ಚರ್ಚಿಸಿದ್ದಾರೆ.

ಆಧುನಿಕ ಶಿಕ್ಷಣದ ಪ್ರಭಾವದಿಂದ ಭಾರತೀಯ ಹಾಗೂ ಕನ್ನಡ ಸಾಹಿತ್ಯದಲ್ಲಿ ಯೂರೋಪಿನ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ಇದರ ಪರಿಣಾಮವಾಗಿ ಕನ್ನಡ ಸಾಹಿತ್ಯದಲ್ಲಿ ಕಥೆ, ಕಾದಂಬರಿ, ನಾಟಕ, ಆತ್ಮಕಥೆ, ಜೀವನ ಚರಿತ್ರೆ ಮುಂತಾದವುಗಳು ಬೆಳವಣಿಗೆಯಾಗಿರುವುದನ್ನು ಕಾಣಬಹುದು.

ಆತ್ಮಕಥೆ ಮತ್ತು ಜೀವನ ಚರಿತ್ರೆ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಬ್ಬ ವ್ಯಕ್ತಿಯ ವಿಶಿಷ್ಟ ವ್ಯಕ್ತಿತ್ವದ ನೆಲೆಗಟ್ಟಿನಲ್ಲಿ ಜೀವನ ಚರಿತ್ರೆ ರೂಪುಗೊಂಡಿರುತ್ತದೆ. ಆತ್ಮಕತೆಯೂ ಒಮ್ಮೊಮ್ಮೆ ಜೀವನ ಚರಿತ್ರೆಯಂತೆಯೇ ಇರುತ್ತದೆ. ಜೀವನ ಚರಿತ್ರೆ ಒಬ್ಬ ವ್ಯಕ್ತಿಯ ಕುರಿತು ಸಮಗ್ರ ಮಾಹಿತಿಯನ್ನು ನೀಡುವಂತದ್ದಾಗಿರುತ್ತದೆ.

ಭಾರತದಲ್ಲಿ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ ಮೊದಲ ಮಹಿಳೆ ಕಿತ್ತೂರು ರಾಣಿ ಚೆನ್ನಮ್ಮ. ಬ್ರಿಟಿಷರು ಭಾರತದಲ್ಲಿನ ಒಂದೊಂದು ರಾಜ್ಯ ವಶಪಡಿಸಿಕೊಂಡು ದೇಶಿಯ ಅರಸರ ಮೇಲೆ ಸಾರ್ವಭೌಮತ್ವವನ್ನು ಸ್ಥಾಪಿಸುತ್ತಾರೆ. ಅರಸರನ್ನು ವಾರ್ಷಿಕ ಕಪ್ಪಕಾಣಿಕೆಯ ಮೇರೆಗೆ ತಮ್ಮ ಕೈಗೊಂಬೆಗಳಾಗಿ ಮಾಡಿಕೊಳ್ಳುತ್ತಾರೆ. ಹಾಗೂ ದತ್ತು ಮಕ್ಕಳಿಗೆ ಹಕ್ಕಿಲ್ಲ ಎಂಬ ನಿಯಮವನ್ನು ಜಾರಿಗೊಳಿಸಿ, ಭಾರತದಲ್ಲಿ ಇದ್ದಂತಹ ಅನೇಕ ಸಂಸ್ಥಾನಗಳನ್ನು ನೇರವಾಗಿ ವಶಪಡಿಸಿಕೊಳ್ಳಲು ಮುಂದಾಗುತ್ತಾರೆ. ಅಂತಹ ಸಂಸ್ಥಾನಗಳಲ್ಲಿ ಕಿತ್ತೂರು ಸಂಸ್ಥಾನವು ಸಹ ಒಂದಾಗಿದೆ.

ವಿಜಯನಗರ ಸಾಮ್ರಾಜ್ಯದ ಪತನದ ನಂತರ ದಕ್ಷಿಣ ಭಾರತದಲ್ಲಿ ಹಲವಾರು ಸಂಸ್ಥಾನಗಳು ಉದಯವಾದವು. ಅಂತಹವುಗಳಲ್ಲಿ ಕಿತ್ತೂರು ಸಂಸ್ಥಾನವು ಬಹಳ ಮುಖ್ಯವಾದ ಹಾಗೂ ಮಹತ್ವದ ಸಂಸ್ಥಾನವಾಗಿದೆ. ೧೫೮೫ ರಿಂದ ೧೮೨೪ರವರೆಗೆ ೨೩೯ ವರ್ಷಗಳ ಕಾಲ ಈ ಸಂಸ್ಥಾನವು ಮುಂದುವರೆದಿದೆ. ೧೮೨೪ರಲ್ಲಿ ಕಿತ್ತೂರು ಸಂಸ್ಥಾನದ ಕೊನೆಯ ದೇಸಾಯಿ ಶಿವಲಿಂಗರುದ್ರಸರ್ಜ ಅನಾರೋಗ್ಯದಿಂದ ಅಕಾಲಿಕ ಮರಣವನ್ನು ಹೊಂದಿದ್ದರಿಂದ ಕಿತ್ತೂರು ಸಂಸ್ಥಾನಕ್ಕೆ ಮಾಸ್ತಮರಡಿಯ ಬಾಳಪ್ಪಗೌಡರ ಮಗನನ್ನು ದತ್ತು ತೆಗೆದುಕೊಂಡು, ಆತನಿಗೆ ಸವಾಯಿ ಮಲ್ಲಸರ್ಜ ಎಂದು ನಾಮಕರಣ ಮಾಡಿ ಆಡಳಿತವನ್ನು ರಾಣಿ ಚೆನ್ನಮ್ಮ ಮುಂದುವರಿಸುತ್ತಾಳೆ. ಈ ವೇಳೆಗಾಗಲೇ ಬ್ರಿಟಿಷರು ಭಾರತದಾದ್ಯಂತ ಪ್ರಭುತ್ವವನ್ನು ಸ್ಥಾಪಿಸಿದ್ದರು. ಬ್ರಿಟಿಷರಿಗೆ ಕಿತ್ತೂರನ್ನು ವಶಪಡಿಸಿಕೊಳ್ಳಲು ನೆಪಮಾತ್ರ ಬೇಕಾಗಿತ್ತು. ದತ್ತು ತೆಗೆದುಕೊಳ್ಳುವುದು

ಕಾನೂನುಬಾಹಿರವೆಂದು ಬ್ರಿಟಿಷರು ಕಿತ್ತೂರನ್ನು ವಶಪಡಿಸಿಕೊಳ್ಳಲು ಮುಂದಾಗುತ್ತಾರೆ. ಆದರೆ ರಾಣಿ ಚೆನ್ನಮ್ಮ ಒಪ್ಪದಿದ್ದಾಗ ಥ್ಯಾಕರೆಯ ನೇತೃತ್ವದಲ್ಲಿಯ ಸೈನ್ಯ ಕಿತ್ತೂರನ್ನು ವಶಪಡಿಸಿಕೊಳ್ಳಲು ಬರುತ್ತದೆ. ೧೮೨೪ ಸೆಪ್ಟಂಬರ್ ೨೩ರಂದು ನಡೆದ ಯುದ್ಧದಲ್ಲಿ ಕಿತ್ತೂರಿಗೆ ಜಯವಾಗುತ್ತದೆ. ಬ್ರಿಟಿಷರಿಗೆ ಇದು ದೊಡ್ಡ ಅವಮಾನವಾದಂತಾಗಿ ಹೆಚ್ಚಿನ ಸೈನ್ಯದೊಂದಿಗೆ ಕಿತ್ತೂರಿಗೆ ಮುತ್ತಿಗೆ ಹಾಕಲು ಸಿದ್ಧತೆಯನ್ನು ಮಾಡಿಕೊಳ್ಳುತ್ತಾರೆ. ಜೊತೆಗೆ ಕಿತ್ತೂರಿನವರನ್ನೆ ಬಳಸಿಕೊಂಡು, ಮದ್ದುಗುಂಡುಗಳಿಗೆ ಎಣ್ಣೆಯನ್ನು ಬೆರೆಸಿ ಮೋಸದಿಂದ ಕಿತ್ತೂರನ್ನು ವಶಪಡಿಸಿಕೊಳ್ಳುತ್ತಾರೆ. ಕಿತ್ತೂರನ್ನು ವಶಪಡಿಸಿಕೊಂಡ ನಂತರ ರಾಣಿ ಪರಿವಾರದವರನ್ನು ಹಾಗೂ ಅನೇಕ ಸೈನಿಕರನ್ನು ಸೆರೆಮನೆಗೆ ಹಾಕುತ್ತಾರೆ. ಅಂತವರಲ್ಲಿ ಸಂಗೊಳ್ಳಿ ರಾಯಣ್ಣನು ಒಬ್ಬನಾಗಿದ್ದಾನೆ.

ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ರಾಯಣ್ಣನ ಪಾತ್ರ ಮಹತ್ವದಾಗಿದೆ. ರಾಯಣ್ಣ ಅರಸನಾಗಿರಲಿಲ್ಲ, ಕಿತ್ತೂರು ಸಂಸ್ಥಾನದ ಸಾಮಾನ್ಯ ಸೈನಿಕ. ಕಿತ್ತೂರು ಪತನದ ನಂತರ ಸೆರೆಮನೆ ಸೇರುತ್ತಾನೆ. ಬ್ರಿಟಿಷರು ಕಿತ್ತೂರಿನ ಸೈನಿಕರನ್ನು ಹಂತ ಹಂತವಾಗಿ ಬಿಡುಗಡೆ ಮಾಡುತ್ತಾರೆ. ಹಾಗೆ ಬಿಡುಗಡೆಯಾದವರಲ್ಲಿ ರಾಯಣ್ಣನು ಒಬ್ಬ. ಬಿಡುಗಡೆಯ ನಂತರ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಲು ರಾಣಿ ಚೆನ್ನಮ್ಮನ ನಡೆಸಿದಂತಹ ಹೋರಾಟವನ್ನು ಮುಂದುವರಿಸುತ್ತಾನೆ.

"ಇಡಿ ಸಮಗ್ರ ಭಾರತದಲ್ಲೇ ಸ್ವಾತಂತ್ರ್ಯ ಹೋರಾಟವನ್ನು ಕ್ರಾಂತಿಕಾರಿ ರೂಪದಲ್ಲಿ ತರಲೆತ್ನಿಸಿದ ಸಂಗೊಳ್ಳಿ ರಾಯಣ್ಣನ ಬಗೆಗೆ ಭಾರತದ ಸ್ವಾತಂತ್ರ್ಯ ಹೋರಾಟ ಕುರಿತು ಇತಿಹಾಸ ಬರೆದವರು ಅಪಚಾರ ಬಗೆದಿದ್ದಾರೆ. ಕ್ರಿ.ಶ. ೧೮೨೯ ರಲ್ಲಿ ಸಂಗೊಳ್ಳಿ ರಾಯಣ್ಣನು ಬ್ರಿಟಿಷ್ ಆಡಳಿತದ ವಿರುದ್ಧ ನಡೆಸಿದ ಸಶಸ್ತ್ರ ಹೋರಾಟವು ಕೇವಲ ಬಂಡಾಯವಲ್ಲ; ಅದು ಪುಟ್ಟ ದೇಶಿಯ ಸಂಸ್ಥಾನವೊಂದರ ಸಾಮಾನ್ಯ ಜನರು ಅಸಮಾನ್ಯ ಜನನಾಯಕನ ನೇತೃತ್ವದಲ್ಲಿ ನಡೆಸಿದ ಮೊತ್ತಮೊದಲ ಭಾರತದ ಸ್ವಾತಂತ್ರ್ಯ ಸಂಗ್ರಾಮ."[೧]

ಸಂಗೊಳ್ಳಿ ರಾಯಣ್ಣನ ಕುರಿತು ಹಲವಾರು ಜೀವನ ಚರಿತ್ರೆಗಳು ರಚನೆಗೊಂಡಿವೆ. ಅಂತಹವುಗಳಲ್ಲಿ ಪ್ರಮುಖವಾದವುಗಳೆಂದರೆ ಮಾನಸ – ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಪ್ರದೀಪ್ ರೋಖಡೆ – ವೀರ ಸಂಗೊಳ್ಳಿ ರಾಯಣ್ಣ, ಒಡೆಯರ್ ಡಿ ಹೆಗ್ಗಡೆ – ಸ್ವಾತಂತ್ರ್ಯ ಸೇನಾನಿ ಸಂಗೊಳ್ಳಿ ರಾಯಣ್ಣ, ಕೆ. ವಿ. ಚಂದ್ರ ಜ್ಯೋತಿ – ಸಂಗೊಳ್ಳಿ ರಾಯಣ್ಣ, ಮಲ್ಲಿಕಾ ಘಂಟಿ – ವೀರ ಸಂಗೊಳ್ಳಿ ರಾಯಣ್ಣ ಗಂಗೂಬಾಯಿ ಅ ಪವಾರ ಸಂಗೊಳ್ಳಿ ರಾಯಣ್ಣ, ಎಚ್. ಎಸ್. ಪಾಟೀಲ – ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಎಫ್. ಪಿ. ಲಕ್ಷ್ಮೇಶ್ವರಮಠ – ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಕುಂಬಳಹಳ್ಳಿ ಮುನಿರಾಜ – ಕ್ರಾಂತಿವೀರ, ರಾಷ್ಟ್ರಪ್ರೇಮಿ ಸಂಗೊಳ್ಳಿ ರಾಯಣ್ಣ, ವಿಜಯ ಕುಮಾರ – ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ರಾಮಚಂದ್ರ – ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಶಿವರಾಮು – ಸಂಗೊಳ್ಳಿ ರಾಯಣ್ಣ ಜೀವನ ಚರಿತ್ರೆಗಳು

ರಚನೆಯಾಗಿರುವುದನ್ನು ಕಾಣುತ್ತೇವೆ. ಅವುಗಳ ಸ್ವರೂಪವನ್ನು ಕುರಿತು ಸ್ಥೂಲವಾಗಿ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸುವುದಕ್ಕಾಗಿ ರಾಯಣ್ಣನು ಮಾಡಿದಂತಹ ಹೋರಾಟವನ್ನು ಒಳಗೊಂಡಂತೆ ರಾಯಣ್ಣನ ಸಮಗ್ರ ಜೀವನ ಚಿತ್ರಣವನ್ನು ತಿಳಿಯಲು ಜೀವನ ಚರಿತ್ರೆಗಳು ಸಹಾಯಕವಾಗುತ್ತವೆ. ಈ ಜೀವನ ಚರಿತ್ರೆಗಳಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತಹ ಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ವ್ಯತ್ಯಾಸಗಳಿರುವುದನ್ನು ನಾವು ಗಮನಿಸಬಹುದು. ವಿವಾಹದ ಕುರಿತು, ಅಣ್ಣನ ಕುರಿತು, ತಂಗಿಯ ಕುರಿತು, ಹೆಂಡತಿಯ ಕುರಿತು, ಮಗನ ಕುರಿತು ಹೀಗೆ ಕೆಲವು ವಿಷಯಗಳಲ್ಲಿ ಭಿನ್ನತೆಗಳು ಇರುವುದನ್ನು ಕಾಣುತ್ತೇವೆ. ಆದರೂ ಸಹ ಜೀವನ ಚರಿತ್ರೆಗಳು ರಾಯಣ್ಣನ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುತ್ತವೆ.

ರಾಯಣ್ಣನ ಮನೆತನವೇ ವೀರ ಮನೆತನವಾಗಿತ್ತು. ಹಾಗೂ ಕಿತ್ತೂರು ಅರಸರ ಪ್ರೀತಿಗೆ ಪಾತ್ರವಾದಂತಹ ಮನೆತನವಾಗಿತ್ತು. ರಾಯಣ್ಣನ ತಾತ ರಾಘಪ್ಪನು ವೀರಪ್ಪ ದೇಸಾಯಿಯರ ಆಳ್ವಿಕೆಯಲ್ಲಿ 'ಚಿಣಗಿ ಕೋವಾಡ' ಯುದ್ಧದಲ್ಲಿ ತೋರಿದ ಸಾಹಸಕ್ಕಾಗಿ ದೊರೆಯು ರಾಘಪ್ಪನಿಗೆ 'ಸಾವಿರ ಒಂಟೆ ಸರದಾರ' ಎಂಬ ಬಿರುದನ್ನು ನೀಡಿ ಗೌರವಿಸಿದನು.

ರಾಘಜ್ಜನು ವೀರನಾಗಿರುವಂತೆ ಒಳ್ಳೆಯ ಆಯುರ್ವೇದ ಪಂಡಿತನು ಸಹ ಅಗಿದ್ದನು. ಸಂಗೊಳ್ಳಿಯ ಸುತ್ತಮುತ್ತಲಿನ ಪ್ರದೇಶದವರೆಲ್ಲರೂ ಸಹ ಕಾಯಿಲೆಗಳಿಗೆ ಔಷಧಿಗಾಗಿ ರಾಘಪ್ಪನನ್ನು ಹುಡುಕಿಕೊಂಡು ಬರುತ್ತಿದ್ದರು. ಇದೆ ಮುಂದೆ ಇವರ ಮನೆತನಕ್ಕೆ ರೋಗಣ್ಣವರ ಎಂದು ಕರೆಯಲಾಯಿತು. ರಾಘಪ್ಪನಿಗೆ ಇಬ್ಬರು ಮಕ್ಕಳು ದೊಡ್ಡ ಭರಮಪ್ಪ ಮತ್ತು ಸಣ್ಣಭರಮಪ್ಪ. ದೊಡ್ಡ ಭರಮಪ್ಪನಿಗೆ ಕೆಂಚವ್ವನೊಂದಿಗೆ ವಿವಾಹವಾಯಿತು. ಭರಮಪ್ಪನ ಸಹ ವೀರನಾಗಿದ್ದನು. ಮಲ್ಲಸರ್ಜನ ಆಳ್ವಿಕೆಯ ಕಾಲದಲ್ಲಿ ನಿಚ್ಚಣಿಕೆ ಎಂಬ ಗ್ರಾಮದಲ್ಲಿ ಮಲ್ಲಸರ್ಜನ ಸುಂದರವಾದ ತೋಟವಿತ್ತು. ಈ ತೋಟದಲ್ಲಿ ಆಕಸ್ಮಿಕವಾಗಿ ಹುಲಿಯೊಂದು ಸೇರಿಕೊಂಡು ಸುತ್ತಮುತ್ತಲಿನ ಪ್ರದೇಶದ ಜನರಿಗೆ ತೊಂದರೆಯನ್ನು ನೀಡುತ್ತಿತ್ತು. ಈ ವಿಷಯವನ್ನು ತಿಳಿದ ಭರಮಪ್ಪನು ಆ ತೋಟದೊಳಗೆ ಹೋಗಿ, ಹುಲಿಯೊಂದಿಗೆ ಸೆಣಸಾಡಿ ಕೊನೆಗೆ ಹುಲಿಯನ್ನು ಕೊಂದನು. ಹುಲಿಯನ್ನು ಕೊಂದ ವಿಷಯ ದೊರೆಗೆ ತಿಳಿದ ನಂತರ ಭರಮಪ್ಪನಿಗೆ ಸನ್ಮಾನ ಮಾಡಲಾಯಿತು. ಜೊತೆಗೆ ೩೫ ಎಕೆರೆ ಜಮೀನನ್ನು ನೀಡಿದರು. ಈ ಜಮೀನಿಗೆ 'ರಕ್ತ ಮಾನ್ಯದ' ಜಮೀನು ಎಂದು ಕರೆಯುತ್ತಾರೆ. ಅಂದಿನ ಕಾಲದಲ್ಲಿ ತಮ್ಮ ಜೀವನವನ್ನು ಪಣಕ್ಕಿಟ್ಟು ಹೋರಾಟ ಮಾಡಿದವರಿಗೆ ಅರಸರು ನೀಡುತ್ತಿದ್ದಂತೆ ಬಹುಮನ.

ಭರಮಪ್ಪ ಮತ್ತು ಕೆಂಚವ್ವವರ ಮಗನಾಗಿ ರಾಯಣ್ಣನು ಜನಿಸಿದನು. ವಂಶಪರಂಪರೆಯಾಗಿ ಬಂದಂತಹ ವೀರತನವು ರಾಯಣ್ಣನಲ್ಲಿಯೂ ಬಂದಿತ್ತು. ಬಾಲ್ಯದಿಂದಲೇ ರಾಯಣ್ಣ ಗರಡಿಮನೆಯಲ್ಲಿ ಯುದ್ಧಕಲೆಗಳನ್ನು ಕಲಿಯುತ್ತಿದ್ದನು. ಕುಸ್ತಿ, ವೇಗವಾಗಿ ಓಡುವುದು, ಕತ್ತಿ ವರೆಸೆಗಳಲ್ಲಿ ರಾಯಣ್ಣನು

ನಿಪುಣನಾಗಿದ್ದನು. ಸಂಗೊಳ್ಳಿ ರಾಯಣ್ಣನ ಸಹೋದರ ಮತ್ತು ಸಹೋದರಿ ಹಾಗೂ ಹೆಂಡತಿಯ ವಿಷಯದ ಕುರಿತು ವಿದ್ವಾಂಸರಲ್ಲಿ ಗೊಂದಲಗಳು ಹಾಗೂ ಭಿನ್ನತೆಗಳಿರುವುದು ಕಂಡುಬರುತ್ತದೆ. ಆದರೂ ಸಹ ರಾಯಣ್ಣನಿಗೆ ಅಣ್ಣ, ತಂಗಿ, ಹೆಂಡತಿ ಮತ್ತು ಮಗನಿದ್ದನೆಂದು ಕೆಲವು ಕೃತಿಗಳಲ್ಲಿ ದಾಖಲಾಗಿರುವುದನ್ನು ಕಾಣುತ್ತೇವೆ. ರಾಯಣ್ಣನಿಗೆ ಸಿದ್ದಪ್ಪನೆಂಬ ಅಣ್ಣನಿದ್ದನೆಂದೂ ಹೆಚ್ಚಾಗಿ ದಾಖಲಾಗಿರುವುದು ಕಂಡುಬರುತ್ತದೆ. ಸಿದ್ದಪ್ಪನ ಜೊತೆಗೆ ಭೀಮಪ್ಪನೆಂಬ ಇನ್ನೊಬ್ಬ ಅಣ್ಣನಿದ್ದನೆಂದೂ ಆತ ದೊಡ್ಡವನಾದಾಗ ಅಕಾಲಿಕ ಮರಣ ಹೊಂದಿದನೆಂದು ಕೆಲವು ಕೃತಿಗಳ ಮೂಲಕ ತಿಳಿದುಬರುತ್ತದೆ. "ಇವರಿಗೆ ಭೀಮಪ್ಪ, ಸಿದ್ದಪ್ಪ ಎಂಬ ಇಬ್ಬರು ಮಕ್ಕಳು. ರಾಯಪ್ಪ ಎಂಬ ಕಿರಿಯ ಮಗ ಜನಿಸಿದನು. ಅವರೆಲ್ಲಾ ಬಿದಿಗೆಯ ಚಂದ್ರನಂತೆ ಬೆಳೆಯುತ್ತಿರುವಾಗ ಭೀಮಪ್ಪನು ದೊಡ್ಡವನಾದ ನಂತರ ಅಕಾಲ ಮರಣಕ್ಕೀಡಾದನು."[೨]

ರಾಯಣ್ಣನ ವಿವಾಹದ ಕುರಿತು ಖಚಿತವಾದ ಯಾವುದೇ ರೀತಿಯ ಲಿಖಿತ ದಾಖಲೆಗಳಿಲ್ಲ. ಕೆಲವೇ ಕೆಲವು ಕೃತಿಗಳಲ್ಲಿ ಹಾಗೂ ಮೌಖಿಕ ಇತಿಹಾಸದಿಂದ ಅಲ್ಪಸ್ವಲ್ಪ ಮಾಹಿತಿ ತಿಳಿದುಬರುತ್ತದೆ. ನೇಗಿನಹಾಳದ ಲಕ್ಕಪ್ಪನ ತಂಗಿಯನ್ನು ರಾಯಣ್ಣ ವಿವಾಹವಾಗಿದ್ದನು. ಕಿತ್ತೂರನ್ನು ಮತ್ತೇ ಸ್ವಾತಂತ್ರಗೊಳಿಸಲು ಹೊರಡುವ ಸಂದರ್ಭದಲ್ಲಿ ರಾಯಣ್ಣ "ಆದರೆ ಬಂಧ ಮುಕ್ತರಾದ ಮೇಲೆ ಎಲ್ಲರಂತೆ ಅವನು ಕೂಡ ಊರಿಗೆ ಹೋಗಿ ಮಾಮೂಲಿ ವೃತ್ತಿಯಲ್ಲಿ ಸೇರಿಕೊಳ್ಳಲಿಲ್ಲ. ಅದರ ಬದಲಾಗಿ ತನ್ನ ಮುದ್ದಿನ ಮಡದಿ ಮಗುವನ್ನು ತೊರೆದ. ಜನ್ಮ ಕೊಟ್ಟ ತಂದೆ ತಾಯಿಗಳಿಂದ ದೂರವಾದ. ನಿದ್ರೆ ಆಹಾರಗಳನ್ನು ತೊರೆದು ಕಿತ್ತೂರನ್ನು ಸ್ವಾತಂತ್ರ್ಯಗೊಳಿಸುವುದಕ್ಕೆ ಪಣತೊಟ್ಟು ಹಗಲು ರಾತ್ರಿ ಅಲೆದ. ಕಾಡು-ಮೇಡು ಸುತ್ತಿ ಸಾವಿರಾರು ಸೈನಿಕರ ದಂಡು ಕಟ್ಟಿದ. ತನ್ನ ಚತುರೋಕ್ತಿಯ ಎಲ್ಲಾ ರೀತಿಯ ತಂತ್ರಗಾರಿಕೆಯಿಂದಾಗಿ ಹಣಬಲ, ಜನಬಲದಿಂದ ಸರ್ವರೀತಿಯಲ್ಲೂ ಸಜ್ಜಾಗಿದ್ದ ಆಂಗ್ಲರ ಸೈನ್ಯವನ್ನು ತತ್ತರಿಸುವಂತೆ ಮಾಡಿದ. ಎಂತೆಂಥಹ ರಾಜ ಮಹಾರಾಜರುಗಳನೆಲ್ಲಾ ಮಣ್ಣು ಮುಕ್ಕಿಸಿದ್ದ. ಜಯ ಶತಸಿದ್ದ ಎನ್ನುವ ವಾತಾವರಣ ನಿರ್ಮಾಣವಾಗುತ್ತಿರುವಾಗಲೇ ದೇಶದ್ರೋಹಿ ಹಿತ ಶತೃವಿನ ಕುತಂತ್ರಕ್ಕೆ ಸಿಲುಕಿದ. ನಿರಾಯುಧನಾಗಿ ಸ್ನಾನ ಮಾಡುತ್ತಿದ್ದಾಗ ಬ್ರಿಟೀಷರ ಬಂಧೀಯಾದ."[೩] ರಾಯಣ್ಣನು ಕಿತ್ತೂರನ್ನು ಮರಳಿ ಸ್ಥಾಪಿಸುವುದಕ್ಕಾಗಿ ತನ್ನ ಕುಟುಂಬವನ್ನು ತ್ಯಜಿಸಿದ. ತನ್ನ ಜೀವನದ ಆಸೆ-ಆಕಾಂಕ್ಷೆಗಳನ್ನು ತ್ಯಜಿಸಿ ಸ್ನೇಹಿತರೊಂದಿಗೆ ಸೇರಿ ಬ್ರಿಟಿಷರನ್ನು ಕಿತ್ತೂರಿನಿಂದ ಹೊರಹಾಕಿ ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸಬೇಕೆಂದು ಹೋರಾಟವನ್ನು ಮಾಡುತ್ತಾನೆ.

ರಾಯಣ್ಣನ ಸ್ನೇಹಿತರೆಂದರೆ ಬಿಚ್ಚುಗತ್ತಿ ಚನ್ನಬಸವ, ವಡ್ಡರ ಯಲ್ಲಣ್ಣ ಮತ್ತು ಅಮಟೂರು ಬಾಳಪ್ಪ. ರಾಯಣ್ಣ ಓಡುವುದರಲ್ಲಿ, ಬಾಳಣ್ಣ ಗುರಿ ಹೊಡೆಯುವುದರಲ್ಲಿ, ಬಿಚ್ಚುಗತ್ತಿ ಚನ್ನಬಸವ ಕತ್ತಿವರಸೆಯಲ್ಲಿ ನೈಪುಣ್ಯತೆಯನ್ನು ಹೊಂದಿದ್ದರು. ಈ ಮೂವರು ಕೂಡಿ ಒಮ್ಮೆ ಕಿತ್ತೂರಿಗೆ

ಹೋಗಿ ತಾವು ಕಲಿತ ವಿದ್ಯೆಯನ್ನು ಕಿತ್ತೂರಿನ ಸೈನ್ಯಾಧಿಕಾರಿಗಳ ಮುಂದೆ ತೋರಿಸಿದಾಗ ಕಿತ್ತೂರಿನ ಸೈನ್ಯಾಧಿಕಾರಿಗಳು ಇವರನ್ನು ಕಿತ್ತೂರಿನ ಸೈನ್ಯದಲ್ಲಿ ಸೇರಿಸಿಕೊಂಡರು. ಕಿತ್ತೂರಿನಲ್ಲಿ ನಡೆದ ಎರಡು ಯುದ್ಧಗಳಲ್ಲಿ ಇವರು ಭಾಗಿಗಳಾಗಿದ್ದರು. ಕಿತ್ತೂರಿನ ಮೊದಲ ಯುದ್ಧದಲ್ಲಿ ಬಾಳಣ್ಣ ಗುರಿಯಿಟ್ಟು ಹೊಡೆದು ಥ್ಯಾಕರೆಯನ್ನು ಅಂತ್ಯ ಮಾಡುತ್ತಾನೆ. ಆದರೆ ಬ್ರಿಟಿಷರು ಕಿತ್ತೂರಿನ ಮೇಲೆ ಮತ್ತೆ ದಾಳಿ ಮಾಡಿ ಮೋಸದಿಂದ ಕಿತ್ತೂರನ್ನು ವಶಪಡಿಸಿಕೊಳ್ಳುತ್ತಾರೆ. ಸಂಗೊಳ್ಳಿ ರಾಯಣ್ಣನಂತಹ ಅನೇಕ ಸೈನಿಕರನ್ನು ಸೆರೆಮನೆಗೆ ಹಾಕುತ್ತಾರೆ. ಸೆರೆಮನೆಯಿಂದ ಬಿಡುಗಡೆಗೊಂಡ ನಂತರ, ಮತ್ತೆ ಕಿತ್ತೂರನ್ನು ಸ್ವಾತಂತ್ರಗೊಳಿಸಲು ಹೋರಾಟವನ್ನು ಮಾಡಲು ರಾಯಣ್ಣನ ನೇತೃತ್ವದಲ್ಲಿ ಅನೇಕರು ಹೋರಾಟದಲ್ಲಿ ಪಾಲ್ಗೊಳ್ಳುತ್ತಾರೆ.

ಸೆರೆಮನೆಯಿಂದ ಬಿಡುಗಡೆಗೊಂಡ ನಂತರ ರಾಯಣ್ಣ ಮನದಲ್ಲಿ ಶೂನ್ಯತೆಯೊಂದಿಗೆ ಸಂಗೊಳ್ಳಿಗೆ ಹೋಗುವಾಗ ಕಿತ್ತೂರಿನ ವೈಭವ, ರಾಣಿಯ ಸ್ಥಿತಿ, ಬ್ರಿಟಿಷರ ವಶವಾದ ನಂತರ ಕಿತ್ತೂರಿನ ಪರಿಸ್ಥಿತಿ ಮೊದಲಾದವುಗಳನ್ನು ನೋಡಿ ಮನದಲ್ಲಿ ನೋವು ಅಸಾಧ್ಯವಾಗಿತ್ತು. ಆದರೆ ರಾಯಣ್ಣ ಅಸಹಾಯಕ ಸ್ಥಿತಿಯಲ್ಲಿದ್ದ. ಅಲ್ಲಿಂದಲೇ ಮನಸ್ಸಿನಲ್ಲಿ ಮತ್ತೆ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಿ ಮತ್ತೆ ದೇಸಾಯಿಯರ ಆಡಳಿತವನ್ನು ಮರಳಿ ಸ್ಥಾಪಿಸುವುದಕ್ಕೆ ಮುಂದಾಗುತ್ತಾನೆ. "ಕಿತ್ತೂರಿನ ಅರಮನೆಯ ಉತ್ತರ ದಿಕ್ಕಿನ ಗೋಡೆಯಲ್ಲಿ ಒಂದು ಸಣ್ಣ ಕಿಂಡಿಯಿತ್ತು. ಅದರ ಮೂಲಕ ಧ್ರುವ ನಕ್ಷತ್ರದ ದರ್ಶನವನ್ನು ರಾಜಪರಿವಾರ ಮಾಡುತ್ತಿತ್ತು. ಆ ಕಿಂಡಿಯ ನೋಡಿದ ರಾಯಣ್ಣನ ಕಣ್ಣಲ್ಲಿ ಮಿಂಚು ಹೊಳೆಯಿತು. ಹೊಸ ಹುರುಪಿನಿಂದ ಕಿತ್ತೂರಿಗೆ ಬಡಿದುಕೊಂಡಿರುವ ದರಿದ್ರವನ್ನು ಶಾಪವನ್ನು ಬಿಡಿಸಲು ಮನಸ್ಸಿನ ಒಳಗೊಳಗೆ ಕನಸಿನ ಗೂಡು ಕಟ್ಟಿದ."[೪] ಇಲ್ಲಿಂದಲೇ ಕಿತ್ತೂರನ್ನು ಮರಳಿ ಸ್ವಾತಂತ್ರಗೊಳಿಸಲು ಸ್ನೇಹಿತರೊಂದಿಗೆ ಸೇರಿ ಹೋರಾಟಕ್ಕೆ ಮುಂದಾಗುತ್ತಾನೆ.

ಕಿತ್ತೂರು ಬ್ರಿಟಿಷರ ವಶವಾದ ಮೇಲೆ ಆಡಳಿತದ ಅನುಕೂಲಕ್ಕಾಗಿ ಕಿತ್ತೂರನ್ನು ಬೀಡಿ, ಸಂಪಗಾವಿ, ಹಾಗೂ ಕಿತ್ತೂರು ಎಂದು ಮೂರು ವಿಭಾಗಗಳನ್ನಾಗಿ ಮಾಡಿಕೊಂಡು ಆಡಳಿತವನ್ನು ನಡೆಸುತ್ತಾರೆ. ಸಂಗೊಳ್ಳಿ ಸಂಪಗಾವಿಯ ವಿಭಾಗಕ್ಕೆ ಸೇರಿರುತ್ತದೆ. ಸಂಗೊಳ್ಳಿಯ ಕುಲಕರ್ಣಿಯಾಗಿ ಬಾಳಪ್ಪನು ಕಾರ್ಯನಿರ್ವಹಿಸುತ್ತಿರುತ್ತಾನೆ. ಸೆರೆಮನೆಯಿಂದ ಬಿಡುಗಡೆಗೊಂಡ ನಂತರ ರಾಯಣ್ಣ ಸಂಗೊಳ್ಳಿಗೆ ಮರಳುತ್ತಾನೆ. ಆದರೆ ಅನಿವಾರ್ಯವಾಗಿ ವಾಲಿಕಾರಿಕೆ ವೃತ್ತಿಯನ್ನು ಮಾಡಬೇಕಾಗುತ್ತದೆ. ರಾಯಣ್ಣನ ಮನೆತನಕ್ಕೆ ವಾಲಿಕಾರಿಕೆ ವೃತ್ತಿಯು ವಂಶಪರಂಪರೆಯಾಗಿ ಬಂದಿರುತ್ತದೆ. ಕಾಗದ ಪತ್ರಗಳನ್ನು ಸಂಗೊಳ್ಳಿಯಿಂದ ಸಂಪಗಾವ, ಸಂಪಗಾವಿಯಿಂದ ಸಂಗೊಳ್ಳಿಗೆ ರವಾನೆ ಮಾಡುವುದು ಇವರ ಕೆಲಸವಾಗಿರುತ್ತದೆ. ಇದಕ್ಕಾಗಿ ಕಿತ್ತೂರು ದೇಸಾಯರ ಕಾಲದಲ್ಲಿ ಸಂಬಳದ ಬದಲು ಜಮೀನನ್ನು ನೀಡಿರುತ್ತಾರೆ. ಸೆರೆಮನೆಯಿಂದ ಬಿಡುಗಡೆಗೊಂಡ ನಂತರ ವಾಲಿಕಾರ ವೃತ್ತಿಯನ್ನು ಮಾಡಲು ಮನಸ್ಸಿಲ್ಲದಿದ್ದರೂ ಅನಿವಾರ್ಯವಾಗಿ ಮಾಡಲೇಬೇಕಾಗುತ್ತದೆ. ಕುಟುಂಬದ ನಿರ್ವಹಣೆ,

ಹಾಗೂ ಕಿತ್ತೂರನ್ನು ಮರಳಿ ಸ್ಥಾಪಿಸುವುದಕ್ಕೆ ಸ್ನೇಹಿತರೊಂದಿಗೆ ಸೇರಿ ಚರ್ಚಿಸಿದಾಗ ಯಲ್ಲಣ್ಣನ ಮಾತಿನಂತೆ ರಾಯಣ್ಣನು ವಾಲೀಕಾರಿಕೆ ವೃತ್ತಿಯನ್ನು ಮಾಡುತ್ತಾ ಜೊತೆಜೊತೆಗೆ ಸೈನ್ಯ ಸಂಘಟನೆಯನ್ನು ಮಾಡುತ್ತಿರುತ್ತಾನೆ.

ಸಂಗೊಳ್ಳಿಯ ಕುಲಕರ್ಣಿ ಬಾಳಪ್ಪನ ಹಾಗೂ ರಾಯಣ್ಣನ ಆಲೋಚನೆಗಳಲ್ಲಿ ತುಂಬಾ ವ್ಯತ್ಯಾಸವಿರುತ್ತದೆ. ರಾಯಣ್ಣ ಕಿತ್ತೂರನ್ನು ಬ್ರಿಟಿಷರಿಂದ ಮರಳಿ ಸ್ಥಾಪಿಸುವುದಕ್ಕೆ ಹೋರಾಟ ಮಾಡುವುದಕ್ಕೆ ಮುಂದಾದರೆ, ಕುಲಕರ್ಣಿ ಬಾಳಪ್ಪನು ಬ್ರಿಟಿಷರ ಅನುಯಾಯಿಯಾಗಿರುತ್ತಾನೆ. ಜೊತೆಗೆ ಕುಲಕರ್ಣಿಗೆ ರಾಯಣ್ಣನ ಜಮೀನಿಗಿಂತ ಕಡಿಮೆ ಜಮೀನನ್ನು ಹೊಂದಿದ್ದರಿಂದ ಮತ್ಸರ ಪಡುತ್ತಿದ್ದನು. ರಾಯಣ್ಣನ ಮನೆತನದವರು ತಳವಾರಿಕೆ ವೃತ್ತಿಯನ್ನು ಮಾಡುತ್ತಿದ್ದರಿಂದ ವತನಿ ಭೂಮಿಯನ್ನು ಹಾಗೂ ಭರಮಪ್ಪನು ತೋರಿದ ಸಾಹಸಕ್ಕಾಗಿ ದೊರೆತಂತಹ ರಕ್ತ ಮಾನ್ಯದ ಜಮೀನನ್ನು ಹೊಂದಿದ್ದರಿಂದ ಕುಲಕರ್ಣಿಯು ಅಸೂಯೆ ಪಡುತ್ತಿದ್ದನು. ಬ್ರಿಟಿಷರು ಕಿತ್ತೂರಿನ ಜಮೀನುಗಳನ್ನು ಅಳತೆ ಮಾಡಲು ಆದೇಶವನ್ನು ಹೊರಡಿಸುತ್ತಾರೆ. ಆದೇಶದಂತೆ ಸಂಗೊಳ್ಳಿಯ ಕುಲಕರ್ಣಿ ಜಮೀನುಗಳ ಅಳತೆಯನ್ನು ಮಾಡುತ್ತಾನೆ. ಕಿತ್ತೂರು ದೇಸಾಯವರಿಂದ ಪಡೆದಂತಹ ಜಮೀನಿಗೆ ಇದುವರೆಗೂ ರಾಯಣ್ಣನ ಮನೆತನವು ಕಂದಾಯವನ್ನು ನೀಡಿರಲಿಲ್ಲ, ಜಮೀನಿನ ಅಳತೆಯ ನಂತರ ಹೆಚ್ಚಾಗಿರುವ ಭೂಮಿಗೆ ತೆರಿಗೆಯನ್ನು ನೀಡಬೇಕೆಂದು ಕುಲಕರ್ಣಿಯು ರಾಯಣ್ಣನಿಗೆ ಹೇಳುತ್ತಾನೆ. ಆಗ ರಾಯಣ್ಣನು ನಾವು ಇದುವರೆಗೂ ಕಂದಾಯವನ್ನು ನೀಡಿಲ್ಲ, ಈಗಲೂ ಸಹ ಕಂದಾಯವನ್ನು ಕೊಡುವುದಿಲ್ಲ ಎಂದು ನಿರಾಕರಿಸುತ್ತಾನೆ.

ಬ್ರಿಟಿಷರು ಕಿತ್ತೂರನ್ನು ವಶಪಡಿಸಿಕೊಂಡ ನಂತರ ತಮ್ಮ ನೀತಿಗಳನ್ನು ಕಿತ್ತೂರಿನಲ್ಲಿ ಜಾರಿಗೆ ತಂದರು. ಅಂತಹವುಗಳಲ್ಲಿ ಜಮೀನಿನ ಅಳತೆಯು ಒಂದು. ಕುಲಕರ್ಣಿಗಿಂತ ರಾಯಣ್ಣನಿಗೆ ಆಸ್ತಿ ಹೆಚ್ಚಾಗಿದ್ದರಿಂದ ಕುಲಕರ್ಣಿ ರಾಯಣ್ಣನನ್ನು ಕಂಡು ಅಸೂಯೆ ಪಡುತ್ತಿದ್ದ. ಜಮೀನಿನ ಅಳತೆಯ ನಂತರ ಅಳತೆಗಿಂತ ಹೆಚ್ಚಾಗಿ ಇರುವುದಕ್ಕೆ ೩೨ ರೂಪಾಯಿಗಳನ್ನು ಕೊಡಬೇಕೆಂದು ಹೇಳುತ್ತಾನೆ. ಆಗ ರಾಯಣ್ಣ ನಾವು ಇದುವರೆಗೂ ಕಂದಾಯವನ್ನು ಕೊಟ್ಟಿಲ್ಲ, ಈಗಲೂ ಕೊಡುವುದಿಲ್ಲವೆಂದು ಹೇಳುತ್ತಾನೆ.

ಈ ಘಟನೆಯಿಂದ ಕುಲಕರ್ಣಿ ಮತ್ತು ರಾಯಣ್ಣನಲ್ಲಿ ವೈಮನಸ್ಸು ಹೆಚ್ಚಾಗುತ್ತದೆ. ಈ ಘಟನೆಯ ನಂತರ ನಡೆದಂತಹ ಘಟನೆ ಬಾಳಪ್ಪನು ಮಲಪ್ರಭಾ ನದಿಯಲ್ಲಿ ಸ್ನಾನ ಮಾಡಿ ಮೈಲಿಗೆ ಬಟ್ಟೆಯನ್ನು ತೊಳೆದುಕೊಡಲು ರಾಯಣ್ಣನಿಗೆ ಹೇಳಿದಾಗ, ರಾಯಣ್ಣನಲ್ಲಿ ಸಹಜವಾಗಿ ಸಿಟ್ಟು ಮೂಡುತ್ತದೆ. ರಾಯಣ್ಣನ ಹೋರಾಟಕ್ಕೆ ಈ ಘಟನೆಯೇ ರಾಯಣ್ಣನಲ್ಲಿ ಸ್ವಾಭಿಮಾನ, ದೇಶಾಭಿಮಾನ, ಕಿತ್ತೂರನ್ನು ಮರಳಿ ಸ್ಥಾಪಿಸಲು ಕಾರಣವಾಗುತ್ತದೆ. ಕುಲಕರ್ಣಿ ರಾಯಣ್ಣನಲ್ಲಿನ ಸಿಟ್ಟು ಆಕ್ರೋಶವನ್ನು ಕಂಡು ಹೆದರುತ್ತಾನೆ. ನಂತರ ಕುಲಕರ್ಣಿಯು ರಾಯಣ್ಣನನ್ನು ಕರೆದು

ರಾಯಣ್ಣನ ಕೈಗೆ ಲಕೋಟೆಯೊಂದನ್ನು ಕೊಟ್ಟು ಸಂಪಗಾವಿಗೆ ಕಳುಹಿಸುತ್ತಾನೆ. ಆ ಲಕೋಟೆಯಲ್ಲಿ ಕುಲಕರ್ಣಿ ರಾಯಣ್ಣನ ವಿರುದ್ಧ ದೂರನ್ನು ಕೊಟ್ಟಿರುತ್ತಾನೆ. ರಾಯಣ್ಣನು ತನ್ನನ್ನು ಕೊಲ್ಲಲು ಬಂದಿದ್ದಾನೆಂದು ಬರೆದು ಸಂಪಗಾವಿಯ ಸೆರೆಮನೆಗೆ ಹಾಕಿಸುತ್ತಾನೆ.

ಕುಲಕರ್ಣಿ ಬಾಳಪ್ಪನ ರಾಯಣ್ಣನು ಸಂಪಗಾವಿಗೆ ಹೊರಟ ನಂತರ ಕುಲಕರ್ಣಿ ರಾಯಣ್ಣನ ತಾಯಿ ಕೆಂಚವ್ವನನ್ನು ಚಾವಡಿಗೆ ಕರೆಸುತ್ತಾನೆ. ಕಂದಾಯದ ಹಣವನ್ನು ಈಗಿಂದೀಗಲೇ ನೀಡಬೇಕೆಂದು ಕೇಳುತ್ತಾನೆ. ಕೆಂಚವ್ವ ರಾಯಣ್ಣ ಬಂದನಂತರ ಕೊಡುತ್ತಾನೆ ಎಂದು ಹೇಳುತ್ತಾಳೆ. ಆದರೆ ಬಾಳಪ್ಪ ಕೇಳುವುದಿಲ್ಲ. ಆಗಿನ ಕಾಲದಲ್ಲಿ ಕಂದಾಯ ಕಟ್ಟದವರಿಗೆ ಹಲವಾರು ಶಿಕ್ಷೆಗಳಿದ್ದವು. ಅಂತಹವುಗಳಲ್ಲಿ ಬೆನ್ನಿನ ಮೇಲೆ ಕಲ್ಲನ್ನು ಹೇರುವುದೂ ಒಂದಾಗಿರುತ್ತದೆ. ವಯಸ್ಸಾದ ಕೆಂಚವ್ವನ ಮೇಲೆ ಕಲ್ಲನ್ನು ಹೇರುತ್ತಾರೆ. ಅಂದಿನ ಕಾಲದಲ್ಲಿ ವಿಧಿಸುತ್ತಿದ್ದ ಶಿಕ್ಷೆ. ವಿಷಯ ತಿಳಿದ ಬಿಚ್ಚುಗತ್ತಿ ಚನ್ನಬಸವ ಬಂದು ಕಂದಾಯದ ಹಣವನ್ನು ನಾನು ನೀಡುತ್ತೇನೆ ಎಂದು ಹೇಳಿ ಕುಲಕರ್ಣಿಯನ್ನು ಒಪ್ಪಿಸುತ್ತಾನೆ. ಕುಲಕರ್ಣಿಯು ಕುತಂತ್ರದ ಮೂಲಕ ಮಾಡಿದ ಅವಾಂತರಗಳಿಂದ, ಸೆರೆಮನೆಗೆ ಕಳುಹಿಸಿದ್ದು, ಹಾಗೂ ತಾಯಿಯನ್ನು ಚಾವಡಿಗೆ ಕರೆಸಿ ಮಾಡಿದ ಕೃತ್ಯ ರಾಯಣ್ಣನಲ್ಲಿನ ಸಹನೆಯ ಕಟ್ಟೆ ಒಡೆಯಿತು. ಸಂಪಗಾವಿಯಲ್ಲಿ ತಾನು ಮಾಡದಿರುವ ತಪ್ಪಿಗೆ ಮೂರು ದಿನ ಸೆರೆಮನೆಯ ಶಿಕ್ಷೆ ಅನುಭವಿಸುತ್ತಾನೆ. ಯಾವುದೋ ಕೆಲಸದ ಮೇಲೆ ಬಂದ ಮೇಲಗಿರಿ ರಂಗನಗೌಡರು ರಾಯಣ್ಣನಿಗೆ ಜಾಮೀನು ಕೊಟ್ಟು ಬಿಡಿಸುತ್ತಾರೆ.

ಅಮಲ್ದಾರರಿಗೆ ರಾಯಣ್ಣನನ್ನು ಬಂಧಿಸಿರುವುದಕ್ಕೆ ಯಾವುದೇ ಸರಿಯಾದ ಆಧಾರಗಳು ಇರುವುದಿಲ್ಲ. ಆದ್ದರಿಂದ ಜಾಮೀನಿನ ಮೇರೆಗೆ ರಾಯಣ್ಣನನ್ನು ಬಿಡುಗಡೆ ಮಾಡುತ್ತಾರೆ. ಸೆರೆಮನೆಯಿಂದ ಹೊರಬಂದ ರಾಯಣ್ಣನು ತಾನು ಮಾಡದ ತಪ್ಪಿಗೆ ಶಿಕ್ಷೆಯನ್ನು ವಿಧಿಸಿದ್ದಕ್ಕೆ. "ನನ್ನನ್ನು ಮೋಸದಿಂದ ಜೈಲಿಗೆ ಹಾಕಿದ ಈ ಕಛೇರಿಗೆ ಹಾಡುಹಗಲೇ ಬೆಂಕಿ ಹಚ್ಚುತ್ತೇನೆ. ಇಲ್ಲದೇ ಹೋದರೆ ನಾನು ಕಿತ್ತೂರರಾಣಿ ಬಂಟನೇ ಅಲ್ಲ. ಮಲ್ಲಸರ್ಜನ ಹುಲಿರಾಯ ನಾಯಕನೇ ಅಲ್ಲ. ಹೆಬ್ಬುಲಿ ಕೊಂದ ವೀರ ಭರಮಣ್ಣನ ಮಗನೇ ಅಲ್ಲ ಎಂದು ಶಪತ ಹಾಕಿದ. ಜೈಲಿನಿಂದ ಹೊರ ಬಂದದ್ದೆ ತಡ ನಮಸ್ಕರಿಸಿ ಊರಿನತ್ತ ಓಡಿ ಹೋಗುತ್ತಾನೆಂದು ತಿಳಿದಿದ್ದ ಅಧಿಕಾರಿಗಳು ರಾಯಣ್ಣನ ಈ ವೀರಾವೇಶದ ಶಪತ ಕೇಳಿ ಗಡಗಡ ನಡುಗಿ ಬೆವತು ನೀರಾದರು. ಎವತ್ತೆ ಬೆಂಕಿ ಹಾಕಿ ಬಿಟ್ಟನೇನೊ ಎಂದು ಹೆದರಿದ ಕೆಲವು ಸೇವಕರು ಕಚೇರಿಯ ಹಿಂಭಾಗಕ್ಕೆ ಓಡಿದರು."[೨] ಈ ರೀತಿಯ ಪ್ರತಿಜ್ಞೆಯನ್ನು ಮಾಡಿ ಸಂಗೊಳ್ಳಿಗೆ ಹೋಗುತ್ತಾನೆ. ಆದರೆ ಸಂಗೊಳ್ಳಿಯಲ್ಲಿ ಕುಲಕರ್ಣಿ ಮಾಡಿದ ಅವಾಂತರಗಳನ್ನು ಕೇಳಿ ಕುಲಕರ್ಣಿಯನ್ನು ಜೀವ ಸಹಿತವಾಗಿ ಬಿಡುವುದಿಲ್ಲವೆಂದು ಕುಲಕರ್ಣಿಯ ಮನೆಗೆ ಬರುತ್ತಾನೆ. ಆದರೆ ಕುಲಕರ್ಣಿಯ ಹೆಂಡತಿ ಪತಿಬೀಕ್ಷೆ ಬೇಡಿದ್ದಕ್ಕೆ ಹಾಗೂ ಚಿಕ್ಕ ಮಕ್ಕಳನ್ನು ನೋಡಿ ಕುಲಕರ್ಣಿಗೆ ಕೊನೆಯ ಎಚ್ಚರಿಕೆ ನೀಡಿ ಗುಪ್ತವಾಗಿ ಮಾಡುತ್ತಿದ್ದಂತಹ

ಸಂಘಟನೆಯನ್ನು ಚುರುಕುಗೊಳಿಸುತ್ತಾನೆ. ಆ ದಿನವೇ ಸಂಗೊಳ್ಳಿಯನ್ನು ತೊರೆದು ಸ್ನೇಹಿತರೊಂದಿಗೆ ಹೋರಾಟದ ಕುರಿತು ಯೋಜನೆಗಳನ್ನು ರೂಪಿಸುತ್ತಾರೆ.

ಕಿತ್ತೂರು ಸಂಸ್ಥಾನ ಸ್ವಾತಂತ್ರ್ಯಕ್ಕಾಗಿ, ಸ್ವಾಭಿಮಾನಕ್ಕಾಗಿ ರಾಣಿ ಚೆನ್ನಮ್ಮ ಹೋರಾಟ ಮಾಡಿದಳು. ಚೆನ್ನಮ್ಮ ಕಿತ್ತೂರು ಸಂಸ್ಥಾನದ ರಾಣಿಯಾಗಿದ್ದಳು. ಆದರೆ ರಾಯಣ್ಣ ಕಿತ್ತೂರು ಸಂಸ್ಥಾನದ ಸಾಮಾನ್ಯ ಸೈನಿಕ. ಸಂಗೊಳ್ಳಿಯ ಸಾಮಾನ್ಯ ಪ್ರಜೆ ಅಷ್ಟೇ. ಆದರೆ ಕಿತ್ತೂರು ಬ್ರಿಟಿಷರ ವಶವಾದ ಮೇಲೆ ಮತ್ತೆ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಲು ರಾಯಣ್ಣ ಮಾಡಿದಂತಹ ಹೋರಾಟವು ಚರಿತ್ರೆಯಲ್ಲಿ ದಾಖಲಾರ್ಹ. ಏಕೆಂದರೆ ರಾಯಣ್ಣ ಈ ಹೋರಾಟದಲ್ಲಿ ಒಂದು ವೇಳೆ ಜಯಗಳಿಸಿದ್ದರೆ ಅರಸನಾಗುತ್ತಿರಲಿಲ್ಲ. ಅರಸನಾಗಬೇಕೆಂಬ ಬಯಕೆಯು ರಾಯಣ್ಣನಲ್ಲಿರಲಿಲ್ಲ. ರಾಯಣ್ಣನಲ್ಲಿ ಇದ್ದಂತಹದ್ದು ದೇಶಭಿಮಾನ, ನಾಡಾಭಿಮಾನ, ಸ್ವಾತಂತ್ರ್ಯವಷ್ಟೆ. ಅದಕ್ಕಾಗಿ ಕಿತ್ತೂರನ್ನು ಬ್ರಿಟಿಷರು ವಶಪಡಿಸಿಕೊಳ್ಳುವುದಕ್ಕಿಂತ ಪೂರ್ವದಲ್ಲಿ ದತ್ತು ತೆಗೆದುಕೊಂಡಿದ್ದಂತಹ ಸವಾಯಿ ಮಲ್ಲಸರ್ಜನನ್ನು ಮುಂದಿಟ್ಟುಕೊಂಡು ಕಿತ್ತೂರಿನಾದ್ಯಂತ ಸಂಚರಿಸಿ ಜನರಲ್ಲಿ ಮಲ್ಲಸರ್ಜಾ, ರಾಣಿ ಚೆನ್ನಮ್ಮ, ಕಿತ್ತೂರಿನ ವೈಭವದ ಕುರಿತು ಹೇಳಿ ಮತ್ತೆ ದೇಸಾಯರ ಆಡಳಿತವನ್ನು ಮರಳಿ ಸ್ಥಾಪಿಸುವುದಕ್ಕೆ ನಾವೆಲ್ಲರೂ ಕೂಡಿ ಬ್ರಿಟಿಷರ ವಿರುದ್ಧ ಹೋರಾಟ ಮಾಡಬೇಕೆಂದು ಜನರಲ್ಲಿ ಜಾಗೃತಿ ಮೂಡಿಸುತ್ತಾನೆ.

ರಾಯಣ್ಣನೊಂದಿಗೆ ಹೋರಾಟದಲ್ಲಿ ಭಾಗವಹಿಸಿದ ಪ್ರಮುಖರೆಂದರೆ ಬಿಚ್ಚುಗತ್ತಿ ಚನ್ನಬಸವ, ವಡ್ಡರ ಯಲ್ಲಣ್ಣ, ಬಾಳನಾಯಕ, ಗಜವೀರ, ಅಪ್ಪಾಜಿ, ರುದ್ರನಾಯಕ, ರಣೋಜಿ ಮುಂತಾದವರು ಕಿತ್ತೂರಿನ ಸೈನ್ಯದಲ್ಲಿ ಇದ್ದವರು ಹಾಗೂ ಇತರರು ಸೇರಿ ಮರಳಿ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಲು ಹಗಲು–ರಾತ್ರಿಯೆನ್ನದೆ ಸೈನ್ಯವನ್ನು ಸಂಘಟಿಸಿ, ಮದ್ದುಗುಂಡುಗಳನ್ನು ಸಂಗ್ರಹಿಸಿ ಹೋರಾಟದ ಕುರಿತು ಯೋಜನೆಗಳನ್ನು ರೂಪಿಸಿಕೊಳ್ಳುತ್ತಾರೆ. ಹೋರಾಟದ ಸಿದ್ಧತೆಯಲ್ಲಿದ್ದಾಗ ಸೆರೆಮನೆಯಲ್ಲಿದ್ದಂತಹ ರಾಣಿ ಚೆನ್ನಮ್ಮನನ್ನು, ರಾಯಣ್ಣ ಜಂಗಮನ ವೇಷದಲ್ಲಿ ಹೋಗಿ ಕಿತ್ತೂರನ್ನು ಬಿಡುಗಡೆಗೊಳಿಸುವುದಕ್ಕಾಗಿ, ತಾವು ಮಾಡಿಕೊಂಡಿರುವಂತಹ ಹೋರಾಟದ ಸಿದ್ಧತೆಯನ್ನು ಹೇಳಿ ರಾಣಿಯ ಆಶೀರ್ವಾದವನ್ನು ಪಡೆಯುತ್ತಾನೆ. ಸೆರೆಮನೆಯಲ್ಲಿದ್ದ ರಾಣಿಗೆ ಜೀವನವೇ ಶೂನ್ಯ ಎನ್ನಿಸುವಂತಹ ಸಂದರ್ಭದಲ್ಲಿ ರಾಯಣ್ಣನ ಹೋರಾಟದ ಸಿದ್ಧತೆಯನ್ನು ಕೇಳಿ ರಾಣಿಯಲ್ಲಿ ಮತ್ತೆ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸುವುದಾಗಿ ಹೇಳಿದಾಗ, ಮನದಲ್ಲಿ ದೂರದ ಆಸೆಯೊಂದು ಮತ್ತೆ ಚಿಗುರೊಡೆಯುತ್ತದೆ. ರಾಣಿಯಲ್ಲಿ ಹೊಸ ಚೈತನ್ಯ ಮೂಡುತ್ತದೆ. ಆಗ ರಾಣಿ ಚೆನ್ನಮ್ಮಳು ರಾಯಣ್ಣನಿಗೆ ಆಶೀರ್ವದಿಸಿ ತನ್ನಲ್ಲಿದ್ದಂತಹ ಒಡವೆಗಳನ್ನು ರಾಯಣ್ಣನಿಗೆ ಕೊಟ್ಟು ಕಳುಹಿಸುತ್ತಾಳೆ.

ರಾಯಣ್ಣ ಸೈನ್ಯವನ್ನು ಸಂಘಟಿಸುವ ಸಂದರ್ಭದಲ್ಲಿ ಗಜವೀರನನ್ನು ಭೇಟಿಯಾಗಿ ತಾನು ಕೈಗೊಂಡಿರುವ ಕಾರ್ಯದ ಕುರಿತು ಹೇಳಿದಾಗ ಗಜವೀರನು ಮರುಮಾತನಾಡದೆ ತನ್ನ

ತಂಡದೊಂದಿಗೆ ರಾಯಣ್ಣನ ಜೊತೆ ಸೇರಲು ಒಪ್ಪಿಕೊಳ್ಳುತ್ತಾನೆ. ಗಜವೀರ ಗುಂಪುಕಟ್ಟಿಕೊಂಡು ಕಾಡುಮೇಡುಗಳಲ್ಲಿ ಅಲೆಯುತ್ತಾ ದಾರಿಹೋಕರನ್ನು ದೋಚುವ ಕೆಲಸ ಮಾಡಿಕೊಂಡಿರುತ್ತಾನೆ. ಆದರೆ ರಾಯಣ್ಣ ಮಾಡುತ್ತಿರುವಂತಹ ಹೋರಾಟದಲ್ಲಿ ನನ್ನ ಪಾಲು ಇರಲೆಂದು ರಾಯಣ್ಣನ ಜೊತೆ ಸೇರಿಕೊಳ್ಳುತ್ತಾನೆ. ಗಜವೀರನ ತಂಡವು ಒಂದು ಕಡೆಯಿಂದ ಇನ್ನೊಂದು ಕಡೆಗೆ ಕ್ಷಣಮಾತ್ರದಲ್ಲಿ ಸಂಚರಿಸುವಂತಹ ತಂಡವಾಗಿರುತ್ತದೆ. ಕಿತ್ತೂರನ್ನು ಮರಳಿ ಸ್ಥಾಪಿಸುವುದಕ್ಕೆ ಹಾಗೂ ಬ್ರಿಟಿಷರ ವಿರುದ್ಧ ಹೋರಾಡುವುದಕ್ಕೆ ಇಂತವರ ನೆರವನ್ನು ಪಡೆಯುತ್ತಾನೆ.

ಸೈನ್ಯವನ್ನು ಸಂಘಟಿಸುವ ಸಮಯದಲ್ಲಿ ರಾಯಣ್ಣ ಕಿತ್ತೂರಿನ ಕೊನೆಯ ರಾಣಿಯಾದ ವೀರವ್ವನ ತವರುಮನೆಗೆ ಹೋದರೆ, ಸೈನ್ಯ ಹಾಗೂ ಧನಸಹಾಯ ದೊರೆಯಬಹುದೆಂದು ರಾಯಣ್ಣ ಶಿವನಗುತ್ತಿಗೆ ಹೋಗುತ್ತಾನೆ. ಶಿವನಗುತ್ತಿ ಅರಸರು ಹತ್ತಾರು ಗ್ರಾಮಗಳಿಗೆ ಮಾತ್ರ ಸೀಮಿತವಾಗಿದ್ದರಿಂದ ನಿರೀಕ್ಷಿತ ಸಹಾಯ ದೊರೆಯುವುದು ಕಾಣಿಸುವುದಿಲ್ಲ. ಆದರೂ ಸಹ ರಾಯಣ್ಣ ಶಿವನಗುತ್ತಿಯ ಅರಸನ ಬಳಿ ಹೋಗಿ, ತಾನು ಕೈಗೊಂಡಿರುವ ಕಾರ್ಯದ ಕುರಿತು ಹೇಳಿದಾಗ, ಶಿವನಗುತ್ತಿ ಅರಸ ತನ್ನ ಅಸಹಾಯಕತೆಯನ್ನು ಹೇಳಿಕೊಳ್ಳುತ್ತಾನೆ. ಆ ಪ್ರದೇಶದಲ್ಲಿದ್ದಂತಹ ಕನಕೂರ ಒಕ್ಕಳ ಭರಮನೆಂಬ ದರೋಡೆಕೋರ ಆಗಾಗ ದರೋಡೆ ಮಾಡುತ್ತಿರುವುದರ ಕುರಿತು ಹೇಳುತ್ತಾನೆ. ಆಗ ರಾಯಣ್ಣ ಒಕ್ಕಳ ಭರಮನಿರುವ ಸ್ಥಳವನ್ನು ಕೇಳಿಕೊಂಡು ನಿಮಗೆ ತೊಂದರೆ ನೀಡುತ್ತಿರುವ ಆತನನ್ನು ಮುಗಿಸುತ್ತೇನೆ ಎಂದು ಹೇಳಿ, ಕೆಲವು ಜನರನ್ನು ಕರೆದುಕೊಂಡು ಒಕ್ಕಳ ಭರಮನನ್ನು ಹುಡುಕಿಕೊಂಡು ಹೋಗುತ್ತಾನೆ. ಭರಮನು ತುಳಸಿ ಗುಡ್ಡದ ಕಾಡಿನಲ್ಲಿರುವ ಕಲ್ಲುಬಾವಿಯ ಹತ್ತಿರ ಪುಂಡ ಭರಮ ಇರುವುದನ್ನು ತಿಳಿದು ರಾಯಣ್ಣ ಅಲ್ಲಿಗೆ ಹೋಗುತ್ತಾನೆ. ಕಲ್ಲುಬಾವಿಯ ಹತ್ತಿರ ಭರಮ ಊಟವನ್ನು ಮಾಡುತ್ತಿರುತ್ತಾನೆ. ಆಗ ರಾಯಣ್ಣ ಒಕ್ಕಳ ಭರಮನನ್ನು ಕುರಿತು ತಾನು ಬಂದಿರುವ ಉದ್ದೇಶವನ್ನು ಹೇಳಿ ಊಟವನ್ನು ಮುಗಿಸಲು ಹೇಳುತ್ತಾನೆ. ಊಟವನ್ನು ಮುಗಿಸಿದ ನಂತರ, ಭರಮ ಮತ್ತು ರಾಯಣ್ಣ ನಮ್ಮಿಬ್ಬರ ನಡುವೆ ಮಾತ್ರ ಕಾಳಗ ನಡೆಯಲಿ ಎಂದು ಮಾತನಾಡಿಕೊಂಡು ಒಂದು ವೇಳೆ ಕಾಳಗದಲ್ಲಿ ನೀನು ಮರಣಹೊಂದಿದರೆ ನಿನ್ನ ದಂಡು ನನ್ನ ಜೊತೆ ಬರಬೇಕೆಂದು ರಾಯಣ್ಣ ಒಪ್ಪಂದವನ್ನು ಮಾಡಿಕೊಳ್ಳುತ್ತಾನೆ. ಭರಮ ಮತ್ತು ರಾಯಣ್ಣನ ನಡುವೆ ಕಾಳಗ ನಡೆಯುತ್ತದೆ. ರಾಯಣ್ಣನ ಮುಂದೆ ಭರಮನ ಆಟ ಹೆಚ್ಚು ಹೊತ್ತು ನಡೆಯುವುದಿಲ್ಲ. ಕೊನೆಗೆ ರಾಯಣ್ಣ ಭರಮನ ರುಂಡವನ್ನು ಹಾರಿಸುತ್ತಾನೆ.

ಶಿವನಗುತ್ತಿಯ ಅರಸನ ಮುಂದೆ ಒಕ್ಕಳ ಭರಮನ ಮುಗಿಸಿದ ಕಥೆಯನ್ನು ಹೇಳಿದಾಗ ಅರಸನಿಗೆ ತುಂಬ ಸಂತೋಷವಾಗುತ್ತದೆ. ಶಿವನಗುತ್ತಿಯ ಚಂದ್ರಸೇನ ರಾಜರು ತನ್ನಲ್ಲಿ ಇದ್ದದ್ದರಲ್ಲಿಯೇ ರಾಯಣ್ಣನಿಗೆ ಸೈನ್ಯ ಹಾಗೂ ಧನಸಹಾಯವನ್ನು ಕೊಟ್ಟು ಕಳುಹಿಸುತ್ತಾನೆ. "ನೋಡಿ ಮೊದಲು ನಮ್ಮಿಬ್ಬರಿಗೂ ಲಡಾಯಿ ಆಗ್ತದೆ. ಆಗ ಈ ರಾಯಣ್ಣನ ಕತೆ ಮುಗಿಯುತ್ತದೆ. ಹಾಗಾಗದೆ ನಾನೇ

ಸತ್ತರೆ ನೀವೆಲ್ಲರೂ ಅವನ ಹಿಂದೆಯೇ ಹೋಗಿ ಎಂದವನೇ ಜೈ ಕಾಳಿ ಎಂದು ಕೂಗುತ್ತ ಕತ್ತಿ ಕೈಗೆತ್ತುಕೊಂಡ.

ಬಂಟರೆಲ್ಲಾ ಸ್ತಂಭಿಭೂತರಾಗಿ ಬಿಟ್ಟಕಣ್ಣು ಬಿಟ್ಟಂತೆ ನೋಡತೊಡಗಿದರು. ಅವರಿಬ್ಬರೂ ಸಮ ಬಲಶಾಲಿಗಳಾಗಿದ್ದರಿಂದ ಸಮಸಮ ಕಾದಾಡ ತೊಡಗಿದರು. ಆದರೆ ಭರಮ ಎಷ್ಟೆ ಗಟ್ಟಿಗನಾಗಿದ್ದರೂ ಗರಡಿ ಮನೆಯಲ್ಲಿ ಪಳಗಿದ್ದ ರಾಯಣ್ಣನ ಕೈ ಚಳಕದ ಮುಂದೆ ಭರಮನ ಆಟ ಹೆಚ್ಚು ಹೊತ್ತು ನಡೆಯಲಿಲ್ಲ. ಭರಮ ಕೆಳಗೆ ಬಿದ್ದ. ರಾಯಣ್ಣನ ಕತ್ತಿ ಅವನ ತಲೆಯನ್ನು ಕತ್ತರಿಸಿತು. ಕತ್ತಿಯ ಮೊನೆ ಅದನ್ನು ಮೇಲೆತ್ತಿ ಹಿಡಿಯಿತು. ಭರಮನ ಅಣತಿಯಂತೆ ಅವನ ಭಂಟರೆಲ್ಲಾ ರಾಯಣ್ಣನಿಗೆ ಶರಣಾದರು. ರಾಯಣ್ಣನಿಗೆ ಜೈ ಎಂದರು. ಸತ್ತು ಬಿದ್ದ ಭರಮನ ಕಳೆ ಬರವನ್ನು ಎತ್ತಿನ ಗಾಡಿಯಲ್ಲಿ ಹೇರಿಕೊಂಡು ಎಲ್ಲರೂ ಶಿವನಗುತ್ತಿಗೆ ಬಂದರು. ಅಲ್ಲಿ ಸಕಲ ಮರ್ಯಾದೆಯಿಂದ ಶವವನ್ನು ಸಮಾಧಿ ಮಾಡಿದರು. ರಾಯಣ್ಣನ ಆ ಶೂರತನಕ್ಕೆ ರಾಜರು ಹಿರಿಹಿರಿ ಹಿಗ್ಗಿದರು. ಊರಲೆಲ್ಲಾ ಮೆರವಣಿಗೆ ಮಾಡಿಸಿದರು. ಸಕಲ ಮರ್ಯಾದೆಗಳಿಂದ ಸನ್ಮಾನಿಸಿದರು.

ಕೊನೆಗೆ ರಾಯಣ್ಣ ಹೊರಟು ನಿಂತಾಗ, ಆತನ ಜೊತೆಗೆ ಕೆಲವು ಸೈನಿಕರನ್ನು, ಹಣ ಹಾಗೂ ಹಲವು ಆಯುಧಗಳನ್ನು ಕೊಟ್ಟು ಬೀಳ್ಕೊಟ್ಟರು. ಹೊಟ್ಟೆಯ ಮಗಳಾದ ವೀರವ್ವ ರಾಣಿಗೆ ತಮ್ಮ ಹರಕೆ ಮುಟ್ಟಿಸಲು ಹೇಳಿದರು. ಎಲ್ಲಾ ಸರಂಜಾಮುಗಳನ್ನು ಹೊತ್ತ ರಾಯಣ್ಣ ನೂರಾರು ಸೈನಿಕರ ಜೊತೆ ಬಾಳೆಗುಂದದ ಕೊಳ್ಳದತ್ತ ಚಲಿಸಿದನು."[೬] ಶಿವನಗುತ್ತಿಯ ಅರಸನಿಂದ ಸಹಾಯವನ್ನು ಪಡೆದ ರಾಯಣ್ಣ ಮರಳಿ ಬರುತ್ತಾನೆ. ಕಿತ್ತೂರಿನಾದ್ಯಂತ ಹಲವಾರು ಯುವಕರು ರಾಯಣ್ಣನ ಹೋರಾಟದಲ್ಲಿ ಭಾಗಿಗಳಾಗಲು ರಾಯಣ್ಣನ ಸೈನ್ಯದಲ್ಲಿ ಬಂದು ಸೇರಿಕೊಳ್ಳುತ್ತಾರೆ. ಹೀಗೆ ಸಂಗ್ರಹಿಸಿದ ಸೈನ್ಯವನ್ನು ರಾಯಣ್ಣ ಬಾಳಗುಂದ ಕೊಳ್ಳದಲ್ಲಿ ಸಂಘಟಿಸಿ ಹೋರಾಟದ ಯೋಜನೆಗಳನ್ನು ರೂಪಿಸಿಕೊಳ್ಳುತ್ತಾನೆ.

ಬಲಾಢ್ಯರಾದ ಬ್ರಿಟಿಷರ ವಿರುದ್ಧ ನೇರವಾಗಿ ಹೋರಾಟ ಮಾಡುವುದು ಅಸಾಧ್ಯವೆಂದು ತಿಳಿದ ಕಾರಣ ರಾಯಣ್ಣನಲ್ಲಿ ಹೆಚ್ಚಿನ ಸೈನ್ಯ ಇಲ್ಲದೆ ಇರುವುದು ಹಾಗೂ ಯುದ್ಧದ ಆಯುಧಗಳ ಕೊರತೆಯನ್ನು ಮನಗೊಂಡ ರಾಯಣ್ಣ ಬ್ರಿಟಿಷರ ಒಂದೊಂದೆ ಕಚೇರಿಗಳ ಮೇಲೆ ದಾಳಿ ಹಾಗೂ ಬ್ರಿಟಿಷರ ಗುಲಾಮರಾಗಿರುವ ಮತ್ತು ಕಿತ್ತೂರಿನ ಅಧಿಕಾರಿಗಳಿಗೆ ಬ್ರಿಟಿಷರ ಚಾಕರಿಯನ್ನು ಬಿಡುವಂತೆ ಮನವೊಲಿಸುವುದು ಮಾಡುತ್ತಾನೆ. ಒಪ್ಪದಿದ್ದರೆ ಬೆದರಿಕೆಯನ್ನು ಹಾಕುವುದನ್ನು ಮಾಡತೊಡಗಿದರು. ಸೈನ್ಯದ ಆಹಾರ ಮತ್ತು ಯುದ್ಧ ಸಾಮಗ್ರಿಗಳಿಗಾಗಿ ಕಂದಾಯದ ಹಣವನ್ನು ಹಾಗೂ ಕೆಲವು ಶ್ರೀಮಂತರಿಂದ ಧನಸಹಾಯವನ್ನು ಪಡೆದರು.

ರಾಯಣ್ಣ ಹೀಗೆ ಸೈನ್ಯವನ್ನು ಸಂಘಟಿಸಿ ಹೋರಾಟಕ್ಕೆ ಸಿದ್ಧತೆಯನ್ನು ಮಾಡಿಕೊಂಡು ಬ್ರಿಟಿಷರ ವಿರುದ್ಧ ಗೆರಿಲ್ಲಾ ಯುದ್ಧದ ಮೂಲಕ ಹೋರಾಟವನ್ನು ಮಾಡುತ್ತಾನೆ. ರಾಯಣ್ಣ ಮತ್ತು

ತಂಡದವರು ದಟ್ಟವಾದ ಅರಣ್ಯ ಪ್ರದೇಶದಲ್ಲಿ ನೆಲೆಸಿರುತ್ತಾರೆ. ದೇಶನೂರು ಗುಡ್ಡ, ಕೌಲಗುಡ್ಡ, ಬಳಗುಂದ, ಬಡಗನಾಥ ಬೆಟ್ಟ ಮುಂತಾದವುಗಳಲ್ಲಿ ಅಡಗುತಾಣಗಳನ್ನು ಮಾಡಿಕೊಂಡು, ಆಗಾಗ ಸ್ಥಳವನ್ನು ಬದಲಿಸುತ್ತಿದ್ದರು. ಬೀಡಿ ತಾಲೂಕಿನಲ್ಲಿ ಸಾಕಷ್ಟು ಹಣ ಸಂಗ್ರಹವಾಗಿದೆ ಎಂದು ಗುಪ್ತಚಾರರಿಂದ ಮಾಹಿತಿಯನ್ನು ಪಡೆದ ರಾಯಣ್ಣ, ದಿನಾಂಕ ೦೫.೦೧.೧೮೩೧ ರಂದು ಬೀಡಿ ಕಚೇರಿಯ ಮೇಲೆ ದಾಳಿಯನ್ನು ಮಾಡುತ್ತಾನೆ. ಕಚೇರಿಯ ಕಾವಲಿದ್ದವರು ಓಡಿಹೋದರು. ಕಚೇರಿಯಲ್ಲಿದ್ದ ಹಣವನ್ನು ತೆಗೆದುಕೊಂಡು, ಕಚೇರಿಯಲ್ಲಿ ಇದ್ದಂತಹ ಕಾಗದ ಪತ್ರಗಳನ್ನೆಲ್ಲಾ ಸುಟ್ಟುಹಾಕಿದರು. ದಾಳಿಮಾಡುವ ಹಿಂದಿನ ದಿನ ಕಚೇರಿಯಲ್ಲಿದ್ದ ೨೮ ಸಾವಿರ ರೂಪಾಯಿಗಳನ್ನು ಮುಂಬೈ ಸರ್ಕಾರಕ್ಕೆ ಕಳುಹಿಸಲಾಗಿತ್ತು. ರಾಯಣ್ಣನು ಹೋರಾಟವನ್ನು ಆರಂಭಿಸಿದ ದಿನಾಂಕದ ಕುರಿತು ನಿಖರವಾಗಿ ಹೇಳಲು ಬ್ರಿಟಿಷರು ನಡೆಸಿದಂತಹ ಪತ್ರ ವ್ಯವಹಾರಗಳ ಮೂಲಕ ಗುರುತಿಸಬಹುದು.

"ರಾಯಣ್ಣನು ದಿನಾಂಕ ೦೫.೦೧.೦೮೩೧ ರಂದು ರಾತ್ರಿ ಮೂರು ಗಂಟೆಯ ಸುಮಾರಿಗೆ ಬೀಡಿ ತಾಲೂಕು ಕಚೇರಿಯ ಮೇಲೆ ದಾಳಿ ಮಾಡಿ, ಗೇಟು ಮುರಿದು ಒಳಹೊಕ್ಕು ಅಲ್ಲಿದ್ದ ತಿಜೋರಿ ವಶಪಡಿಸಿಕೊಂಡನು. ಅದರಲ್ಲಿ ಕೇವಲ ೧೯೦೯ ರೂಪಾಯಿ ಮಾತ್ರ ದೊರಕಿದವು. ಆ ಕಚೇರಿಯಲ್ಲಿಂದ ೨೮೦೦೦ ರೂಪಾಯಿಗಳನ್ನು ನಿಯಮದಂತೆ ಇಂದಿನ ದಿನವೇ ಅಧಿಕಾರಿಗಳು ಮುಂಬೈಗೆ ಸಾಗಿಸಿದ್ದರು. ಹೀಗಾಗಿ ಸರಕಾರದ ಬಹಳಷ್ಟು ಹಣ ದಾಳಿಗಾರರ ಕೈಗೆ ಸಿಗದೆ ಬಚಾವಾಯಿತು. ರಾಯಣ್ಣಾದಿ ಹೋರಾಟಗಾರರಿಗೆ ತುಸು ನಿರಾಶೆಯಾಯಿತು. ಅಧಿಕಾರಿಗಳಿಗೆ ಮಾತ್ರ ಬಹಳಷ್ಟು ಖುಷಿಯಾಯಿತು. ಹೋರಾಟಗಾರರು ದಾಳಿಯನ್ನು ಮೂರ್ನಾಲ್ಕು ದಿವಸ ಮೊದಲೇ ಮಾಡಿದ್ದರೆ ಎಲ್ಲ ಹಣ ಅವರಿಗೆ ಸಿಗುತ್ತಿತ್ತು. ಹೋರಾಟಗಾರರು ಕಂಪನಿ ಸರ್ಕಾರಕ್ಕೆ ಬಿಸಿ ಮುಟ್ಟಿಸುವ ಕಾರ್ಯಕ್ಕೆ ಮುಂದಾದರು. ಅವರು ಕಚೇರಿಯಲ್ಲಿಯ ಎಲ್ಲ ಕಾಗದಪತ್ರಗಳನ್ನು ಸುಟ್ಟುಹಾಕಿ ಅನಂತರ ಇಡೀ ಕಚೇರಿಯನ್ನು ಅಗ್ನಿಗಾಹುತಿ ಮಾಡಿದರು. ಸರ್ಕಾರದ ಹಲವು ಹಸ್ತಕರನ್ನು, ಕಾವಲುಗಾರರನ್ನು ಹಣಿದರು. ಸರ್ಕಾರದ ಹಸ್ತಕರಾದರೆ ಸಿಗುವ ಫಲವೇನೆಂಬುದನ್ನು ತಿಳಿಸಿಕೊಟ್ಟರು. ಬ್ರಿಟಿಷ್ ಕಂಪನಿ ಸರ್ಕಾರಕ್ಕೆ ಬಿಸಿ ಮುಟ್ಟಿಸುವ ಕಾರ್ಯದಲ್ಲಿ ಮಾತ್ರ ಈ ಬಗೆಯಲ್ಲಿ ಅವರು ಯಶಸ್ವಿಯಾದರು. ಹಾಗಾಗಿ ಹೋರಾಟಗಾರರಿಗೆ ಅಲ್ಪ ಮಟ್ಟಿನ ಸಮಾಧಾನ ಆಯಿತು,"[೭] ರಾಯಣ್ಣನ ಮೊದಲ ದಾಳಿಯು ಯಶಸ್ವಿಯಾಯಿತು. ಆದರೆ ನಿರೀಕ್ಷಿತ ಹಣ ದೊರೆಯಲಿಲ್ಲ. ಇಲ್ಲಿಂದ ರಾಯಣ್ಣ ಬ್ರಿಟಿಷರ ಒಂದೊಂದೆ ಕಚೇರಿಗಳ ಮೇಲೆ ದಾಳಿಯನ್ನು ಮಾಡುತ್ತಾನೆ.

ಬೀಡಿ ಕಚೇರಿಯನ್ನು ಸುಟ್ಟು ನಂತರ ರಾಯಣ್ಣ ಹಾಗೂ ರಾಯಣ್ಣನ ತಂಡದವರು ನಂದಗಡಕ್ಕೆ ಹೋದರು. ನಂದಗಡದಲ್ಲಿ ಜನರಿಂದ ಸಹಕಾರ ದೊರೆಯಿತು. ಜೊತೆಗೆ ಸಹಾಯವನ್ನು

ಮಾಡಿದರೆಂದು ಹೇಳಲಾಗುತ್ತದೆ. ನಂದಗಡದಲ್ಲಿ ಇರುವ ಕಿಲ್ಲೆದಾರನನ್ನು ಬೆದರಿಸಿ ಕಂದಾಯ ಹಣವನ್ನು ನಮಗೆ ಕೊಡಬೇಕೆಂದು ಹೇಳಿದರು.

ರಾಯಣ್ಣ ಬೀಡಿ, ಖಾನಾಪುರ, ನಂದಗಡ, ಜಕ್ಕನಾಯಕನ ಕೊಪ್ಪ, ಸಂಪಗಾವಿ, ಸಂಗೊಳ್ಳಿ ಹೀಗೆ ಅನೇಕ ಪ್ರದೇಶಗಳ ಮೇಲೆ ದಾಳಿಯನ್ನು ಮಾಡುತ್ತಾನೆ. ಈ ದಾಳಿಗಳಲ್ಲಿ ಸಂಪಗಾವಿಯ ಮೇಲೆ ಮಾಡಿದಂತಹ ದಾಳಿ ಪ್ರಮುಖವಾದದ್ದಾಗಿದೆ. ತಾನು ಮಾಡದ ತಪ್ಪಿಗೆ ಮೂರು ದಿನಗಳ ಕಾಲ ಸೆರೆಮನೆವಾಸವನ್ನು ಅನುಭವಿಸಿರುತ್ತಾನೆ. ಸೆರೆಮನೆಯಿಂದ ಬಿಡುಗಡೆಗೊಂಡ ನಂತರ ಮಾಡಿದಂತಹ ಅಂದಿನ ಪ್ರತಿಜ್ಞೆಯನ್ನು ಪೂರೈಸಲು ರಾಯಣ್ಣನು ಉತ್ಸುಕನಾಗಿರುತ್ತಾನೆ. ಸಂಪಗಾವಿಯ ಅಮಲ್ದಾರ ಕಚೇರಿಯಲ್ಲಿದಂತಹ ಹಣವನ್ನು ಮಸೀದಿಯ ಮೇಲಿರಿಸಿದ. ಕಚೇರಿಯ ಕಾವಲಿಗೆ ದೇವಲಾಪುರದ ಕೆಲವರನ್ನು ನೇಮಿಸಿರುತ್ತಾನೆ. ಸಂಪಗಾವಿಗೆ ರಾಯಣ್ಣನ ತಂಡ ಬಂದೊಡನೆ ಕಚೇರಿಯ ಕಾವಲಿದ್ದವರು ರಾಯಣ್ಣನ ತಂಡದೊಂದಿಗೆ ಸೇರಿಕೊಂಡರು. ಕಚೇರಿಯಲ್ಲಿದಂತಹ ಕಾಗದ ಪತ್ರಗಳನ್ನೆಲ್ಲ ಸುಟ್ಟುಹಾಕಿದರು. ರಾಯಣ್ಣ ಅಂದು ಮಾಡಿದ ಪ್ರತಿಜ್ಞೆಯಂತೆ ಸಂಪಗಾವಿ ಕಚೇರಿಯನ್ನು ಬೆಂಕಿ ಹಚ್ಚಿ ಸುಟ್ಟನು. "ಈ ನಾಡಿನ ಪ್ರಜೆಗಳು ಯಾವ ರೀತಿಯ ಸಹಕಾರವನ್ನು ಕೊಡುತ್ತಿಲ್ಲ. ಯಾವ ಮಾಹಿತಿಯನ್ನು ತಿಳಿಸುತ್ತಿಲ್ಲ. ಯಾವ ಗುಟ್ಟನ್ನು ಬಿಟ್ಟುಕೊಡುತ್ತಿಲ್ಲ. ರಸ್ತೆಯ ಮೇಲೆ ಮೇಲೆ ದಂಗೆಕೋರರು ಹಾದು ಹೋಗುವದನ್ನು ಕಣ್ಣಾರೆ ಕಂಡರೂ ಅದನ್ನೂ ಬೇರೆ ರೀತಿಯಲ್ಲಿ ಕಥೆಕಟ್ಟಿ ಹೇಳಿ ನಮ್ಮ ಹಾದಿತಪ್ಪಿಸುತ್ತಾರೆ. ಇಲ್ಲಿ ಎಲ್ಲೆಲ್ಲಿಯೂ ಲೂಟಿಗಾರರೆ ತುಂಬಿಕೊಂಡಿದ್ದಾರೆ. ನಮ್ಮ ಮೇಲೆ ನಾವೇ ಅನುಮಾನ ಪಡುವಂತಾಗಿದೆ. ನಮ್ಮ ಎಲ್ಲಾ ಚಲನವಲನಗಳು ನಾವು ಜಾರಿಗೆ ತರುವ ಮುಂಚೆಯೇ ಅವರಿಗೆ ತಿಳಿದು ಬಿಡುತ್ತಿವೆ. ಎಷ್ಟೇ ಪ್ರಯತ್ನಿಸಿದರೂ ನಮ್ಮಿಂದ ಅದನ್ನು ಭೇದಿಸಲಾಗುತ್ತಿಲ್ಲ.

ಇನ್ನೂ ಮುಂದುವರೆದು ಹೇಳುವುದಾದರೆ ನಾವುಗಳು ರಾಯಣ್ಣನನ್ನು ಹಿಡಿಯುವುದರಲ್ಲಿ, ಇಷ್ಟೆಲ್ಲ ಸವಲತ್ತುಗಳಿದ್ದರೂ ನಮ್ಮನ್ನು ನಾವೇ ರಕ್ಷಿಸಿಕೊಳ್ಳಬೇಕಾದಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಕಡೆಯಲ್ಲಿ ಎಲ್ಲರಲ್ಲೂ ಅಷ್ಟೊಂದು ಜೀವಭಯ ಕಾಡುತ್ತಿದೆ. ನಮ್ಮ ಅಧಿಕಾರಿಗಳಿಗೆ ಕಣ್ಣು ಮುಚ್ಚಿದರೆ ಸಾಕು ರಾಯಣ್ಣನ ಕತ್ತಿಯೇ ಕಣ್ಮುಂದೆ ನಿಲ್ಲುತ್ತದೆ. ಗಾಳಿಗೆ ಸೆತ್ತೆ ಅಲುಗಾಡಿದರೂ ಸಾಕು ನಮ್ಮ ಸೈನಿಕರು ಬೀಳುತ್ತಾರೆ. ಅವರನ್ನೆಲ್ಲ ಹುರಿದುಂಬಿಸಿ ಸಾಕಾಗಿ ಹೋಗಿದೆ. ಎಲ್ಲರ ಮೇಲೂ ಅನುಮಾನ ಪಡುವ ಹಾಗಾಗಿದೆ. ನಮ್ಮ ಪಕ್ಕದಲ್ಲಿ ನಿಂತಿರುವವರು ನಮ್ಮವರೋ ಅಥವಾ ರಾಯಣ್ಣನ ಬಂಟರೋ, ನಮ್ಮ ಕೈಯಲ್ಲಿರುವುದು ನಮ್ಮ ಬಂದೂಕೋ ಅಥವಾ ರಾಯಣ್ಣನ ಕತ್ತಿಯೋ ಎಂಬಂಥ ವಾತಾವರಣ ನಿರ್ಮಾಣವಾಗಿ ಹೋಗಿದೆ."[೮] ರಾಯಣ್ಣನು ಈ ರೀತಿಯಲ್ಲಿ ಬ್ರಿಟಿಷರ ನಿದ್ದೆ ಕೆಡಿಸುತ್ತಾನೆ.

ಸಂಪಗಾವಿಯ ಕಚೇರಿಯ ಮೇಲೆ ರಾಯಣ್ಣ ದಾಳಿ ಮಾಡುತ್ತಿರುವ ವಿಷಯವನ್ನು ತಿಳಿದ ಅಮಲ್ದಾರ, ಹೆಚ್ಚಿನ ಸೈನ್ಯದೊಂದಿಗೆ ಸಂಪಗಾವಿಯ ಕಡೆಗೆ ಹೊರಟ ಈ ವಿಷಯ ರಾಯಣ್ಣನಿಗೆ

ತಿಳಿದು ಸಂಪಗಾವಿಯನ್ನು ತೊರೆದು, ನಂತರ ರಾಯಣ್ಣನಿಗೆ ಅಮಲ್ದಾರನ ಸೈನ್ಯ ಎದುರಾಯಿತು. ಮುಖಾಮುಖಿ ಹೋರಾಟ ಮಾಡುತ್ತಿರುವಾಗ ಅಮಲ್ದಾರನು ಬೆಳಗಾಂ ಹಾಗೂ ಧಾರವಾಡದಿಂದ ಸೈನ್ಯವನ್ನು ಕಳುಹಿಸಿದ್ದರು. ಎಲ್ಲಾ ದಿಕ್ಕುಗಳಿಂದಲೂ ಸೈನ್ಯತರಿಸಿ ರಾಯಣ್ಣನನ್ನು ಹಿಡಿಯಬೇಕೆಂದು ರೂಪಿಸಿಕೊಂಡರು. ಆದರೆ ಈ ವಿಚಾರ ರಾಯಣ್ಣನಿಗೆ ತಿಳಿದು ಸಂಗಡಿಗರೊಂದಿಗೆ ದೇಶನೂರು ಅರಣ್ಯದೊಳಗೆ ರಾಯಣ್ಣನ ಸಂಗಡಿಗರು ಮರೆಯಾದರು.

ದೇಶನೂರು ಅರಣ್ಯದೊಳಗೆ ಸೇರಿಕೊಂಡ ರಾಯಣ್ಣನ ತಂಡವು, ಕೆಲ ಸಮಯ ವಿಶ್ರಾಂತಿಯನ್ನು ಪಡೆದು ಮುಂದಿನ ಕಾರ್ಯಗಳಿಗೆ ಸಿದ್ಧತೆಯನ್ನು ಮಾಡತೊಡಗಿತು. ಸಂಗಡಿಗರನ್ನು ಎರಡು ತಂಡಗಳನ್ನಾಗಿ ಮಾಡಿಕೊಂಡು, ಒಂದು ತಂಡ ರಾಯಣ್ಣನ ನೇತೃತ್ವದಲ್ಲಿ ಸುಮಾರು ಒಂದು ಸಾವಿರದಷ್ಟು ಸಂಗಡಿಗರೊಂದಿಗೆ ಸಂಗೊಳ್ಳಿಯ ಮೇಲೆ ದಾಳಿ ಮಾಡಲು ಹೊರಟಿತು. ಈ ವಿಷಯ ತಿಳಿದ ಕುಲಕರ್ಣಿಗೆ ತಿಳಿದು ಹೆದರಿ ಅಡಗಿಕೊಳ್ಳಲು ದಾರಿ ಹುಡುಕುತ್ತಿದ್ದ. ಸಂಗೊಳ್ಳಿಗೆ ರಾಯಣ್ಣ ಬರುತ್ತಿರುವ ಸುದ್ದಿಯನ್ನು ತಿಳಿದ ಸಂಗೊಳ್ಳಿಯ ಜನತೆ ರಾಯಣ್ಣನ ಸ್ವಾಗತಕ್ಕಾಗಿ ಕಾಯುತ್ತಿದ್ದರು. ಸಂಗೊಳ್ಳಿಯ ಸರಕಾರಿ ಚಾವಡಿ ಹಾಗೂ ಚಾವಡಿಯಲ್ಲಿದ್ದ ಕಾಗದ ಪತ್ರಗಳನೆಲ್ಲಾ ಸುಟ್ಟು ಹಾಕಿದರು. ಹಾಗೂ ಬ್ರಿಟಿಷರಿಗೆ ಸಹಾಯ ಮಾಡುತ್ತಿದ್ದಂತಹ ಕೆಲವರನ್ನು ಬೆದರಿಸಿ ಬ್ರಿಟಿಷರ ಅಥವಾ ಸರ್ಕಾರದ ಕೆಲಸಗಳನ್ನು ಹಾಗೂ ಅವರಿಗೆ ಯಾವುದೇ ರೀತಿಯ ಸಹಾಯ ಮಾಡಬಾರದೆಂದು ಎಚ್ಚರಿಕೆಯನ್ನು ಕೊಟ್ಟು ಸಂಗೊಳ್ಳಿಯನ್ನು ತೊರೆದನು.

ರಾಯಣ್ಣನ ದಾಳಿಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಇದ್ದಿದ್ದರಿಂದ ಬ್ರಿಟಿಷರು ರಾಯಣ್ಣನು ಯಾವ ಸಮಯದಲ್ಲಾದರೂ ದಾಳಿ ಮಾಡಬಹುದೆಂದು ಸದಾ ಭಯದ ಸ್ಥಿತಿಯಲ್ಲಿದ್ದರು. ರಾಯಣ್ಣನ ಯುದ್ಧನೀತಿ ಅಥವಾ ಯುದ್ಧತಂತ್ರ ರಾತ್ರಿಯ ವೇಳೆಯಲ್ಲಿ ಇದ್ದಕ್ಕಿದ್ದಂತೆ ದಾಳಿ ಮಾಡುವುದಾಗಿತ್ತು. ರಾಯಣ್ಣನನ್ನು ಹಿಡಿಯಲಾಗದ ಬ್ರಿಟಿಷರಿಗೆ ರಾಯಣ್ಣ ಸಿಂಹಸ್ವಪ್ನನಾಗಿದ್ದನು. ಸಂಪಗಾವಿಯ ಅಮಲ್ದಾರ, ರಾಯಣ್ಣನನ್ನು ಹಿಡಿಯಲೇಬೇಕೆಂದು ಹಗಲಿರುಳು ಹುಡುಕುತ್ತಿದ್ದ. ಆದರೆ ಅಮಲ್ದಾರನ ಯೋಜನೆಗಳಿಗೆ ವಿರುದ್ಧವಾಗಿ ದಾಳಿಗಳನ್ನು ಮಾಡುತ್ತಿದ್ದ. ಸಂಗೊಳ್ಳಿಯಿಂದ ರಾಯಣ್ಣ ಕುರುವಿನಕೊಪ್ಪ-ಮಾಸ್ತಿಕೊಪ್ಪಗಳ ಕಡೆ ಹೋಗಿರುವ ಮಾಹಿತಿಯನ್ನು ಪಡೆದ ಅಮಲ್ದಾರನು ಸೈನ್ಯವನ್ನು ಕಳುಹಿಸಿದ. ಆದರೆ ರಾಯಣ್ಣ ದಾರಿಯನ್ನು ಬದಲಿಸಿ ಕಿತ್ತೂರಿನ ಕಡೆ ಹೊರಟು ಹೋಗಿದ್ದನು.

ಬ್ರಿಟಿಷರು ರಾಯಣ್ಣನ ದಾಳಿಗಳಿಂದ ಕಂಗೆಟ್ಟು ಹಿಡಿಯಲಾಗದೆ ಹೋದಾಗ ಹಾಗೂ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದ್ದ ರಾಯಣ್ಣನ ಹೋರಾಟದ ಹಿಂದೆ ಕಿತ್ತೂರು ಸಂಸ್ಥಾನದವರ ಪರೋಕ್ಷ ಬೆಂಬಲಗಳಿವೆ ಎಂದು ಊಹಿಸಿ, ಕಿತ್ತೂರು ಸಂಸ್ಥಾನದ ಕೊನೆಯ ರಾಣಿಯಾದ ವೀರಮ್ಮನನ್ನು ಬೈಲುಹೊಂಗಲದಿಂದ ಕುಸುಗಲ್ಲಿಗೆ ಸ್ಥಳಾಂತರಿಸಲಾಯಿತು. ವೀರಮ್ಮನನ್ನು ಸ್ಥಳಾಂತರಿಸುವ ವಿಷಯ

ಕಿತ್ತೂರಿನ ಜನತೆಗೆ ದುಃಖದ ಜೊತೆಗೆ ಬ್ರಿಟಿಷರ ವಿರುದ್ಧ ಮತ್ತಷ್ಟು ದ್ವೇಷ ಭಾವನೆ ಬೆಳೆಯಿತು. ಆದರೆ ಕಿತ್ತೂರಿನ ಜನತೆ ನಿಸ್ಸಾಯಕರಾಗಿದ್ದರು. ಈ ವಿಷಯ ರಾಯಣ್ಣನಿಗೆ ತಿಳಿದು ರಾಣಿಯ ಸ್ಥಳಾಂತರವನ್ನು ತಪ್ಪಿಸಲು ತನ್ನ ಸಹಚರರೊಂದಿಗೆ ಬಂದಿದ್ದ. ರಾಯಣ್ಣ ಬರಬಹುದೆಂದು ಬ್ರಿಟಿಷರು ಹೆಚ್ಚಿನ ಸೈನ್ಯದೊಂದಿಗೆ ವೀರಮ್ಮನನ್ನು ಸ್ಥಳಾಂತರಿಸಿದರು.

ದಿನದಿಂದ ದಿನಕ್ಕೆ ರಾಯಣ್ಣನ ದಾಳಿಗಳು ಹೆಚ್ಚಾಗಿ ಬ್ರಿಟಿಷರು ರಾಯಣ್ಣನನ್ನು ಹಿಡಿಯಲೇಬೇಕೆಂದು ರಾಯಣ್ಣನು ರಾತ್ರಿ ವೇಳೆಯಲ್ಲಿ ಅಡಗಿಕೊಳ್ಳುವ ತಾಣಗಳಿಗೆ ಹುಡುಕಿಕೊಂಡು ಹೊರಟರು. ಈ ವಿಷಯ ರಾಯಣ್ಣನಿಗೆ ತಿಳಿದು ತಂತ್ರಕ್ಕೆ ಪ್ರತಿತಂತ್ರವೆಂಬಂತೆ ರಾಯಣ್ಣನು ಬ್ರಿಟಿಷರಿಗೆ ದೂರದಲ್ಲಿ ನಾನಿರುವ ತಾಣವನ್ನು ತೋರಿಸುವಂತೆ ಹಾಗೂ ಬ್ರಿಟಿಷರಿಗೆ ದಾರಿ ತಪ್ಪಿಸಲು ಅಡುಗೆ ಮಾಡುವ ಹಾಗೆ ಬೆಂಕಿಯನ್ನು ಹಚ್ಚಿ ಅಲ್ಲಿಂದ ದೂರ ಸರಿದರು. ಇದನ್ನು ಕಂಡ ಬ್ರಿಟಿಷ್ ಸೇನೆಯು ರಾಯಣ್ಣನ ತಂಡ ಇಲ್ಲಿಯೇ ಇದೆ ಎಂದು ಗುಂಡಿನ ಸುರಿಮಳೆ ಸುರಿಸಿದರು. "ರಾಯಣ್ಣ ತನ್ನ ಯುದ್ಧ ತಂತ್ರಕ್ಕೆ ಕಾಡಿನಲ್ಲಿ ಎತ್ತರವಾದ ಮರಗಳನ್ನು ಬಳಸಿಕೊಳ್ಳುತ್ತಿದ್ದ. ಅವುಗಳಿಗೆ ದೊಡ್ಡ ದೊಡ್ಡ ಬೊಂಬೆಗಳನ್ನು ಕಟ್ಟಿಸುತ್ತಿದ್ದ. ಅವುಗಳು ದೂರಕ್ಕೆ ನಿಜವಾದ ಮನುಷ್ಯರಂತೆಯೇ ಕಾಣುತ್ತಿದ್ದವು. ಅದನ್ನು ಕಂಡ ಇಂಗ್ಲೀಷ್ ಸೈನ್ಯ ಹಾದಿ ತಪ್ಪುತ್ತಿತ್ತು. ತಾವು ಹಾಕಿಕೊಂಡಿದ್ದ ಯೋಜನೆಯನ್ನೆ ಮರೆತು ಮರಗಳ ಬಳಿಗೆ ಹೋಗಿ ದಢ ದಢನೆ ಗುಂಡು ಹಾರಿಸುತ್ತಿತ್ತು. ಗುಂಡೆಲ್ಲಾ ಮುಗಿಯುವ ಹೊತ್ತಿಗೆ ತಾವು ಮೋಸ ಹೋಗಿರುವ ಸತ್ಯ ತಿಳಿಯುತ್ತಿತ್ತು. ಅಷ್ಟು ಹೊತ್ತಿಗೆ ರಾಯಣ್ಣನ ಸೈನ್ಯ ಬೇರೆ ದಿಕ್ಕಿನಿಂದ ಬರುತ್ತಿತ್ತು. ನಿರಾಯುಧರಾಗಿದ್ದ ಆಂಗ್ಲ ಸೈನಿಕರನ್ನು ಕೊಲ್ಲುತ್ತಿತ್ತು.

ಭ್ರಮೆಯಿಂದ ಬ್ರಿಟಿಷರು ರಾಯಣ್ಣನ ದಂಡು ಇದೆಯೆಂದು ಭಾವಿಸಿ ಮದ್ದು-ಗುಂಡುಗಳು ಕಾಲಿಯಾಗುವವರೆಗೆ ಹೊಡೆಯುತ್ತಾರೆ. ಗುಂಡುಗಳ ಶಬ್ದನಿಂತ ನಂತರ ರಾಯಣ್ಣ ಹಾಗೂ ಸಹಚರರು ಬ್ರಿಟಿಷ್ ಸೈನ್ಯದ ಸುತ್ತ ಸುತ್ತುವರೆದರು. ರಾಯಣ್ಣ ಹಾಗೂ ಆತನ ಸಹಚರರು ಅನಿರೀಕ್ಷಿತವಾಗಿ ಬಂದಿದ್ದರಿಂದ ವಿಚಲಿತರಾದ ಸೇನೆಯು ನಿರಾಯುಧನಾಗಿ ನಿಂತಿತ್ತು. ಇದೆ ಸರಿಯಾದ ಸಮಯವೆಂದು ರಾಯಣ್ಣನ ತಂಡವು ಮನಬಂದಂತೆ ಬ್ರಿಟಿಷ್ ಸೇನೆಯನ್ನು ತುಂಡರಿಸತೊಡಗಿತು.

ರಾತ್ರಿಯ ವೇಳೆಯಲ್ಲಿ ಮರಗಳಿಗೆ ಉರಿಯುತ್ತಿರುವ ಪಂಜುಗಳನ್ನು ಕಟ್ಟಿಸಿ ಹೊರಟು ಹೋಗುತ್ತದ್ದ. ರಾಯಣ್ಣನ ಬಂಟರು ಅಲ್ಲೇ ಇರುವುದಾಗಿ ಭ್ರಮಿಸಿ ಆಂಗ್ಲ ಸೈನಿಕರು ದಂಡೆತ್ತಿ ಹೋಗುತ್ತಿದ್ದರು. ಅದೇ ಸಮಯಕ್ಕೆ ರಾಯಣ್ಣ ಇನ್ನೆಲ್ಲೋ ದಾಳಿ ಮಾಡುತ್ತಿದ್ದ. ಲೂಟಿ ಮಾಡಿ ತನ್ನ ಶಕ್ತಿ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುತ್ತಿದ್ದ."[7] ಇದು ರಾಯಣ್ಣನ ಯುದ್ಧ ನೀತಿಯ ತಂತ್ರವಾಗಿತ್ತು. ಇದರಿಂದ ಬ್ರಿಟಿಷರು ರಾಯಣ್ಣನನ್ನು ನೇರವಾಗಿ ಹಿಡಿಯಲು ಸಾಧ್ಯವಿಲ್ಲವೆಂದು ಅರಿತು ಭಾರತದದ್ಯಾಂತ ನಡೆಸಿದ ಕುತಂತ್ರದ ನೀತಿಯನ್ನು ಅನುಸರಿಸಿಲು ಮುಂದಾಗುತ್ತಾರೆ.

ಸಂಪಗಾವಿಯ ಅಮಲ್ದಾರ ಮೇಲಿನ ಅಧಿಕಾರಿಗಳ ಒತ್ತಡದಿಂದ ರಾಯಣ್ಣನನ್ನು ಹೇಗಾದರೂ ಮಾಡಿ ಹಿಡಿದುಕೊಡಲೇಬೇಕೆಂದು ಯೋಚಿಸುತ್ತಿರುವ ಸಂದರ್ಭದಲ್ಲಿ ಕಿತ್ತೂರಿಗೆ ದತ್ತು ಪುತ್ರನನ್ನು ತೆಗೆದುಕೊಳ್ಳುವಾಗ ಖೊದನಪುರದ ಲಿಂಗನಗೌಡನಿಗೆ ತನ್ನ ಮಗನನ್ನು ದತ್ತು ಕೊಡಬೇಕೆಂಬ ಬಯಕೆಯಿತ್ತು. ಆದರೆ ರಾಣಿ ಚೆನ್ನಮ್ಮಳು ಇದಕ್ಕೆ ವ್ಯತಿರಿಕ್ತವಾಗಿ ಮಾಸ್ತ ಮರಡಿಯ ಶಿವಲಿಂಗನನ್ನು ದತ್ತು ಪುತ್ರನನ್ನಾಗಿ ತೆಗೆದುಕೊಂಡಿದ್ದರಿಂದ ವೀರನಗೌಡನಿಗೆ ಕಿತ್ತೂರು ಸಂಸ್ಥಾನದ ಮೇಲೆ ಅಸಮಾಧಾನವಿತ್ತು. ಇದನ್ನು ಗಮನಿಸದ ಕೃಷ್ಣರಾವನು ಲಿಂಗನಗೌಡನನ್ನು ಕರೆಯಿಸಿ ನೀನು ರಾಯಣ್ಣನ ಹೋರಾಟಕ್ಕೆ ಬೆಂಬಲ ಕೊಡುತ್ತಿಯಾ ಎಂದು ಹೇಳಿ ಹೇದರಿಸಿದನು. ನಂತರ ಲಿಂಗನಗೌಡನಿಗೆ ರಾಯಣ್ಣನನ್ನು ಹಿಡಿದುಕೊಡಬೇಕು. ಹಿಡಿದುಕೊಟ್ಟರೆ ಬಹುಮಾನ ಕೊಡುವುದಾಗಿ ಆಸೆ–ಆಕಾಂಕ್ಷೆಗಳನ್ನು ತೋರಿಸಿದ. ಇದಕ್ಕೆ ಒಪ್ಪದಿದ್ದಾಗ ಬೇದರಿಕೆಯನ್ನು ಹಾಕಿ ಒಪ್ಪಿಸಿದ. ಲಿಂಗನಗೌಡನು ಭಯಪಡುತ್ತಿದ್ದ ಕಾರಣದಿಂದ ನೇಗಿನಹಾಳದ ವೆಂಕನಗೌಡನನ್ನು ಜೊತೆಗೆ ಒಪ್ಪಿಸಿ, ರಾಯಣ್ಣನ ಹೋರಾಟಕ್ಕೆ ಸಹಾಯ ಹಾಗೂ ಪ್ರೋತ್ಸಾಹದ ಜೊತೆಗೆ ನಾವು ನಿಮ್ಮೊಂದಿಗೆ ಹೋರಾಟಕ್ಕೆ ಬರುತ್ತೇವೆಂದು ಹೇಳಿ, ರಾಯಣ್ಣನ ತಂಡದೊಂದಿಗೆ ಸೇರಿಕೊಂಡು ಹಿಡಿದುಕೊಡುವ ಪೂರ್ವ ಯೋಜನೆಯನ್ನು ಹಾಕಿಕೊಂಡು ಇವರಿಬ್ಬರ ಜೊತೆ ಸೈನ್ಯವನ್ನು ಕಳುಹಿಸಿತು. ರಾಯಣ್ಣ ಇವರಿಬ್ಬರ ಮೇಲೆ ನಂಬಿಕೆಯಿಟ್ಟು ತನ್ನ ತಂಡದೊಂದಿಗೆ ಸೇರಿಸಿಕೊಂಡನು ರಾಯಣ್ಣನ ಮಾಡುತ್ತಿದ್ದ ಕೆಲವು ದಾಳಿಗಳಲ್ಲಿ ಇವರು ರಾಯಣ್ಣನನ್ನು ನಂಬಿಸಲು ದಾಳಿಗಳಲ್ಲಿ ಭಾಗವಹಿಸುವ ಹಾಗೆ ಕಪಟ ನಾಟಕವಾಡಿದರು.

ರಾಯಣ್ಣನ ಹಿಡಿದ ಸುದ್ದಿ ಕಿತ್ತೂರಿನಾದ್ಯಂತ ತಿಳಿದು ಕಿತ್ತೂರಿನ ಜನತೆ ದುಃಖಿತರಾದರು. ರಾಯಣ್ಣನನ್ನು ಧಾರವಾಡದ ಸೆರೆಮನೆಗೆ ಹಾಕಿ ವಿಚಾರಣೆಯನ್ನು ಮಾಡತೊಡಗಿದರು. ರಾಜದ್ರೋಹ, ಬಂಡುಕೋರ, ಸುಲಿಗೆ ಮಾಡಿದವನ ಹೀಗೆ ಅನೇಕ ಆರೋಪಗಳನ್ನು ರಾಯಣ್ಣನ ಮೇಲೆ ಹೇರಿ ವಿಚಾರಣೆ ಎಂಬ ಕಪಟ ನಾಟಕವಾಡಿ ಗಲ್ಲು ಶಿಕ್ಷೆಯನ್ನು ವಿಧಿಸಿದರು. ರಾಯಣ್ಣನ ಜೊತೆಗೆ ೧೨ ಜನರನ್ನು ಬಂಧಿಸಿ ಉಳಿದವರನ್ನು ಬಿಡುಗಡೆಗೊಳಿಸಿದರು. ರಾಯಣ್ಣ ಹಾಗೂ ಆರು ಜನರಿಗೆ ಗಲ್ಲು ಶಿಕ್ಷೆಯನ್ನು ಹಾಗೂ ಇನ್ನೂಳಿದ ಆರು ಜನರಿಗೆ ಕರಿನೀರಿನ ಶಿಕ್ಷೆಯನ್ನು ವಿಧಿಸಿದರು. ರಾಯಣ್ಣನ ದಾಳಿಗಳು ಹೆಚ್ಚಾಗಿ ನಂದಗಡದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡು ಬಂದಿದ್ದರಿಂದ ಮತ್ತೆ ಯಾರು ಹೋರಾಟ ಮಾಡಬಾರದೆಂಬ ಕಾರಣಕ್ಕೆ ರಾಯಣ್ಣನ್ನು ನಂದಗಡದಲ್ಲಿ ದಿನಾಂಕ ೨೬.೧.೧೮೩೧ ರಂದು ಗಲ್ಲಿಗೇರಿಸಲಾಯಿತು. ಸನ್ಯಾಸಿವೇಶದಲ್ಲಿ ತಲೆಮರೆಸಿಕೊಂಡಿದ್ದ ರಾಯಣ್ಣನ ಆಪ್ತ ಸ್ನೇಹಿತ ಚೆನ್ನಬಸವ ರಾಯಣ್ಣನ ಸಮಾಧಿಯ ಮೇಲೆ ಒಂದು ಆಲದ ಮರವನ್ನು ನೆಟ್ಟನು. ದಿನಗಳೆದಂತೆ ಜನರು ರಾಯಣ್ಣನನ್ನು ಪೂಜಿಸತೊಡಗಿದರು. ಮಕ್ಕಳಾಗದವರು ಹರಕೆಯನ್ನು ಹೊತ್ತು, ನಮಗೆ ರಾಯಣ್ಣನಂತಹ ಮಗುವಾಗಲೆಂದು ತೊಟ್ಟಿಲುಗಳನ್ನು ಕಟ್ಟಿ ಪೂಜಿಸತೊಡಗಿದರು. ಹೀಗೆ ಒಬ್ಬ ಸಾಮಾನ್ಯನಾದ ರಾಯಣ್ಣನು ಹೋರಾಡಿ ಕಿತ್ತೂರಿನ ಮನೆ

ಮನೆಯವರಿಗೆ ಚಿರಪರಿಚಿತನಾಗಿ ನಂತರ ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ಉತ್ತರ ಕರ್ನಾಟಕದ ಜನತೆಗೆ ಸ್ಫೂರ್ತಿಯಾಗಿ ರಾಯಣ್ಣನು ಅಮರನಾಗಿದ್ದಾನೆ. ಜನತೆಯು ರಾಯಣ್ಣನನ್ನು ದೈವತ್ವಕ್ಕೇರಿಸಿದ್ದಾರೆ, ಪೂಜೆಗೊಳ್ಳುತ್ತಿದ್ದಾನೆ ಹಾಗೂ ಜಾತ್ರೆ, ಉತ್ಸವವನ್ನು ಪ್ರತಿವರ್ಷ ಮಾಡಿಕೊಂಡು ಬರುತ್ತಿರುವುದನ್ನು ಕಾಣಬಹುದು.

**ವ್ಯತ್ಯಾಸಗಳು**

ರಾಯಣ್ಣನ ಕುರಿತು ಬಂದಿರುವಂತಹ ಜೀವನ ಚರಿತ್ರೆಗಳನ್ನು ಗಮನಿಸಿದಾಗ ಕೆಲವೊಂದು ವಿಷಯಗಳಲ್ಲಿ ವ್ಯತ್ಯಾಸಗಳಿರುವುದನ್ನು ನಾವು ಗುರುತಿಸಬಹುದು. ಆ ವ್ಯತ್ಯಾಸಗಳು ವಿವಾಹದ ಕುರಿತು, ಮಗನ ಕುರಿತು, ಅಣ್ಣನ ಕುರಿತು, ಗಜವೀರನ ಕುರಿತು, ದೇಶನೂರು ಕೋಟೆಯ ಕುರಿತು, ತಳವಾರಿಕೆಯ ಕುರಿತು, ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಕೆಲವೊಂದು ವ್ಯತ್ಯಾಸಗಳಿರುವುದನ್ನು ಈ ಕೆಳಗಿನಂತೆ ಗುರುತಿಸಬಹುದು.

ಸಂಗೊಳ್ಳಿ ರಾಯಣ್ಣನ ಚರಿತ್ರೆಯನ್ನು ಕೆಲವರು ತಿರುಚಿದ್ದಾರೆಂದು ಹೇಳಬೇಕು. ರಾಯಣ್ಣ ಚಿಕ್ಕವನಿರುವಾಗಲೆ ತಂದೆ-ತಾಯಿ ಮರಣಹೊಂದ್ದಿದ್ದರೆಂದು, "ಸಂಗೊಳ್ಳಿ ರಾಯಣ್ಣನನ್ನು ರಾಯನಾಯಕನೆಂಬ ಹೆಸರಿನಿಂದಲೂ ಕರೆಯುತ್ತಿದ್ದರು. ಇವನು ಮೂಲತ: ಸಂಗೊಳ್ಳಿ ಗ್ರಾಮದವನು. ಇವನ ವೃತ್ತಿ ತಳವಾರಿಕೆ. ಅಂದರೆ ತಂದೆಯಿಂದ ಇದು ವಂಶಪಾರಂಪರ್ಯವಾಗಿ ಬಂದಿತ್ತು. ಇವನು ಒಬ್ಬ ಸಾಮಾನ್ಯ ಪ್ರಜೆಯಾಗಿದ್ದನು. ಆದರೂ ಇವನ ಹೃದಯದಲ್ಲಿ ಯಾವಾಗಲೂ ಸ್ವಾತಂತ್ರ್ಯದ ಕಿಡಿ ಸದಾ ಹೊತ್ತಿರುತ್ತಿತ್ತು. ಇವನ ತಂದೆ ತಾಯಿಗಳು ಬಾಲ್ಯದಲ್ಲಿಯೇ ಸತ್ತು ಹೋದರು. ಹೀಗಾಗಿ ಬಾಲ್ಯದಲ್ಲಿ ಉಂಡಾಡಿಯಾಗಿ ಹಳ್ಳಿಯಲ್ಲಿ ಓಡಾಡುತ್ತಿದ್ದನು. ಆದಾಗ್ಯೂ ತಕ್ಕಮಟ್ಟಿಗೆ ವಿದ್ಯಾಭ್ಯಾಸ ಮಾಡಿದ್ದನು."[೧೦] ಐತಿಹಾಸಿಕ ವ್ಯಕ್ತಿಯ ಕುರಿತು ಈ ರೀತಿಯ ಹೇಳಿಕೆಗಳು.

ರಾಯಣ್ಣನ ಹೋರಾಟದಲ್ಲಿ ಗಜವೀರನ ಪಾತ್ರ ಬಹಳಷ್ಟಿದೆ. ಆದರೆ ಒಡೆಯರ್ ಡಿ ಹೆಗ್ಗಡೆ ಅವರ 'ಸ್ವಾತಂತ್ರ್ಯ ಸೇನಾನಿ ಸಂಗೊಳ್ಳಿ ರಾಯಣ್ಣ' ಎಂಬ ಕೃತಿಯಲ್ಲಿ ಗಜವೀರನ ಕುರಿತು "ರಾಯಣ್ಣನ ಸ್ವಾತಂತ್ರ್ಯ ಸೇನೆಯಲ್ಲಿ ಗಜವೀರನೆಂಬ ವ್ಯಕ್ತಿಯಿದ್ದು ಆತನು ಕೆಲವೊಮ್ಮೆ ಹಳ್ಳಿಗಳನ್ನು ಲೂಟಿಮಾಡಲು ಪ್ರಯತ್ನ ನಡೆಸಿದನು. ಆಗ ವೀರ ರಾಯಣ್ಣನು ಆತನನ್ನು ತನ್ನ ದಂಡಿನಿಂದಲೇ ಹೊರಗಟ್ಟಿದ"[೧೧] ಗಜವೀರನು ಹಳ್ಳಿಗಳನ್ನು ಲೂಟಿ ಮಾಡಿದವನಲ್ಲ. ಇಲ್ಲಿ ಲೇಖಕರು ಬಂಡಾರಿ ಬಾಪು ಮಾಡುತ್ತಿದ್ದಂತಹ ಕೆಲಸವನ್ನು ಗಜವೀರ ಮಾಡುತ್ತಿದ್ದಾನೆಂದು ಹೇಳಿದ್ದಾರೆ. ಇದೇ ಕೃತಿಯನ್ನು ರಾಯಣ್ಣನಿಗೆ ಮಧ್ಯದಲ್ಲಿ ತಳವಾರಿಕೆ ವೃತ್ತಿಯನ್ನು ದೊರೆಯುತ್ತದೆ ಎಂದು ಹೇಳಿದ್ದಾರೆ. ತಳವಾರ ವೃತ್ತಿಯು ರಾಯಣ್ಣನಿಗೆ ವಂಶಪಾರಂಪರ್ಯವಾಗಿ ಬಂದಿರುವಂತದ್ದು. ಆದರೆ ಇಲ್ಲಿ ತಳವಾರಿಕೆ ಮಧ್ಯದಲ್ಲಿ ಬರುತ್ತದೆಂದು ಹೇಳಿದ್ದಾರೆ. "ಏಕೆಂದರೆ ಕಿತ್ತೂರ ರಾಣಿ ಚೆನ್ನಮ್ಮಾಜಿಯ ವೀರ ಸೇನೆಯಲ್ಲಿ ಕೃಷಿಕ ಮೂಲದ ಮಣ್ಣಿನ ಮಕ್ಕಳೇ ಅಪಾರ ಸಂಖ್ಯೆಯಲ್ಲಿ ಸೈನಿಕರಾಗಿದ್ದರು.

ಬಿಡುಗಡೆಯ ನಂತರ ಸಂಗೊಳ್ಳಿಗೆ ತೆರಳಿ ರಾಯಣ್ಣನು ಮೊದಲಿಗೆ ಕೃಷಿಯಲ್ಲಿ ನಿರತನಾದನು. ನಂತರ ಕೆಲವು ತಿಂಗಳೊಳಗೆ ರಾಯಣ್ಣನಿಗೆ ಸಂಗೊಳ್ಳಿಯ ಕುಲಕರ್ಣಿಯ ಬಳಿ ಹಳಬನ ಕೆಲಸ ದೊರಕಿತು. ಸಾಮಾನ್ಯ ಕೃಷಿಕ ಕುಟುಂಬದವನಾದ ಸಂಗೊಳ್ಳಿ ರಾಯಣ್ಣನಿಗೆ ಅಲ್ಪ ಪ್ರಮಾಣದ ಭೂಮಿಯಿದ್ದುದರಿಂದ ಕುಟುಂಬದ ನಿರ್ವಹಣೆಗಾಗಿ ಬೇರೆ ವೃತ್ತಿಯ ಅಗತ್ಯವಿತ್ತು. ಹೀಗಾಗಿ ಸಂಗೊಳ್ಳಿ ರಾಯಣ್ಣನು ಬ್ರಿಟಿಷರ ಸೇವೆಯಲ್ಲಿದ್ದ ಕುಲಕರ್ಣಿ ಬಳಿ ಹಳಬನಾಗಿ ಕೆಲಸಕ್ಕೆ ಸೇರಿಕೊಂಡನು. ಕ್ರಿಸ್ತಶಕ ೧೮೨೪ರ ಡಿಸೆಂಬರಿನಲ್ಲಿ ಕಿತ್ತೂರು ಬ್ರಿಟಿಷರ ವಶವಾಯಿತು. ಮುಂದೆ ಕೆಲವು ತಿಂಗಳುಗಳಲ್ಲಿ ಯುದ್ಧ ಖೈದಿಯಾಗಿದ್ದ ರಾಯಣ್ಣನ ಬಿಡುಗಡೆಯಾಯಿತು. ಆ ನಂತರವೇ ರಾಯಣ್ಣನು ತಳವಾರನಾಗಿ ಕೆಲಸಕ್ಕೆ ಸೇರಿದುದು"[೧೨] ರಾಯಣ್ಣನಿಗೆ ತಳವಾರ ವೃತ್ತಿಯು ನಂತರ ಸಿಗುತ್ತದೆಂದು ಹೇಳಿದ್ದಾರೆ. ರಾಯಣ್ಣನಿಗೆ ತಳವಾರಿಕೆ ವೃತ್ತಿಯು ವಂಶಪರಂಪರೆಯಾಗಿ ಬಂದಿತ್ತು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಸಂಗೊಳ್ಳಿ ರಾಯಣ್ಣನ ಕುರಿತ ಬಂದಿರುವಂತಹ ಲಾವಣಿಗಳಲ್ಲಿ ರಾಯಣ್ಣನಿಗೆ ವಾಲೀಕಾರಿಕೆ ವೃತ್ತಿಯು ವಂಶಪರಂಪರೆಯಾಗಿ ಬಂದಿರುವುದನ್ನು ನಾವು ನೋಡಬಹುದು.

ರಾಯಣ್ಣನ ವಿವಾಹದ ಕುರಿತು ಯಾವುದೇ ರೀತಿಯ ದಾಖಲೆಗಳಿಲ್ಲ. ಆದರೆ ಕೆಲವು ಲೇಖಕರು ರಾಯಣ್ಣನಿಗೆ ವಿವಾಹವಾಗಿತ್ತೆಂದು ದಾಖಲಿಸಿರುವುದು ಕಂಡುಬರುತ್ತದೆ. ಹೆಂಡತಿಯ ಹೆಸರು ಕೂಡ ನಿರ್ದಿಷ್ಟವಾಗಿಯೂ ಇಲ್ಲ. ಕೆಲವು ಕೃತಿಗಳಲ್ಲಿ ರಾಯಣ್ಣನ ಹೆಂಡತಿಯ ಹೆಸರು ಭಿನ್ನ-ಭಿನ್ನವಾಗಿರುವುದನ್ನು ಕಾಣುತ್ತೇವೆ. "ಮದುವೆಯ ವಿಷಯ ತಿಳಿದಿದ್ದೆ ತಡ ರಾಯಣ್ಣನಿಗೆ ಹೆಣ್ಣುಕೊಡಲು ಹೆಣ್ಣು ಹೆತ್ತವರು ತಾಮುಂದು ನಾಮುಂದೆಂದು ಬಂದರು. ಆದರೆ ಹಿರಿಯ ಮಗನಿಗೆ ಲಗ್ನಮಾಡದೆ ಕಿರಿಯವನಿಗೆ ಮಾಡಲಾದೀತೆ. ಕೆಲವು ಸಮಯ ತಡೆದಿದ್ದು ಇಬ್ಬರಿಗೂ ಒಂದೇ ಲಗ್ನದಲ್ಲಿ ಒಂದೇ ಚಪ್ಪರದಲ್ಲಿಯೇ ಮದುವೆ ಮಾಡಿದರು. ನೇಗಿನಹಾಳದ ಹಳಬ ಲಕ್ಕಪ್ಪನ ತಂಗಿ ಮಲ್ಲವ್ವ ರಾಯಣ್ಣನ ಹೆಂಡತಿಯಾಗಿ ಮನೆ ತುಂಬಿದಳು."[೧೩] ಎಂದು ಹೇಳಿದ್ದಾರೆ, ಶಿವರಾಮು ಅವರ ಸಂಗೊಳ್ಳಿ ರಾಯಣ್ಣ ಕೃತಿಯಲ್ಲಿ ರಾಯಣ್ಣನ ಹೆಂಡತಿಯ ಊರು ಬೆಳವಾಡಿ ಎಂದಿದೆ. ರಾಯಣ್ಣ ಸೆರೆಮನೆಯಿಂದ ಬಿಡುಗಡೆ ಹೊಂದಿದ ನಂತರದ ಘಟನೆಯಲ್ಲಿ "ಗುಡ್ಡದ ಒತ್ತಿನಲ್ಲೇ ಹಿಂದಿನ ದೊರೆಗಳ ಸಮಾಧಿಗಳಿದ್ದವು. ರಾಯಣ್ಣ ಅವುಗಳ ಸುತ್ತ ಪ್ರದಕ್ಷಿಣೆ ಹಾಕಿದ. ಆ ಮೇಲೆ ಪಕ್ಕದಲ್ಲೆ ಇದ್ದ ಕಲ್ಮಠದ ಒಳಕ್ಕೆ ಹೋದ. ಅಲ್ಲಿನ ಸ್ವಾಮಿಗಳು ಕಿತ್ತೂರಿನ ರಾಜಗುರುಗಳು. ರಾಯಣ್ಣ ದೂರದಿಂದಲೇ ನಮಸ್ಕಾರ ಮಾಡಿದ. ಹತ್ತಿರ ಹೋಗಿ ಮಾತನಾಡಬೇಕೆಂದು ಆಸೆ, ಆದರೆ ಬ್ರಿಟಿಷರ ಗುಪ್ತಚಾರರು ಇದ್ದಾರು ಎಂಬ ಸಂಶಯ, ಅದರಿಂದ ಸ್ವಾಮಿಗಳಿಗೆ ತೊಂದರೆ ಆದೀತು ಎಂಬ ಭಯ, ನೊಂದ ಮನದಿಂದ ಅವನು ಬಾಗಿಲು ದಾಟಿ ಹೊರ ನಡೆದ. ಉತ್ತರಕ್ಕಿದ್ದ ಸಂಗೊಳ್ಳಿಯ ದಾರಿ ಹಿಡಿದ. ಸಂಗೊಳ್ಳಿಗೆ ಮೊದಲು ಬೆಳವಾಡಿಯ ದಾರಿ ಬಂತು. ಅಲ್ಲಿಗೆ ಹೋಗಿ ಹೆಂಡತಿಯನ್ನು ನೋಡಬೇಕು ಅನ್ನಿಸಿತು. ಆದರೆ ಕಿತ್ತೂರು ದು:ಖದಲ್ಲಿರಬೇಕಾದರೆ ತಾನು ಸುಖಪಡುವುದು ನ್ಯಾಯವಲ್ಲ ಎಂದು ನಿರ್ಧರಿಸಿದ. ನೇರವಾಗಿ ಸಂಗೊಳ್ಳಿಯ ಕಡೆಗೆ ಹೆಜ್ಜೆ ಹಾಕಿದ."[೧೪]

“ಕತ್ತಿ ಹಿಡಿದು ಕ್ರಾಂತಿಗೆ ಹೊರಡುವ ಮುನ್ನ ಒಂದು ಸಮಸ್ಯೆ ರಾಯಣ್ಣನನ್ನು ಅಪಾರವಾಗಿ ಕಾಡತೊಡಗಿತು. ತಾಯಿ ಕೆಂಚವ್ವನ ಚಿತ್ರ ಕಣ್ಮುಂದೆ ಬಂದು ನಿಂತಿತು. ಹೆಂಡತಿಯೇನೋ ತವರು ಮನೆಯಲ್ಲಿದ್ದಾಳೆ. ಚಿನ್ನದಂತ ಬಾಮೈದ ಚೆನ್ನಾಗಿ ನೋಡಿಕೊಳ್ಳುತ್ತಾನೆ. ಆದರೆ ನನ್ನ ತಾಯಿಯ ಗತಿ ನೆನೆಸಿಕೊಂಡಾಕ್ಷಣ ಕಣ್ಣುಗಳು ಒದ್ದೆಯಾದವು. ಅಣ್ಣ ಸಿದ್ದಣ್ಣ ಮೊದಲೇ ಅಂಜು ಪುಕ್ಕಲ. ಅಂತವನ ಆಶ್ರಯದಲ್ಲಿ ಅವ್ವನನ್ನು ಇರಿಸಿ ಹೋಗುವುದು ತರವಲ್ಲ ಎಂದುಕೊಂಡ. ತಾನು ಸಂಪಗಾವಿ ಜೈಲಿನಲ್ಲಿದ್ದಾಗ ಅವ್ವನಿಗೊದಗಿದ ದುಸ್ಥಿತಿಯನ್ನು ನೆನಸಿಕೊಂಡು ಕರುಳು ಚುರುಕ್ಕೆಂದಿತು. ಕೂಡದು, ಕೂಡದು ಮತ್ತೆ ಅಂತಹ ಸ್ಥಿತಿಗೆ ಅವಕಾಶ ಕೊಡಬಾರದು ಎಂದು ನಿರ್ಧರಿಸಿದ. ಕೆಂಚವ್ವನನ್ನು ಗುಟ್ಟಾಗಿ ಅಮಟೂರಿಗೆ ಕರೆದುಕೊಂಡು ಹೊರಟ. ಗುರಿಕಾರ ಬಾಳಪ್ಪನ ಮನೆಯಲ್ಲಿ ಇರಿಸಿದ.”[೧೫] ರಾಯಣ್ಣನ ಹೋರಾಟಕ್ಕೆ ಹೊರಡುವ ಸಮಯದಲ್ಲಿ ತಾಯಿಯನ್ನು ಅಮಟೂರಿನ ಗುರಿಕಾರ ಬಾಳಪ್ಪನ ಮನೆಯಲ್ಲಿ ಗುಪ್ತವಾಗಿ ಇರಿಸಿದ ಎಂದು ಹೇಳಲಾಗಿದೆ.

“ಮಾರನೆಯದಿನ ರಾಯಣ್ಣ ದೇಶನೂರು ಕೋಟೆಯ ಮೇಲೆ ಹತ್ತಿದ. ಸಂಪಗಾವಿಯಲ್ಲಿ ದೊರಕಿದ ವಿಜಯದ ಸಂಕೇತವಾಗಿ ಅಲ್ಲಿ ನಂದಿ ಧ್ವಜವನ್ನು ಹಾರಿಸಿದ.”[೧೬] ರಾಯಣ್ಣ ತನ್ನ ಹೋರಾಟದಲ್ಲಿ ಎಲ್ಲಿಯೂ ಸಹ ಯಾವುದೇ ಕೋಟೆಯನ್ನು ವಶಪಡಿಸಿಕೊಂಡಿರಲಿಲ್ಲ ಹಾಗೂ ಕಿತ್ತೂರಿನ ನಂದಿ ಧ್ವಜವನ್ನು ಎಲ್ಲಿಯೂ ಹಾರಿಸಿರಲಿಲ್ಲ.

ಸಂಗೊಳ್ಳಿ ರಾಯಣ್ಣನ ಕುರಿತು ಬಂದಂತಹ ಜೀವನ ಚರಿತ್ರೆಗಳಲ್ಲಿ ಅವನ ಬಾಲ್ಯ, ವೃತ್ತಿ, ಕಿತ್ತೂರು ಸಂಸ್ಥಾನದ ಜೊತೆಗಿನ ಸಂಬಂಧ, ಬ್ರಿಟಿಷರ ವಿರುದ್ಧ ಅವನು ಮಾಡಿದ ಹೋರಾಟ, ಮುಂತಾದ ಮೌಲಿಕ ಸಂಗತಿಗಳು ಗೋಚರಿಸುತ್ತವೆ. ಎಲ್ಲ ಚರಿತ್ರೆಕಾರರು ತಮಗೆ ಲಭ್ಯವಿರುವ ಆಕರಗಳನ್ನು ಉಪಯೋಗಿಸಿಕೊಂಡು ವಸ್ತುನಿಷ್ಠವಾಗಿ ರಾಯಣ್ಣನ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ. ಕಿತ್ತೂರಿನ ಇತಿಹಾಸವನ್ನು ಪುನರ್ ರಚಿಸಲು ರಾಯಣ್ಣನ ಕುರಿತಾದ ಜೀವನ ಚರಿತ್ರೆಗಳು ಪ್ರಮುಖ ಆಕರಗಳಾಗುತ್ತವೆ ಎಂಬುದು ಗಮನಿಸಬೇಕಾದ ಸಂಗತಿಯಾಗಿದೆ.

**ಅಡಿ ಟಿಪ್ಪಣಿಗಳು**

೧. ಒಡೆಯರ್ ಡಿ ಹೆಗ್ಗಡೆ, ಸ್ವಾತಂತ್ರ್ಯ ಸೇನಾನಿ ಸಂಗೊಳ್ಳಿ ರಾಯಣ್ಣ, ಪುಟ, ೨

೨. ಕುಂಬಳಹಳ್ಳಿ ಮುನಿರಾಜು (ಸಂ), ಕ್ರಾಂತಿವೀರ, ರಾಷ್ಟ್ರಪ್ರೇಮಿ ಸಂಗೊಳ್ಳಿ ರಾಯಣ್ಣ, ಪುಟ, ೧೪

೩. ಮಾನಸ, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಪುಟ, ೧೩

೪. ಮಲ್ಲಿಕಾ ಘಂಟಿ, ವೀರ ಸಂಗೊಳ್ಳಿ ರಾಯಣ್ಣ, ಪುಟ, ೧೪

೫. ಮಾನಸ, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಪುಟ, ೪೫

೬. ಅದೇ, ಪುಟ, ೬೨

೭. ಜ್ಯೋತಿ ಹೊಸೂರ, ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ, ಪುಟ, ೧೧೧

೮. ಮಾನಸ, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಪುಟ, ೮೨

೯. ಅದೇ, ಪುಟ, ೮೩

೧೦. ಗುಂಡೂರ ಪಾಟೀಲ್ ಎಸ್. ವಿ. (ಸಂಗ್ರಹ) ಧೀರ ಪುರುಷರು, ಪುಟ, ೭೨

೧೧. ಒಡೆಯರ್ ಡಿ. ಹೆಗ್ಗಡೆ, ಸ್ವಾತಂತ್ರ್ಯ ಸೇನಾನಿ ಸಂಗೊಳ್ಳಿ ರಾಯಣ್ಣ, ಪುಟ, ೨೦

೧೨. ಅದೇ, ಪುಟ, ೦೬

೧೩. ಮಾನಸ, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಪುಟ, ೨೩

೧೪. ಶಿವರಾಮು, ಸಂಗೊಳ್ಳಿ ರಾಯಣ್ಣ, ಪುಟ, ೧೮

೧೫. ಮಾನಸ, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಪುಟ, ೪೯

೧೬. ಅದೇ, ಪುಟ, ೭೭

* * *

ಅಧ್ಯಾಯ : ಏಳು

# ಸಂಗೊಳ್ಳಿ ರಾಯಣ್ಣ : ಸಂಶೋಧನ ಸಾಹಿತ್ಯ

ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದ ವೀರರ ಸಾಹಸಮಯ ಚಿತ್ರಣಗಳನ್ನು ನಮ್ಮ ಜನರು ಹಾಡುಗಳಾಗಿ, ಕಥೆಗಳನ್ನಾಗಿ ಹಾಡತೊಡಗಿದರು. ಭಾರತದಲ್ಲಿ ನಡೆದಂತಹ ಕ್ವಿಟ್ ಇಂಡಿಯಾ ಚಳುವಳಿ ಹಾಗೂ ಇತರ ಹೋರಾಟಗಳಲ್ಲಿ ಮೊದಲು ಸ್ವಾತಂತ್ರಕ್ಕಾಗಿ ಹೋರಾಟ ಮಾಡಿದಂತಹ ಸಂಗೊಳ್ಳಿ ರಾಯಣ್ಣನಂತಹ ಅನೇಕ ಹೋರಟಗಾರರು ಸ್ಫೂರ್ತಿಯಾಗಿದ್ದಾರೆ. ಅವರನ್ನು ಕುರಿತು ಹೇಳುವಂತಹ ಜನಪದ ಹಾಡುಗಳು, ಲಾವಣಿಗಳಿಂದ ಹೋರಾಟಕ್ಕೆ ಸ್ಫೂರ್ತಿಯಾಗಿರುವುದು ಕಂಡುಬರುತ್ತದೆ. ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ನಿರೂಪಣೆಗೆ ಮಹತ್ವದ ಆಕರವಾಗುವ ವಿಶೇಷತೆಯನ್ನು ಸಾಹಿತ್ಯವು ಹೊಂದಿದೆ. ಸ್ವಾತಂತ್ರ್ಯ ಹೋರಾಟದ ಹಾಗೂ ಇತರ ಚರಿತ್ರೆಯನ್ನು ತಿಳಿಯಲು ಸಾಹಿತ್ಯ ಮುಖ್ಯ ಆಧಾರ ಸಾಮಗ್ರಿಯಾಗುತ್ತದೆ ಎಂದು ಹೇಳಬಹುದು. ಭಾರತದಲ್ಲಿ ನಡೆದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕಿಂತ ಮೊದಲು ಬ್ರಿಟಿಷರ ವಿರುದ್ಧ ಹೋರಾಟ ಮಾಡಿದವರು ಮೈಸೂರಿನ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಮೊದಲಿಗರು. ಇವರು ಮೈಸೂರು ರಾಜ್ಯದ ಅರಸರಾಗಿದ್ದರು ಆದರೆ ಕಿತ್ತೂರು ಚೆನ್ನಮ್ಮ ಚಿಕ್ಕ ಸಂಸ್ಥಾನವಾದ ಕಿತ್ತೂರು ಸಂಸ್ಥಾನವನ್ನು ಉಳಿಸಿಕೊಳ್ಳಲು ೧೮೨೪ರಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ಮಾಡಿರುವುದು ಕಂಡುಬರುತ್ತದೆ. ಆದರೆ ರಾಯಣ್ಣ ಯಾವುದೇ ಒಂದು ರಾಜ್ಯಕ್ಕೆ, ಸಂಸ್ಥಾನಕ್ಕೆ ರಾಜನಾಗಿರದಿದ್ದರೂ ಭಾರತದಿಂದ ಬ್ರಿಟಿಷರನ್ನು ಹೊರಹಾಕಿ ಕಿತ್ತೂರು ಸಂಸ್ಥಾನವನ್ನು ಸ್ವಾತಂತ್ರ್ಯಗೊಳಿಸಲು ಸಾಮಾನ್ಯ ವ್ಯಕ್ತಿಯೊಬ್ಬ ಹೋರಾಟ ಮಾಡಿರುವುದು ಆತನ ದೇಶಪ್ರೇಮವನ್ನು ಸಾರುತ್ತದೆ. ಸಂಗೊಳ್ಳಿ ರಾಯಣ್ಣನ ಕುರಿತು ನಮಗೆ ಹೆಚ್ಚಿನ ಲಿಖಿತ ದಾಖಲೆಗಳು ಸಿಗುವುದಿಲ್ಲ. ಅಂದಿನ ಕಾಲದ ಬ್ರಿಟಿಷ್ ಅಧಿಕಾರಿಗಳು ನಡೆಸಿದ ಪತ್ರವ್ಯವಹಾರಗಳು ಪ್ರಮುಖ ಆಕರಗಳಾಗುತ್ತವೆ. ಈ ಪತ್ರವ್ಯವಹಾರಗಳನ್ನು ಬ್ರಿಟಿಷ್ ಅಧಿಕಾರಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ರೂಪಿಸಿಕೊಂಡಿರಬಹುದು. ರಾಯಣ್ಣನ ಬಗ್ಗೆ, ರಾಯಣ್ಣನ ಹೋರಾಟದ ಬಗ್ಗೆ ಮಾಹಿತಿ

ದೊರೆಯುವುದು ಅಥವಾ ಸಿಗುವುದು ಜನಪದ ಸಾಹಿತ್ಯದಲ್ಲಿ. ರಾಯಣ್ಣನ ಹೋರಾಟವನ್ನು ಅಂದಿನ ಜನರು ಹಾಡುಗಳ ಮೂಲಕ ಮತ್ತು ಕಥೆಗಳ ಮೂಲಕ ಮುಂದಿನ ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಫೂರ್ತಿಯಾಗಿ ನಿಲ್ಲುತ್ತಾನೆ. ಇಂತಹ ರಾಯಣ್ಣನನ್ನು ಕುರಿತು ಹಲವಾರು ವಿದ್ವಾಂಸರು ರಾಯಣ್ಣನ ಹೋರಾಟದ ಕುರಿತು ಹಲವಾರು ಸಂಶೋಧನಾತ್ಮಕ ಬರಹಗಳನ್ನು ಬರೆದಿರುವುದು ಕಂಡುಬರುತ್ತದೆ. ಭಾರತ ಸ್ವಾತಂತ್ರ್ಯ ಸಂಗ್ರಾಮದ ಹೋರಾಟಕ್ಕೆ ಸ್ಫೂರ್ತಿಯಾಗಿದ್ದಾನೆ ಎಂದು ಹೇಳಬಹುದು.

ಭಾರತೀಯ ಐತಿಹಾಸಿಕ ವೀರಪರಂಪರೆಗೆ ಕಿತ್ತೂರಿನಂತಹ ಸಣ್ಣ ಸಂಸ್ಥಾನದ ಪಾತ್ರ ತುಂಬ ಮಹತ್ವದಾಗಿದೆ. ಬ್ರಿಟಿಷರು ಬರೆದಿರುವ ದಾಖಲೆಗಳಿಂದ ಇತಿಹಾಸವನ್ನು ನೋಡಿದ್ದರಿಂದ ಕಿತ್ತೂರಿನ ಹಾಗೂ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ಸತ್ಯಾಂಶಗಳು ಮರೆಮಾಚಿಹೋದಂತೆ ಕಾಣುತ್ತದೆ. ಕಿತ್ತೂರಿನ ದೇಶಾಭಿಮಾನ, ಸ್ವಾಭಿಮಾನ ಹಾಗೂ ಆತ್ಮಗೌರವ ಮುಂತಾದವುಗಳ ಬಗ್ಗೆ ತಿಳಿಯಲು ದಾಖಲೆಗಳಿಲ್ಲದ್ದಿದ್ದರೂ, ಕೆಲು ಸಂಶೋಧನಾತ್ಮಕ ಬರಹಗಳಿಂದ ಕಿತ್ತೂರಿನ ಹಾಗೂ ರಾಯಣ್ಣನಿಗೆ ಸಂಬಂಧಿಸಿದಂತ ಚಿತ್ರಣಗಳನ್ನು ಚಿತ್ರಿಸಿರುವುದನ್ನು ಪ್ರಮುಖವಾಗಿ ಗುರುತಿಸಬಹುದು. ರಾಯಣ್ಣನ ಹೋರಾಟದ ಚಿತ್ರಣ, ಕಿತ್ತೂರು ಸಂಸ್ಥಾನದ ಚಿತ್ರಣ, ಯುದ್ಧ, ಸ್ವಾತಂತ್ರ್ಯಯೋಧರ ಮನಸ್ಥಿತಿ ಇವುಗಳ ಕುರಿತು ಲಿಖಿತ ಸಾಹಿತ್ಯಕ್ಕಿಂತ ಮೌಖಿಕ ಸಾಹಿತ್ಯದಲ್ಲಿ ಹೆಚ್ಚಾಗಿ ಇರುವುದು ಕಂಡುಬರುತ್ತದೆ. ಕಿತ್ತೂರಿಗೆ ಹಾಗೂ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ಹೇಳಿಕೆಗಳು, ಐತಿಹ್ಯಗಳು, ನಂಬಿಕೆಗಳು, ಕಥೆಗಳು ರಾಯಣ್ಣನ ಕುರಿತ ಹೊಸ ಇತಿಹಾಸವನ್ನು ತಿಳಿಯಲು ಪ್ರಮುಖ ಆಧಾರಗಳಾಗುತ್ತವೆ ಎಂಬುದನ್ನು ಮರೆಯಬಾರದು. ಇಂತಹ ಅಂಶಗಳನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನ ಮಾಡಿರುವುದು ಕಂಡುಬರುತ್ತದೆ.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಕಿತ್ತೂರಿಗೆ ಪ್ರಮುಖವಾದ ಸ್ಥಾನವಿದೆ. ಕಿತ್ತೂರು ಚಿಕ್ಕ ಸಂಸ್ಥಾನವಾದರೂ ಬ್ರಿಟಿಷರ ಅಧಿಪತ್ಯವನ್ನು ಒಪ್ಪಿಕೊಳ್ಳದೆ ಪ್ರತಿರೋಧವನ್ನು ವ್ಯಕ್ತಪಡಿಸುತ್ತದೆ. ಕಿತ್ತೂರು ಸಂಸ್ಥಾನಕ್ಕೆ ಉತ್ತರಾಧಿಕಾರಿ ಇಲ್ಲ ಎಂಬ ನೆಪವೊಡ್ಡಿ ಕಿತ್ತೂರನ್ನು ವಶಪಡಿಸಿಕೊಳ್ಳಲು ಬಂದಂತಹ ಧಾರವಾಡದ ಪೊಲಿಟಿಕಲ್ ಏಜೆಂಟ್ ಥ್ಯಾಕರೆಯ ವಿರುದ್ಧ ಚೆನ್ನಮ್ಮಳ ಸ್ವಾಭಿಮಾನ, ಸ್ವಾತಂತ್ರ್ಯ ಅಪಾರವಾದದ್ದು. ಕಿತ್ತೂರು ಬ್ರಿಟಿಷರ ವಶವಾದ ನಂತರ ಮತ್ತೆ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಿ ದೇಸಾಯರ ಆಡಳಿತವನ್ನು ಮರು ಸ್ಥಾಪಿಸಬೇಕೆಂದು ರಾಯಣ್ಣ ಹೋರಾಟವನ್ನು ಮಾಡುತ್ತಾನೆ. ನಾಡಪ್ರೇಮ, ನಿಷ್ಠೆ ಸ್ವಾತಂತ್ರ್ಯ, ಸ್ವಾಭಿಮಾನಿಯಾದ ರಾಯಣ್ಣ ಸೈನ್ಯವನ್ನು ಸಂಘಟಿಸಿ ಬ್ರಿಟಿಷರ ವಿರುದ್ಧ ಹೋರಾಟವನ್ನು ಮಾಡುತ್ತಾನೆ.

ಕಿತ್ತೂರು ಸಂಸ್ಥಾನ ಹಾಗೂ ರಾಯಣ್ಣನಿಗೆ ಸಂಬಂಧಿಸಿದಂತೆ ಜಾನಪದ ಹಾಗೂ ಲಿಖಿತ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಲವಾರು ಅಧ್ಯಯನಗಳು ನಡೆದಿರುವುದು ಕಂಡುಬರುತ್ತದೆ. ರಾಯಣ್ಣನಿಗೆ

ಸಂಬಂಧಿಸಿದಂತೆ ರಾಯಣ್ಣನ ಕಾಲಘಟ್ಟದಲ್ಲಿಯೇ ಹಾಗೂ ಸಮಕಾಲೀನ ಜನರು ರಾಯಣ್ಣನ ಹೋರಾಟ, ಜೀವನವನ್ನು, ಸಾಹಸವನ್ನು ಕುರಿತು ಕತೆಗಳ ಮೂಲಕ ಕಟ್ಟಿಕೊಟ್ಟಿದ್ದಾರೆ. ಇದರ ಜೊತೆಗೆ ನಾಟಕ, ಕತೆ, ಕಾದಂಬರಿಗಳು ಹಾಗೂ ಸಂಶೋಧನಾತ್ಮಕ ಬರವಣಿಗೆಗಳು ರಚನೆಯಾಗಿರುವುದನ್ನು ಗಮನಿಸಬಹುದು.

"ಚರಿತ್ರೆಯಲ್ಲಿ ಕಾಣುವ ಪ್ರತಿಯೊಂದು ಯುದ್ಧಗಳು, ಹೋರಾಟಗಳು ಹುಟ್ಟಿಕೊಂಡಿದ್ದು ಹಾಗೂ ಕೊನೆಗೊಂಡಿದ್ದು ಒಳಸಂಚು ಹಾಗೂ ಸ್ವಾರ್ಥಿಗಳ ಕೈ ಮೇಲಾದಾಗಲೇ. ಆಶೆ ಆಮಿಷಕ್ಕೆ ಬಲಿಯಾಗಿ ಮನುಷ್ಯ ಸಂಬಂಧಗಳನ್ನು ಎಣಿಸದೆ ಹೇಗೆ ವಿನಾಶಕ್ಕೆ ಕಾರಣವಾಗುತ್ತಾನೆ ಎನ್ನುವುದಕ್ಕೆ ಕಿತ್ತೂರು ಹಾಗೂ ರಾಯಣ್ಣನ ಅವಸಾನ ಜ್ವಲಂತ ಉದಾಹರಣೆಗಳಾಗಿವೆ."[೧] ಸಮಾಜದಲ್ಲಿ ನೆಡೆಯುವ ಪ್ರತಿಯೊಂದು ಘಟನೆಗಳ ಹಿಂದೆ ಒಂದು ಚರಿತ್ರೆಯಿರುತ್ತದೆ. ಈ ಚರಿತ್ರೆಯು ಹೆಚ್ಚಾಗಿ ಕುತಂತ್ರಿಗಳ ಒಳಸಂಚಿನಿಂದ ಚರಿತ್ರೆಯೇ ಬದಲಾಗುವಂತಹ ಸನ್ನಿವೇಶಗಳು ಭಾರತದಲ್ಲಿ ಬ್ರಿಟಿಷರು ಭದ್ರವಾಗಿ ನೆಲೆಯೂರಲು ಮನುಷ್ಯನ ಆಸೆ – ಅಕಾಂಕ್ಷೆಗಳೇ ಕಾರಣ. ಹಾಗೆಯೇ ಸಂಬಂಧಗಳು ಹೇಗೆ ಬದಲಾವಣೆಗೊಳ್ಳುತ್ತವೆ ಎನ್ನುವುದಕ್ಕೆ ಈ ಮೇಲಿನ ಮಾತುಗಳಿಂದ ತಿಳಿಯಬಹುದು. ಕಿತ್ತೂರು ಹಾಗೂ ಭಾರತದಲ್ಲಿ ಬ್ರಿಟಿಷರು ಭದ್ರವಾಗಿ ನೆಲೆಯೂರಲು ನಮ್ಮವರೆ ಕಾರಣ.

"ಇತಿಹಾಸ ಎನ್ನುವುದು ಇತಿಹಾಸಕಾರನ ದೃಷ್ಟಿಕೋನಕ್ಕೆ ಅನುಗುಣವಾಗಿ ವ್ಯಕ್ತಗೊಂಡುದುದಾಗಿದೆ. ಇತಿಹಾಸಕಾರ ಕೇವಲ ಇತಿಹಾಸದ ನಿರೂಪಕನಲ್ಲ. ಆತ ಇತಿಹಾಸದ ನಿರ್ಮಾಪಕ ಕೂಡ. ಅಂದರೆ ಇತಿಹಾಸಕಾರ ತನ್ನ ವರ್ತಮಾನದ ಮಾನಸಿಕ ಸಂದರ್ಭಕ್ಕೆ ಅನುಸಾರವಾಗಿ ಭೂತದ ಘಟನೆಗಳನ್ನು ನಿರ್ಮಿಸಿಕೊಳ್ಳುತ್ತಾನೆ."[೨] ಅಂದರೆ ಇತಿಹಾಸ ಕೇವಲ ದಾಖಲೆಗಳಾಗಿರದೆ ಸಾಹಿತ್ಯ ವಲಯದಲ್ಲಿಯೂ ಚರಿತ್ರೆಯನ್ನು ಕಟ್ಟಿಕೊಡಬಹುದು. ಇತಿಹಾಸದ ಸಂದರ್ಭಗಳನ್ನು ವಸ್ತುವಾಗಿಟ್ಟುಕೊಂಡು ವರ್ತಮಾನದಲ್ಲಿ ಆ ಘಟನೆಗಳನ್ನು ಪುನರ್‌ರಚಿಸುವ ಸಮಯದಲ್ಲಿ ಅಂದಿನ ಕಾಲದ ಸಂದರ್ಭಕ್ಕೆ ಅನುಗುಣವಾಗಿ ಚರಿತ್ರೆಯನ್ನು ಕಟ್ಟಿಕೊಡಬೇಕಾಗುತ್ತದೆ.

ಸಂಗೊಳ್ಳಿ ರಾಯಣ್ಣನನ್ನು ಕುರಿತು ಹಲವಾರು ಸಂಶೋಧನಾ ಕೃತಿಗಳು ಹಾಗೂ ಲೇಖನಗಳು ಬಂದಿವೆ. ಈ ಸಂಶೋಧನಾ ಕೃತಿಗಳಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ ಮನೆತನ, ವೃತ್ತಿ, ಜಾತಿ, ರಾಯಣ್ಣನ ಬಾಲ್ಯ ಚಿತ್ರಣ, ಸಹೋದರನ ಚಿತ್ರಣ, ಸಹೋದರಿಯ ಚಿತ್ರಣ, ವಿವಾಹದ ಕುರಿತು, ಮಗನ ಕುರಿತು, ಕಿತ್ತೂರು ಸಂಸ್ಥಾನದಲ್ಲಿ ರಾಯಣ್ಣನ ಪಾತ್ರ, ಕಿತ್ತೂರು ಬ್ರಿಟಿಷರ ವಶವಾದ ನಂತರ ಕಿತ್ತೂರನ್ನ ಮತ್ತೇ ಸ್ವಾತಂತ್ರ್ಯಗೊಳಿಸಲು ನಡೆಸಿದಂತಹ ಹೋರಾಟದ ಕುರಿತು ಮಾಹಿತಿಯನ್ನು ತಿಳಿಯಲು ಈ ಸಂಶೋಧನ ಕೃತಿಗಳು ಸಹಾಯಕವಾಗುತ್ತವೆ. ಹಾಗೆಯೇ ಈ ಸಂಶೋಧನಾ ಕೃತಿಗಳಲ್ಲಿ ಕೆಲವು ವಿಷಯಗಳಲ್ಲಿ ಗೊಂದಲಗಳಿರುವುದನ್ನು ಗಮನಿಸಬಹುದು.

ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ಸಂಶೋಧನಾತ್ಮಕ ಕೃತಿಗಳು ರಚನೆಗೊಂಡಿವೆ. ಅಂತಹ ಸಂಶೋಧನಾತ್ಮಕ ಕೃತಿಗಳೆಂದರೆ ಜ್ಯೋತಿ ಹೊಸೂರ ಅವರ 'ಸಂಗೊಳ್ಳಿ ರಾಯಣ್ಣ

ಚರಿತ್ರೆ ಸಂಶೋಧನೆ, ಸೂರ್ಯನಾಥ ಕಾಮತ ಸಂಗೊಳ್ಳಿ ರಾಯಣ್ಣ, ಶಿವಾನಂದ ಗುಬ್ಬಣ್ಣವರ ಕಿತ್ತೂರ ಜನಪದ ಸಾಹಿತ್ಯ', 'ಲಾವಣಿ ಸಾಹಿತ್ಯದಲ್ಲಿ ಸಂಸ್ಥಾನಿಕರ ಬಂಡಾಯ' ತಿ. ತಾ. ಶರ್ಮ ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ಕ್ಯಾತನಹಳ್ಳಿ ರಾಮಣ್ಣ ಇವರು ಸಂಪಾದಿಸಿರುವ 'ಫ್ಲೀಟರು ಸಂಗ್ರಹಿಸಿದ ಲಾವಣಿಗಳು', ಸ.ರಾ ಸುಳಕೊಡೆ ಅವರು ಸಂಪಾದಿಸಿರುವ 'ಕಿತ್ತೂರು ಕಲಿಗಳು ಮತ್ತು ಸ್ವಾತಂತ್ರ ಸಂಗ್ರಾಮ, ವೀರೇಶ ಬಡಿಗೇರ ಅವರ 'ಸಂಸ್ಕೃತಿ ಸಂಕಥನ, ಶಿವರಾಮು ಅವರ ಕನ್ನಡದ ಕಡುಗಲಿಗಳು, ಸು. ರುದ್ರಮೂರ್ತಿ ಶಾಸ್ತ್ರೀ ಅವರ ಕರ್ನಾಟಕದ ಸ್ವಾತಂತ್ರ್ಯವೀರರು, ವಾಯ್.ಎಫ್ ಸೈದಾಪುರ ರವರ 'ಉತ್ತರ ಕರ್ನಾಟಕದ ಜನಪದ ವೀರ ಗೀತೆಗಳು' ಬಸವರಾಜ ಕಮತ ಅವರ 'ಸಂಗೊಳ್ಳಿ ಬಂಡಾಯ ಚರಿತ್ರೆ ಮತ್ತು ಜಾನಪದ ನೆಲೆಯಲ್ಲಿ' ಜಯಲಕ್ಷ್ಮಿ ಸೀತಾಪುರ ಅವರ ಕನ್ನಡದಲ್ಲಿ ಐತಿಹಾಸಿಕ ಜನಪದ ಲಾವಣಿಗಳು, ಚಂದ್ರಕಾಂತ ಬಿಜ್ಜರಗಿ ಅವರ ಹಾಲುಮತ ರತ್ನಗಳು, ಎಂ. ಕರಿಯಪ್ಪ ಅವರ ಹಾಲತೊರೆ, ರಮೇಶ ಬಿ. ಈ. ಅವರ ಕರ್ನಾಟಕದ ಕ್ರಾಂತಿಕಾರಿಗಳು ಮುಂತಾದ ಸಂಶೋಧನ ಕೃತಿಗಳು ರಚನೆಗೊಂಡಿರುವುದನ್ನ ಕಾಣಬಹುದು.

ಜ್ಯೋತಿ ಹೊಸೂರ ಅವರ 'ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ' ಕೃತಿಯು ಬಹಳ ಮುಖ್ಯವಾದುದ್ದಾಗಿದೆ. ಈ ಕೃತಿಯು ಒಟ್ಟು ೨೨ ಅಧ್ಯಾಯಗಳನ್ನೊಳಗೊಂಡಿದ್ದು ಆಕರಗಳು ಪಟ್ಟಿ–ಆಶಯ, ರಾಯಣ್ಣನ ಬಗೆಗಿನ ಆಕರ್ಷಣೆ ಮತ್ತು ಅಧ್ಯಯನ, ವೀರಪರಂಪರೆ ಮುಂದುವರೆಸಿದ ರಾಯಣ್ಣ ಮತ್ತು ಅವನ ಅನನ್ಯತೆ, ಬಿಡುಗಡೆಗೊಂಡ ರಾಯಣ್ಣನ ಅನುಸಂಧಾನ, ರಾಯಣ್ಣನನ್ನು ಕುರಿತ ಕೃತಿಗಳಲ್ಲಿ ಸಂಶಯಾತ್ಮಕ ಪ್ರಮುಖ ವ್ಯತ್ಯಾಸಗಳ ಚರ್ಚೆ, ವಂಶಜರು ಮತ್ತು ವಾರಸುದಾರರು, ರಾಯಣ್ಣನ ಸ್ಮಾರಕಗಳ ಬಗೆಗಳು ಮತ್ತು ಅವುಗಳ ಇತಿಹಾಸ, ರಾಯಣ್ಣನಿಗೆ ಸಂಬಂಧಿಸಿದಂತೆ ಸರಕಾರದ ಕರ್ತವ್ಯಗಳು ಹೀಗೆ ರಾಯಣ್ಣನಿಗೆ ಸಂಬಂಧಿಸಿದ ಸಮಗ್ರ ಮಾಹಿತಿಯನ್ನ ತಿಳಿಯಲು ಸಹಾಯಕವಾಗುತ್ತದೆ. ಜ್ಯೋತಿ ಹೊಸೂರ ಅವರು ರಾಯಣ್ಣನಿಗೆ ಸಂಬಂಧಿಸಿದಂತೆ ಇದುವರೆಗೂ ಪ್ರಕಟವಾದ ಕೃತಿಗಳನ್ನ, ಲೇಖನಗಳನ್ನ ಪರಮಾರ್ಶಿಸುತ್ತಾ ಹಾಗೂ ಬ್ರಿಟಿಷರು ಬರೆದಂತಹ ದಾಖಲೆಗಳನ್ನ ಪಾರಮಾರ್ಶಿಸಿ, ರಾಯಣ್ಣನ ಹೋರಾಟದ ಸ್ವರೂಪ, ಪ್ರದೇಶ, ದಿನಾಂಕವನ್ನ ವಿವಿಧ ಆಕರಗಳ ಮೂಲಕ ಸ್ಪಷ್ಟವಾಗಿ ಹೇಳಿದ್ದಾರೆ.

ಸಂಗೊಳ್ಳಿ ರಾಯಣ್ಣನನ್ನು ಕುರಿತು ರಚನೆಗೊಂಡ ಕೃತಿಗಳಿಗೇನು ಕೊರತೆಯಿಲ್ಲ. ಆದರೆ, ಅವೆಲ್ಲವೂ ಒಂದು ಮತ್ತೊಂದರ ಪ್ರತಿರೂಪವಾಗಿ ಹೊರ ಬಂದಿರುವುದು ಮಾತ್ರ ಬೇಸರದ ವಿದ್ಯಮಾನ. ಅವೆಲ್ಲವುಗಳಲ್ಲಿಯ ವಿಷಯದಲ್ಲಂತೂ ಕಾಣುವುದು ಚರ್ವಿತ ಚರ್ವಣ: ಮತ್ತು ಅರ್ಥವಂತಿಕೆಯಿಲ್ಲದ ಒಣ ವೈಭವೀಕರಣ. ಒಮ್ಮೊಮ್ಮೆ ಕಾಲಮಾನ, ನೈಜತೆ, ಸಾಧ್ಯಾಸಾಧ್ಯತೆಗಳ ಸಾಂಗತ್ಯವಿಲ್ಲದ ಕಾಲ್ಪನಿಕ ಘಟನಾವಳಿಗಳ ಹೆಮ್ಮೆಯ ನಿರೂಪಣೆ. ಇಂಥ ಕೃತಿಗಳಿಂದಾಗಿ ರಾಯಣ್ಣನು

ನೈಜಸತ್ವ ಕಳೆದುಕೊಂಡು ಇನ್ನೇನೊ ಆಗಿ ರೂಪುಗೊಂಡಿದ್ದಾನೆ. ವಿಚಾರಶೀಲರ ಕಣ್ಣಲ್ಲಿ ವಿರೂಪಗೊಂಡಿದ್ದಾನೆ. ಅಂತೆಯೇ ನಾನು ರಾಯಣ್ಣನನ್ನು ಕುರಿತು ಕೃತಿ ರಚಿಸಿ, ಆ ಮೂಲಕ ಅವನ ವ್ಯಕ್ತಿತ್ವದ ಅನಾವರಣ ಮಾಡಬೇಕೆಂದು ನಿಶ್ಚಯಿಸಿದನು. ಅವನ ಬಗೆಗೆ ಹಲವಾರು ವರ್ಷಗಳ ಹಿಂದೆಯೇ ಮೂಡಿದ್ದ ಆಸಕ್ತಿ, ಹತ್ತಿಪ್ಪತ್ತು ವರ್ಷಗಳ ಅಧ್ಯಯನ ಇತ್ಯಾದಿಗಳು ನನ್ನ ಈ ನಿಶ್ಚಯದ ಹಿಂದಿನ ಪ್ರೇರಣೆಗಳು. ಆನಂತರ ಮೂರ್ನಾಲ್ಕು ವರ್ಷಗಳ ವರೆಗಿನ ಸತತ ಪರಿಶ್ರಮದೊಂದಿಗೆ ಸಾವಧಾನಪೂರ್ವಕ ಬರವಣಿಗೆ ಸಾಗಿಸಿದೆ. ಪ್ರಸ್ತುತ ಕೃತಿ ಎಂದು ಜ್ಯೋತಿ ಹೊಸೂರ ಅವರ ಮನದಾಳದ ಮಾತುಗಳು ಈ ರೀತಿಯಲ್ಲಿ ಹೇಳಿದ್ದಾರೆ.

ಸಂಗೊಳ್ಳಿ ರಾಯಣ್ಣನ ಕುರಿತು, ಅವನ ಶಕ್ತಿ ವೈಶಿಷ್ಟ್ಯಗಳ ಮೂಲ ಕಾರಣವಾಗಿರುವ ನೈತಿಕತೆಯ ನಡಾವಳಿ ಇತ್ಯಾದಿ ಕುರಿತು, ಅವನ ಹೋರಾಟದ ವೈಶಿಷ್ಟ್ಯಪೂರ್ಣ ನಾವಿನ್ಯತೆಯ ಕುರಿತು, ಅವನ ಬಲಿದಾನದ ಆನಂತರದಲ್ಲಿ ಪ್ರತಿಭಾವಂತ ಸಾಮಾನ್ಯ ಜನರು ವಿವಿಧ ತೆರನಾಗಿ ಸ್ಮರಿಸಿ ಕಥೆ ಕಟ್ಟಿದ್ದಾರೆ: ತ್ರಿಪದಿ, ದುಂದುಮೆ, ಲಾವಣಿ ಇತ್ಯಾದಿಗಳನ್ನು ರಚಿಸಿ ಹಾಡಿಹೊಗಳಿದ್ದಾರೆ. ನಾಟಕಗಳು ರಚನೆಗೊಂಡಿವೆ. ಕಾದಂಬರಿ ಬರೆಯಲಾಗಿದೆ. ಅವನನ್ನು ಕುರಿತು ಇಂದಿನವರೆಗೂ ವಿವಿಧ ರೀತಿಯ ಸಾಹಿತ್ಯ ನಿರ್ಮಾಣಗೊಳ್ಳುತ್ತಲೇ ಇದೆ. ಹೀಗೆ ನಿರ್ಮಾಣಗೊಂಡ ವಿವಿಧ ಬಗೆಯ ಜನಪದ ಸಾಹಿತ್ಯ ಮತ್ತು ಶಿಷ್ಟ ಸಾಹಿತ್ಯ ಇತ್ಯಾದಿಗಳೆಲ್ಲ ಅವನ ಜೀವನ ಚರಿತ್ರೆ ಅರಿತುಕೊಳ್ಳಲು ಆಕರಗಳಾಗಿ ಮಹತ್ವದ ಮಾಹಿತಿಗೆ ಸುಳಿವು ನೀಡುತ್ತವೆ. ಇವುಗಳಿಗಿಂತ ಮುಖ್ಯವಾದ ಆಕರಗಳೆಂದರೆ ವಿವಿಧ ರೀತಿಯಲ್ಲಿ ಇರುವ ಮತ್ತು ದೊರೆಯುವ ಬ್ರಿಟಿಷ್ ಸರ್ಕಾರದ ಸೇವೆಯಲ್ಲಿದ್ದವರು ಪ್ರಾಸಂಗಿಕವಾಗಿ ಮಾಡಿದ ಪತ್ರವ್ಯವಹಾರಗಳು, ಆದೇಶಾದಿಗಳು ಮತ್ತು ಅವರು ದಾಖಲಿಸಿದ ರಾಯಣ್ಣಾದಿಗಳ ಜವಾಬು ಹೇಳಿಕೆ ಇತ್ಯಾದಿಗಳ ಸೂಕ್ಷ್ಮ ಪರಿಶೀಲನೆಯಿಂದ ದೊರೆಯಬಹುದಾದ ನಿಷ್ಕರ್ಷಗಳು. ಇಂಥ ಕಾರ್ಯದಿಂದ ರಾಯಣ್ಣನ ಹೋರಾಟದ ಸ್ವರೂಪ, ಪ್ರದೇಶ, ದಿನಾಂಕ, ಸ್ಥಳ ಮುಂತಾದ ಮಾಹಿತಿಗಳನ್ನು, ಖಚಿತವಾಗಿ ಅಧಿಕೃತವಾಗಿ ಕಂಡುಕೊಳ್ಳಲು ಬಹಳಷ್ಟು ಆಧಾರಗಳು ಲಭ್ಯವಾಗುತ್ತವೆ. ರಾಯಣ್ಣನನ್ನು ಕುರಿತು ಚರಿತ್ರೆ ಅಥವಾ ಬೇರೆ ಯಾವುದೇ ರೂಪದಲ್ಲಿ ಬರೆಯುವವರು ಈ ಬಗೆಯ ಆಕರಗಳನ್ನೆಲ್ಲ ಸರಿಯಾಗಿ ಹುಡುಕಿ ಬೆಳೆಸಿಕೊಳ್ಳಲೇ ಬೇಕು. ಇವುಗಳ ಜೊತೆಗೆ ಬೇರೆ ತತ್ಕಾಲೀನ ವಿಷಯಗಳನ್ನು ತಿಳಿಸಿಕೊಡುವ ಎಲ್ಲವುಗಳನ್ನೂ ಗಮನಿಸಿ ಪರ್ಯಾಲೋಚಿಸಬೇಕು. ಆನಂತರ ನಿಖರವಾದ ಸತ್ಯಾಂಶ ಶೋಧಿಸಬೇಕು. ಆ ಸತ್ಯಾಂಶಗಳನ್ನು ಚರಿತ್ರೆಯಲ್ಲಿ ನಿರೂಪಿಸಬೇಕು. ರಾಯಣ್ಣನನ್ನು ಕುರಿತು ಈಗ ಉಪಲಬ್ಧವಿರುವ ಚರಿತ್ರೆಗಳಲ್ಲಿ ಅಥವಾ ಇತರ ಕೃತಿಗಳಲ್ಲಿ ಇಂತಹ ಆಕರಗಳ ಸರಿಯಾದ ಉಪಯೋಗ ಮಾಡಿಕೊಳ್ಳುದಿರುವುದರಿಂದ, ಅವುಗಳಲ್ಲಿ ಹೆಚ್ಚು ಸಂಗತಿಗಳು, ಅವಾಸ್ತವ ಘಟನೆಗಳು, ಕಾಲ್ಪನಿಕ ವೈಭವೀಕರಣಗಳು, ಸ್ಥಾನ ಪಡೆದುಕೊಂಡಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಈವರೆಗೆ ಹೆಚ್ಚಿನ ಕೃತಿಗಳಲ್ಲಿ ರಾಯಣ್ಣನ ಬಗೆಗೆ ರೋಚಕವಾಗಿ, ಕೇವಲ ಅಭಿಮಾನ ಮತ್ತು ಬಗೆಬಗೆಯ ಹಿತಾಸಕ್ತಿಗಳಿಂದ ಚರಿತ್ರೆ

ಬರೆಯಲಾಗಿದೆಯೇ ಹೊರತು ವಾಸ್ತವತೆಗೆ, ಐತಿಹಾಸಿಕತೆಗೆ ಹೆಚ್ಚು ಗಮನ ಕೊಟ್ಟಂತಿಲ್ಲ. ಎಂದು ರಾಯಣ್ಣನನ್ನು ಕುರಿತು ಬಂದಿರುವಂತಹ ಕೃತಿಗಳಲ್ಲಿ ರಾಯಣ್ಣನನ್ನು ವೈಭವೀಕರಿಸಿರುವುದರ ಕುರಿತು ಈ ರೀತಿಯಲ್ಲಿ ಹೇಳಿದ್ದಾರೆ.

ರಾಯಣ್ಣನ ಕುಟುಂಬದ ವಿವರಗಳನ್ನು ಕುರಿತಂತೆ "ಕಂಪನಿ ಸರಕಾರದ ಅಧಿಕಾರಿಗಳು, ಸಂರಕ್ಷಣಾಧಿಕಾರ ಹೊಂದಿದವರು ರಾಯಣ್ಣಾದಿಗಳು ಅಡಗಿರುವ ಮೆಟ್ಟುಗಳ ಮಾಹಿತಿ ಪಡೆಯಲು, ಬಂಧಿಸಲು ಸಂಗೊಳ್ಳಿ ಮುಂತಾದ ಅವನಿಗೆ ಸಂಬಂಧಿತ ಗ್ರಾಮಗಳಿಗೆ ಹೋಗಿ, ವಿಚಾರಣೆ ಮಾಡುವ ಕಾರ್ಯವನ್ನು ಹೆಚ್ಚು ಸಲ ಮಾಡತೊಡಗಿದಾಗ ಅವರ ಕಾಟಕ್ಕೆ ಬೇಸತ್ತು ರಾಯಣ್ಣನ ಸಂಬಂಧ ಕಡಿದುಕೊಂಡುದಾಗಿಯೂ ಸಂಬಂಧವಿಲ್ಲವೆಂಬುದಾಗಿ ಹೇಳಿದಂಥ ಅಪ್ತರೂ ಇದ್ದಿರಬಹುದು. ಅಧಿಕಾರಿಗಳು ಮೇಲಿಂದ ಮೇಲೆ ಬಂದು ವಿವಿಧ ರೀತಿಯಿಂದ ಪೀಡಿಸಲಾರಂಭಿಸಿದಾಗ ಬೇಸತ್ತವರು ಊರು ಬಿಟ್ಟು ಸಮೀಪದ ನೇಗಿನಾಳ, ಬೈಲಹೊಂಗಲ ಮುಂತಾದೆಡೆ ಹೋಗಿರಲೂ ಬಹುದು. ರಾಯಣ್ಣನನ್ನು ಗಲ್ಲಿಗೇರಿಸಿ ಅವನ ಮತ್ತು ಅವನ ಕುಟುಂಬದವರೆಲ್ಲರ ಎಲ್ಲ ಬಗೆಯ ಆಸ್ತಿಪಾಸ್ತಿಯನ್ನು ಸರಕಾರ ವಶಪಡಿಸಿಕೊಂಡು ಬಿಟ್ಟಿತು. ಅವನ ಕೂಡುಕುಟುಂಬದಲ್ಲಿಯ ಎಲ್ಲರೂ ನಿರಾಶ್ರಿತರಾಗಿ ದಿಕ್ಕಿಲ್ಲದಂತಾದರು. ಪರಿಸ್ಥಿಯ ಒತ್ತಡದ ಅನಿವಾರ್ಯತೆಗೊಳಗಾಗಿ ಪೂರ್ವಜರ ಮೂಲ ನೆಲೆಯ ಪರಿಚಯದ ಕಾರಣದಿಂದಾಗಿ ಬದುಕಿಬಾಳಲು ಅನುಕುಲವೆಂದು ಸಂಗೊಳ್ಳಿ ಬಿಟ್ಟು ಬೈಲಹೊಂಗಲಕ್ಕೆ ಹೋಗಿರಬಹುದಾಗಿದೆ. ಈಗಲೂ ಅಲ್ಲಿ ರೋಗಣ್ಣವರ ಹೆಸರಿನವರು ನೆಲೆಸಿರುವುದಾಗಿ ತಿಳಿದು ಬರುತ್ತದೆ."೩ ರಾಯಣ್ಣ ಮನೆ, ಮಾರು, ಬಂಧುಬಳಗವನ್ನು ಬಿಟ್ಟು ಹೋರಾಟಕ್ಕೆ ಹೋದ ಸಂದರ್ಭದಲ್ಲಿ ಬ್ರಿಟಿಷರು ರಾಯಣ್ಣನನ್ನು ಹುಡುಕತೊಡಗಿದರು ಅಂತಹ ಸಂದರ್ಭದಲ್ಲಿ ರಾಯಣ್ಣನ ಅಪ್ತರು ಸಂಕಷ್ಟಕ್ಕೆ ಸಿಲುಕಿದರು. ಬಂಧು ಬಳಗದವರು ಬ್ರಿಟಿಷರು ರಾಯಣ್ಣನ ಕುರಿತು ಮಾಹಿತಿಯನ್ನು ಪಡೆಯುವಂತಹ ಸಂದರ್ಭದಲ್ಲಿ ರಾಯಣ್ಣನ ಅಪ್ತರೂ ಸಹ ತಮ್ಮ ಮನೆ, ಮಾರುಗಳನ್ನು ತೊರೆದು ಬೇರೆಡೆ ಸಾಗಿರಬಹುದು.

ಈ ಕೃತಿಯ ಮುನ್ನುಡಿಯಲ್ಲಿ ಸಂಗೊಳ್ಳಿ ರಾಯಣ್ಣನ ಕುರಿತಾಗಿ ಇಲ್ಲಿಯವರೆಗೆ ಬಂದ ಕೃತಿಗಳಿಗಿಂತ ಈ ಕೃತಿ ವಿಭಿನ್ನವಾದುದು ಹಾಗೂ ಅಧಿಕೃತವಾದದ್ದು. ತಲಸ್ಪರ್ಶಿ ಅಧ್ಯಯನ ಹಾಗೂ ಸಂಶೋಧನೆಯ ಮೂಲಕ ವೈಭವೀಕರಣ, ಕಾಲ್ಪನಿಕ ಘಟನೆಗಳಿಂದ ಇದು ಬಹುದೂರ. ಇಲ್ಲಿ ರಾಯಣ್ಣನ ನೈಜ ವ್ಯಕ್ತಿತ್ವ ದಾಖಲಾಗಿದೆ. ಇದು ಪೊ. ಜ್ಯೋತಿ ಹೊಸೂರ ಅವರ ೩೦ ವರ್ಷಗಳ ಅಧ್ಯಯನ ಹಾಗೂ ಸಂಶೋಧನೆಯ ಪ್ರತಿಫಲ. ರಾಯಣ್ಣನ ಹೋರಾಟದ ರೀತಿ–ನೀತಿಗಳು ಬಹು ರೋಚಕ ರೀತಿಯಲ್ಲಿ ಮಡುಗಟ್ಟಿ ನಿಂತಿವೆ. ಹೋರಾಟಕ್ಕೆ ಸಿಕ್ಕ ಅವಧಿ ಅತ್ಯಲ್ಪವಾದರೂ ಈತನ ಉಗ್ರ ಹೋರಾಟವು ಮಹಾನ್ ಕ್ರಾಂತಿಕಾರಿಯನ್ನಾಗಿ ಮಾಡಿತು ಎಂಬ

ವಿಷಯವನ್ನು ಈ ಕೃತಿಯು ಅನಾವರಣಗೊಳಿಸುತ್ತದೆ. ಇಂತಹ ಅನೇಕ ಅಂಶಗಳನ್ನು ತಿಳಿಯಲು ಈ ಕೃತಿ ಸಹಾಯಕವಾಗುತ್ತದೆ.

ಭಾರತದ ಸ್ವಾತಂತ್ರ್ಯ ಹೋರಾಟಗಾರರಿಗೆ ರಾಯಣ್ಣ ಹೇಗೆ ಸ್ಫೂರ್ತಿಯಾಗಿದ್ದ ಎನ್ನುವುದರ ಕುರಿತು "ಸಂಗೊಳ್ಳಿ ರಾಯಣ್ಣನ ಹೋರಾಟ ಪ್ರವೃತ್ತಿಯ ಪ್ರಭಾವ ಕಿತ್ತೂರು ನಾಡಿನಲ್ಲಿ ಸದಾಕಾಲವೂ ಬೂದಿಮುಚ್ಚಿದ ಕೆಂಡದಂತೆ ಇತ್ತು. ಸ್ವಾತಂತ್ರ್ಯ ಚಳುವಳಿ ಭಾರತದಲ್ಲಿ ಹೆಚ್ಚು ಪುಟಗೊಂಡಾಗ ಕಿತ್ತೂರು ನಾಡಿನಲ್ಲಿ ಮತ್ತೆ ರಾಯಣ್ಣನ ಆ ಹೋರಾಟದ ನೆನಪು ಜನತೆಯಲ್ಲಿ ಜಾಗ್ರತಿಯನ್ನು ಮೂಡಿಸಿತು. ರಾಯಣ್ಣನ ಬಗೆಗಿನ ಬಯಲಾಟಗಳು ಮತ್ತು ಪ್ರಾಸಂಗಿಕ ಹಬ್ಬ ಹರಿದಿನಗಳಲ್ಲಿ ಹಾಕಲಾಗುತ್ತಿದ್ದ ಸೋಗು ಇತ್ಯಾದಿಗಳೆಲ್ಲ ಜನತೆಯಲ್ಲಿ ಸ್ವಾಭಿಮಾನ ಹಾಗೂ ದೇಶಾಭಿಮಾನ ಕೆರಳಿಸುವ ಕಾರ್ಯ ಮಾಡತೊಡಗಿದವು. ಅಸಹಕಾರ ಚಳುವಳಿ, ಬ್ರಿಟೀಷ್ ಸರಕಾರದ ವಿರುದ್ಧದ ಹೋರಾಟಗಳು ರಾಯಣ್ಣನ ಕಾರ್ಯ ನೆನಪಿಸಲಾರಂಬಿಸಿದವು. ವಾಲಿ ಚೆನ್ನಪ್ಪನಂಥ ಉಗ್ರ ಸ್ವಾತಂತ್ರ್ಯ ಹೋರಾಟಗಾರರು ಗಾಂಧೀಜಿ ಮುಂತಾದವರಿಗಿಂತ ಹೆಚ್ಚಿನ ಸ್ಫೂರ್ತಿ ತಮಗೆ ಸಂಗೊಳ್ಳಿ ರಾಯಣ್ಣನ ಹೋರಾಟದ ಪ್ರಭಾವ ಎಷ್ಟೊಂದು ದೀರ್ಘ ಪರಿಣಾಮಕಾರಿಯಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಕೊನೆಗೊಮ್ಮೆ ಸ್ವಾತಂತ್ರ್ಯ ಪ್ರಾಪ್ತಿ ಮತ್ತು ಪ್ರಜಾರಾಜ್ಯದ ಸ್ಥಾಪನೆಯೊಂದಿಗೆ ಅವನ ಬಲಿದಾನ ಸಾರ್ಥಕವಾಯಿತೆಂಬುದು ಜನಸಾಮಾನ್ಯರ ವಿಜಯದ ಸಂಕೇತ. ಸಂಗೊಳ್ಳಿ ರಾಯಣ್ಣನೆಂದರೆ ಜನಸಾಮಾನ್ಯರ ಶಕ್ತಿಯಲ್ಲಿಯ ಸತ್ತ್ವದ ಪ್ರತೀಕ"[೪] ಭಾರತದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಉತ್ತರ ಕರ್ನಾಟಕದ ಜನತೆಗೆ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿದ್ದ ನಾಯಕರಾಗಿದ್ದಂತಹ ಗಾಂಧಿ, ಸುಭಾಷ್ ಚಂದ್ರಬೋಸ್ ಇಂತವರು ಮಾದರಿಯಾಗದೆ, ೧೮೨೪ರ ರಿಂದ ೧೮೩೦ರ ವರೆಗೆ ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಕಿತ್ತೂರು ರಾಣಿ ಚೆನ್ನಮ್ಮ ಹಾಗೂ ರಾಯಣ್ಣರು ಪ್ರೇರಣೆಯಾಗಿರುವುದನ್ನು ಕಾಣುತ್ತೇವೆ. ಕಿತ್ತೂರು ಸಂಸ್ಥಾನಕ್ಕೆ ರಾಯಣ್ಣನ ಕ್ರಾಂತಿಕಾರಿ ಹೋರಾಟದ ವಿಷಯವನ್ನು ತಿಳಿಯಬೇಕಾದರೆ ಈ ಕೃತಿಯು ಬಹಳ ಮುಖ್ಯವಾಗುತ್ತದೆ.

ಎಂ ಬಿ ನೇಗಿನಹಾಳ ಅವರ ಸಂಶೋಧನಾ ಲೇಖನಗಳ ಸಂಗ್ರಹವಾದ 'ನೇಗಿನಹಾಳ ಪ್ರಬಂಧಗಳು' ಎಂಬ ಕೃತಿಯಲ್ಲಿ ರಾಯಣ್ಣನನ್ನು ಕುರಿತು 'ಜಾನಪದದಲ್ಲಿ ಸಂಗೊಳ್ಳಿ ರಾಯಣ್ಣ' ಎನ್ನುವಂತಹ ಲೇಖನವಿದೆ. ಈ ಲೇಖನದಲ್ಲಿ ರಾಯಣ್ಣನ ಕುರಿತು ಹಾಗೂ ಕಿತ್ತೂರು ಸಂಸ್ಥಾನದ ಕುರಿತು ಇರುವಂತಹ ಜನಪದ ಸಾಹಿತ್ಯದ ಮೂಲಗಳನ್ನು ಹೇಳುತ್ತಾ, ಕಿತ್ತೂರಿನಲ್ಲಿ ನಡೆದಂತಹ ಹೋರಾಟದ ಕುರಿತು ಸಂಕ್ಷಿಪ್ತವಾಗಿ ಹೇಳಿ, ರಾಯಣ್ಣನು ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸುವುದಕ್ಕಾಗಿ ಹೋರಾಟವನ್ನು ಮಾಡಿದ. ಕಿತ್ತೂರಿನ ಹೋರಾಟವನ್ನು ಕುರಿತು ಜನಪದ ಶೋಧ ನಡೆದಿದ್ದರೂ ಸಹ ಇನ್ನು ನಡೆಯಬೇಕಾಗಿರುವುದರ ಕುರಿತು ಹೇಳಿದ್ದಾರೆ. ಬೆಳಗಾವಿ ಜಿಲ್ಲೆಯಲ್ಲಿ ರಾಯಣ್ಣನ ಕುರಿತ ಹೆಚ್ಚಿನ ಐತಿಹ್ಯಗಳಿರುವುದನ್ನು ಮತ್ತು ಚರಿತ್ರೆಯ ದೃಷ್ಟಿಯಲ್ಲಿ

ಲಿಖಿತ ಆಧಾರಗಳು ದೊರೆಯದ ಸಂದರ್ಭದಲ್ಲಿ ಈ ಐತಿಹ್ಯಗಳೇ ಸತ್ಯವಾಗಿರುತ್ತವೆ. ಇಂತಹ ಐತಿಹ್ಯಗಳು ರಾಯಣ್ಣನ ಚರಿತ್ರೆಯನ್ನು ತಿಳಿಯಲು ತುಂಬ ಮಹತ್ವದ ಪಾತ್ರವನ್ನು ವಹಿಸುತ್ತದೆ. ರಾಯಣ್ಣನ ಚರಿತ್ರೆಯನ್ನು ಕಟ್ಟಿಕೊಡುವ ಮುಖ್ಯ ಆಕರಗಳೆಂದರೆ ಮೌಖಿಕ ಆಕರಗಳು. ರಾಯಣ್ಣನಿಗೆ ಸಂಬಂಧಿಸಿದ ಈ ಆಕರಗಳನ್ನು ಸಂಗ್ರಹಿಸುವುದು ನಮ್ಮೆಲ್ಲರ ಹೊಣೆ.

ಬಸವರಾಜ ಮಲಶೆಟ್ಟಿ ಅವರ 'ಡಾ ಬಸವರಾಜ ಮಲಶೆಟ್ಟಿ ಅವರ ಆಯ್ದ ಲೇಖನಗಳು' ಎನ್ನುವ ಕೃತಿಯಲ್ಲಿ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ 'ಸಂಗೊಳ್ಳಿ ರಾಯಣ್ಣ : ಇತಿಹಾಸ ಮತ್ತು ಜನಪದ ಸಾಹಿತ್ಯ 'ಕಿತ್ತೂರ ಈರವ್ವನನ್ನು ಕುರಿತು ಇತಿಹಾಸ ಮತ್ತು ಜನಪದ ಸಾಹಿತ್ಯ' ಎನ್ನುವ ಎರಡು ಲೇಖನಗಳಿವೆ. ಕಿತ್ತೂರು ಸಂಸ್ಥಾನದ ಇತಿಹಾಸವನ್ನು ಮತ್ತು ರಾಯಣ್ಣನ ಕುರಿತು ಈ ಲೇಖನದಲ್ಲಿ ಬ್ರಿಟಿಷರು ಕಿತ್ತೂರನ್ನು ವಶಪಡಿಸಿಕೊಂಡ ನಂತರದ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುತ್ತದೆ. ಕಿತ್ತೂರು ಬ್ರಿಟಿಷರ ವಶವಾದ ನಂತರ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಲು ಸಮಾನ ಮನಸ್ಕರೊಂದಿಗೆ ಸೇರಿ ಹೋರಾಟಕ್ಕೆ ಸಿದ್ಧರಾಗುತ್ತಾರೆ. ಇಂತಹ ಸಂದರ್ಭದಲ್ಲಿ ಸ್ವಾಭಿಮಾನಿಯಾದ ರಾಯಣ್ಣ ಹಾಗೂ ಕಿತ್ತೂರಿನ ಅನೇಕರು ಕಿತ್ತೂರನ್ನ ಸ್ವಾತಂತ್ರ್ಯಗೊಳಿಸಲು ಬ್ರಿಟಿಷರ ಕಚೇರಿಗಳ ಮೇಲೆ ದಾಳಿಗಳನ್ನ ಮಾಡುತ್ತಾರೆ. ಇಂತಹ ಘಟನೆಗಳ ಕುರಿತು ಸಂಶೋಧನಾತ್ಮಕ ರೀತಿಯಲ್ಲಿ ಜನಪದ ಸಾಹಿತ್ಯವನ್ನು ಬಳಸಿಕೊಂಡಿರುವುದು ಈ ಲೇಖನದಲ್ಲಿ ಕಂಡುಬರುತ್ತದೆ.

ರಾಯಣ್ಣನ ಹೋರಾಟಕ್ಕೆ ಮೂಲ ಕಾರಣವ ಕುರಿತು ಈ ಕೆಳಗಿನಂತೆ ಹೇಳಿದ್ದಾರೆ. "ಕಿತ್ತೂರು ಅರಮನೆಯ ನಿಷ್ಠಾವಂತ ಯೋಧನಾಗಿದ್ದ ರಾಯಣ್ಣ ಸಂಗೊಳ್ಳಿಯ ಹಳಬನಾಗಿದ್ದ. ಅವನದು ವೀರಯೋಧರ ಮನೆತನ. ರಕ್ತಮಾನ್ಯದ ಹೊಲ ಆ ಮನೆತನಕ್ಕೆ ಉಂಬಳಿಯಾಗಿ ಬಂದಿತ್ತು. ಒಬ್ಬ ಮಾಮೂಲಿ ನಿವೃತ್ತ ಯೋಧನಾಗಿದ್ದ ರಾಯಣ್ಣ ಧೀಮಂತ ಬಂಡಾಯಗಾರನಾಗಿ ರೂಪುಗೊಂಡಿದ್ದು, ಆಕಸ್ಮಿಕವೆನಿಸಿದೆ. ಹಳಬಕಿ ಮಾಡಿಕೊಂಡು ತನ್ನಷ್ಟಕ್ಕೆ ತಾನಿದ್ದ ರಾಯಣ್ಣನ ಸ್ವಾಭಿಮಾನವನ್ನು ಸಂಗೊಳ್ಳಿಯ ಕುಲಕರ್ಣಿ ಬಾಳಣ್ಣ ಕೆಣಕಿದ. ಇದ್ದಕ್ಕಿದ್ದಂತೆ ರಾಯಣ್ಣನ ರಕ್ತಮಾನ್ಯದ ಹೊಲಕ್ಕೆ ಕಂದಾಯ ಹೇರಿ ಅದನ್ನು ತಕ್ಷಣವೇ ಸಂದಾಯ ಮಾಡಬೇಕೆಂದು ಒತ್ತಾಯಿಸಿದ ಮತ್ತು ಅವಮಾನಿಸಿದ. ರಾಯಣ್ಣನ ಸಹನೆ ಮೀರಿತು. ಕುಲಕರ್ಣಿಯ ಜೋಳದ ಹೊಲ ಸುಟ್ಟು ತಡೆಯಲು ಬಂದ ಬಾಳಣ್ಣನ ಬಂಟರನ್ನು ಗಾಯಗೊಳಿಸಿ ಊರು ಬಿಟ್ಟ."[3] ರಾಯಣ್ಣನ ಹೋರಾಟಕ್ಕೆ ಮುಖ್ಯವಾದ ಕಾರಣವನ್ನು ಕುರಿತು ಬ್ರಿಟಿಷರು ಇದ್ದಕಿದ್ದಂತೆ ಹೆಚ್ಚಿನ ಕಂದಾಯವನ್ನು ರೈತರ ಮೇಲೆ ಹೇರಿದ್ದು. ಹಾಗೆಯೇ ಗ್ರಾಮಗಳಲ್ಲಿ ಅಧಿಕಾರವನ್ನು ವಹಿಸಿಕೊಂಡ ಗೌಡ, ಕುಲಕರ್ಣಿಗಳು ಜನತೆಯ ಮೇಲೆ ಅನ್ಯಾಯ, ದರ್ಪ ದೌರ್ಜನ್ಯವನ್ನು ನಡೆಸುತ್ತಿದ್ದರು. ಸಂಗೊಳ್ಳಿಯ ಕುಲಕರ್ಣಿಯ ರೀತಿಯನ್ನು ಕಂಡು ರಾಯಣ್ಣ ಬ್ರಿಟಿಷರ ವಿರುದ್ಧ ಹೋರಾಟ ಮಾಡುವುದಕ್ಕೆ ಮುಂದಾಗುತ್ತಾನೆ.

ಬೆಳವಾಡಿ ಮಂಜುನಾಥ ಅವರು ಸಂಪಾದಿಸಿರುವ 'ಸತ್ಯವಿಠಲ ವಿರಚಿತ ಸಂಗೊಳ್ಳಿ ರಾಯಣ್ಣ ವೀರಕಥಾ' ಲಾವಣಿಗಳನ್ನು ಸಂಪಾದಿಸಿದ್ದಾರೆ. ಬೆಳವಡಿ ಮಂಜುನಾಥ ಅವರು ಸುದೀರ್ಘವಾದ ಪ್ರಸ್ತಾವನೆಯನ್ನು ಬರೆದು, ಲಾವಣಿಗಳು ಕೇವಲ ಮನರಂಜನೆಗಾಗಿ ಅಥವಾ ಯಾವುದೇ ಒಂದು ವಸ್ತು ಅಥಾವ ವ್ಯಕ್ತಿಗೆ ಸೀಮಿತವಾಗಿರದೆ ಚರಿತ್ರೆಯ ಜೊತೆಗೆ ಲಾವಣಿಗಳು ರಾಯಣ್ಣ ಜನತೆಯಲ್ಲಿ ಸ್ವಾತಂತ್ರ್ಯ ಹಾಗೂ ಸ್ವಾಭಿಮಾನದ ಸಂಕೇತವಾಗಿ ಕಾಣಿಸಿಕೊಂಡಿದ್ದಾನೆ. ರಾಯಣ್ಣನನ್ನು ಕುರಿತು ಬಂದಿರುವಂತಹ ಜನಪದ ಸಾಹಿತ್ಯವು ರಾಯಣ್ಣನ ಸಮಕಾಲೀನರಿಂದಲೇ ರಚನೆಯಾಗಿರುವುದನ್ನು ನಾವು ಕಾಣುತ್ತೇವೆ. ರಾಯಣ್ಣನ ಹೋರಾಟದ ಪ್ರತಿಯೊಂದು ಸನ್ನಿವೇಶದ ಚಿತ್ರಣವನ್ನು ಜನಪದ ಸಾಹಿತ್ಯದ ಮೂಲಕ ತಿಳಿಯಬಹುದು. ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲು ಸಹಕಾರಿಯಾಗುತ್ತವೆ ಎಂದು ಹೇಳಿದ್ದಾರೆ. ಲಾವಣಿಗಳನ್ನು ಪೂರ್ವಾರ್ಧ ಮತ್ತು ಉತ್ತರಾರ್ಧ ಎಂದು ಗುರುತಿಸಿಕೊಂಡು, ಪೂರ್ವಾರ್ಧದಲ್ಲಿ ಕಿತ್ತೂರಿನ ಇತಿಹಾಸ ಹಾಗೂ ರಾಯಣ್ಣನ ಮೊದಲ ಚಿತ್ರಣವಿದ್ದು. ಉತ್ತರಾರ್ಧದಲ್ಲಿ ರಾಯಣ್ಣನ ಹೋರಾಟವನ್ನು ಚಿತ್ರಿಸಲಾಗಿದೆ.

ತಿ. ತಾ ಶರ್ಮಾ ಅವರ 'ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ' ಎನ್ನುವ ಕೃತಿಯಲ್ಲಿ ಕಿತ್ತೂರು ಹಾಗೂ ರಾಯಣ್ಣನಿಗೆ ಸಂಬಂಧಿಸಿದಂತೆ ಎರಡು ಲೇಖನಗಳಿವೆ. 'ಕಿತ್ತೂರು ರಾಣಿ ಚೆನ್ನಮ್ಮ' ಹಾಗೂ 'ಸಂಗೊಳ್ಳಿ ರಾಯಣ್ಣ' ಈ ಎರಡೂ ಲೇಖನಗಳು ಕಿತ್ತೂರು ಸಂಸ್ಥಾನದ ಸಂಕ್ಷಿಪ್ತವಾದ ಚರಿತ್ರೆಯೊಂದಿಗೆ, ಬ್ರಿಟಿಷರು ಕಿತ್ತೂರನ್ನ ವಶಪಡಿಸಿಕೊಳ್ಳಲು ದತ್ತು ಪುತ್ರರಿಗೆ ಹಕ್ಕಿಲ್ಲ ಎಂಬ ನಿಯಮದ ಮೇರೆಗೆ ಕಿತ್ತೂರನ್ನೂ ವಶಪಡಿಸಿಕೊಳ್ಳಲು ಮುಂದಾಗುತ್ತಾರೆ. ರಾಣಿ ಚೆನ್ನಮ್ಮ ಆ ನೀತಿಯನ್ನ ವಿರೋಧಿಸುತ್ತಾಳೆ. ಆದರೆ ಬ್ರಿಟಿಷರು ಕಿತ್ತೂರನ್ನ ವಶಪಡಿಸಿಕೊಳ್ಳಲು ಮುಂದಾಗುತ್ತಾರೆ. ಧಾರವಾಡದ ಅಂದಿನ ಪೋಲಿಟಿಕಲ್ ಏಜೆಂಟ್ ಥ್ಯಾಕರೆಯು ಕಿತ್ತೂರನ್ನ ವಶಪಡಿಸಿಕೊಳ್ಳಲು ಬರುತ್ತಾನೆ. ಆಗ ರಾಣಿ ಚೆನ್ನಮ್ಮನ ನೇತೃತ್ವದಲ್ಲಿ ಕಿತ್ತೂರು ಸಂಸ್ಥಾನವು ಬ್ರಿಟಿಷರ ವಿರುದ್ಧ ಹೋರಾಟವನ್ನು ಮಾಡಿ ಜಯಗಳಿಸುತ್ತಾರೆ. ಭಾರತದಾದ್ಯಂತ ತಮ್ಮ ಸಾಮ್ರಾಜ್ಯವನ್ನ ವಿಸ್ತರಿಸಿದ್ದ ಬ್ರಿಟಿಷರಿಗೆ ಅವಮಾನವಾದಂತಾಗಿ ಮತ್ತೇ ಕಿತ್ತೂರಿನವರನ್ನೆ ಬಳಸಿಕೊಂಡು ಕುತಂತ್ರದ ಮೂಲಕ ಕಿತ್ತೂರನ್ನ ವಶಪಡಿಸಿಕೊಳ್ಳತ್ತಾರೆ.

ಕ್ಯಾತನಹಳ್ಳಿ ರಾಮಣ್ಣ ಅವರು ಸಂಪಾದಿಸಿರುವ 'ಫ್ಲೀಟರು ಸಂಗ್ರಹಿಸಿದ ಲಾವಣಿಗಳು' ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ ೧೯೯೧ ರಲ್ಲಿ ಎರಡನೆಯ ಮುದ್ರಣ ಪ್ರಕಟಿಸಿದೆ. ರಾಯಣ್ಣನಿಗೆ ಸಂಬಂಧಿಸಿದಂತೆ ಬಹಳ ಮುಖ್ಯವಾದ ಕೃತಿಗಳಲ್ಲಿ ಇದು ಒಂದು. ರಾಯಣ್ಣನ ಅಂತ್ಯದ ನಂತರ ರಾಯಣ್ಣನ ಕುರಿತು ಜನರು ಆಡುತ್ತಿದ್ದಂತಹ ಹಾಡುಗಳನ್ನು ಜೆ.ಎಫ್ ಫ್ಲೀಟ್‌ರವರು ಸಂಗ್ರಹಿಸಿ ಇಂಡಿಯನ್ ಆಂಟಿಕ್ವರಿ ಪತ್ರಿಕೆಯಲ್ಲಿ ಪ್ರಕಟಿಸಿದ್ದಂತಹ ಲಾವಣಿಗಳನ್ನು ಕ್ಯಾತನಹಳ್ಳಿ ರಾಮಣ್ಣನವರು ಸುದೀರ್ಘ ಪ್ರಸ್ತಾವನೆಯನ್ನು ಬರೆದು ಲಾವಣಿಗಳನ್ನು

ಕನ್ನಡಕ್ಕೆ ಅನುವಾದಿಸಿದ್ದಾರೆ. ಫ್ಲೀಟ್‌ರವರು ಸಂಗ್ರಹಿಸಿದ ಲಾವಣಿಗಳು ರಾಯಣ್ಣನಿಗೆ ಸಂಬಂಧಿಸಿದಂತೆ ಸಂಗೊಳ್ಳಿ 'ರಾಯಣ್ಣ ದಂಗೆ' ಲಾವಣಿಯು ಒಂದಾಗಿದೆ. ರಾಯಣ್ಣನ ಕುರಿತು ಜನಪದ ಸಾಹಿತ್ಯದ ಬಗ್ಗೆ ಮೊದಲು ಸಂಗ್ರಹಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಅವರು ತಮ್ಮ ಕೆಲಸದ ಜೊತೆಗೆ ಶಾಸನ, ಕೃಷಿಯತ್ತು, ಐತಿಹ್ಯಗಳನ್ನು ಹಾಗೂ ಮೌಖಿಕ ಸಾಹಿತ್ಯವನ್ನು ಭಾರತೀಯರಲ್ಲಿ ಜಾಗೃತಿ ಮೂಡಿಸುವ ಕೆಲಸ ಮಾಡಿರುವುದನ್ನು ಕಾಣಬಹುದು.

ಕ್ಯಾತನಹಳ್ಳಿ ರಾಮಣ್ಣನವರು ಸುದೀರ್ಘ ಪ್ರಸ್ತಾವನೆಯನ್ನು ಕೊಟ್ಟು ಫ್ಲೀಟ್‌ರವರ ಉದ್ದೇಶ ಪ್ರಸ್ತುತ ರಾಯಣ್ಣನಿಗೆ ಸಂಬಂಧಿಸಿದ ಮಾಹಿತಿಗಳನ್ನು ನೀಡಿದ್ದಾರೆ. ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸುವುದಕ್ಕಾಗಿ ಬ್ರಿಟಿಷರ ವಿರುದ್ಧ ಹೋರಾಟ ಮಾಡಿದ ಕತೆಯನ್ನು, ಜನರು ರಾಯಣ್ಣನ ಶೌರ್ಯ, ವೀರತನ, ಸಾಹಸ ಕಿತ್ತೂರಿನ ಚರಿತ್ರೆ, ಚೆನ್ನಮ್ಮನ ಹೋರಾಟದ ಜೊತೆಗೆ ರಾಯಣ್ಣನ ಒಡನಾಟದ ಕುರಿತು ಜನರು ಆಡುತ್ತಿದ್ದಂತಹ ಹಾಡುಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ರಾಯಣ್ಣನಿಗೆ ಸಂಬಂಧಿಸಿದಂತೆ ನಂಬುವುದಕ್ಕೆ ಹಾಗೂ ಸತ್ಯಕ್ಕೆ ಹತ್ತಿರವಾದಂತಹ ಮಾಹಿತಿಗಳೆಂದು ಈ ಲಾವಣಿಗಳನ್ನು ಕರೆಯಬಹುದು. ಏಕೆಂದರೆ ಫ್ಲೀಟ್‌ರವರು ರಾಯಣ್ಣನ ಬಗ್ಗೆ, ಹೋರಾಟದ ಬಗ್ಗೆ ಮಾಹಿತಿಯನ್ನು ತಿಳಿದಿದ್ದ ಹಾಗೂ ರಾಯಣ್ಣನ ಸಮಕಾಲೀನವಾಗಿರುವುದರಿಂದ ಈ ಲಾವಣಿಗಳಲ್ಲಿ ರಾಯಣ್ಣನ ನೈಜ ಚಿತ್ರಣವಿದೆ ಎನಿಸುತ್ತದೆ. ನಂತರದ ಲಾವಣಿಗಳು ಜನರಿಂದ ಜನರಿಗೆ ತಲುಪುವಾಗ ಅನೇಕ ಬದಲಾವಣೆಯೊಂದಿಗೆ ರಾಯಣ್ಣನನ್ನು ಹೆಚ್ಚು ವೈಭವೀಕರಿಸಲಾಗಿದೆ. ಕ್ಯಾತನಹಳ್ಳಿ ರಾಮಣ್ಣನವರು ಸಂಗ್ರಹಿಸುವ ಈ ಕೃತಿಯು ಮಹತ್ವದಾಗಿದೆ ಎಂದು ಹೇಳಬಹುದು.

ನಿಂಗಣ್ಣ ಸಣ್ಣಕ್ಕಿ ಯವರ 'ಸಂಗೊಳ್ಳಿ ರಾಯಣ್ಣನ ಪರಿವಾರ' ಈ ಕೃತಿಯು ಸಂಗೊಳ್ಳಿ ರಾಯಣ್ಣನ ವಂಶಾವಳಿಯ ಕುರಿತು ಹೇಳಿದ್ದಾರೆ. ನಿಂಗಣ್ಣ ಸಣ್ಣಕ್ಕಿಯವರು ಹೆಳವರಿಂದ ಹಾಗೂ ದಾಖಲೆಗಳ ಸಹಾಯದಿಂದ ರಾಯಣ್ಣನ ಪರಿವಾರದ ಕುರಿತು ಸಂಗೊಳ್ಳಿ ರಾಯಣ್ಣನ ಪರಿವಾರ ಎಂಬ ಕೃತಿಯಲ್ಲಿ ಹೆಳವರಿಂದ ಸಂಗ್ರಹಿಸಿದ ರಾಯಣ್ಣನ ವಂಶಾವಳಿ ಪಟ್ಟಿಯನ್ನು ಕೃತಿಯ ಆರಂಭದಲ್ಲಿಯೇ ನೀಡಿ ರಾಯಣ್ಣನ ಕುರಿತು ಬಂದಿರುವ ಲಾವಣಿಗಳನ್ನು ಸಂಗ್ರಹಿಸಿದ್ದಾರೆ. ಜೊತೆಗೆ ರಾಯಣ್ಣನ ಜೊತೆಗೆ ಹೋರಾಟದಲ್ಲಿ ಭಾಗಿಯಾಗಿ ೧೮೩೧ರಲ್ಲಿ ರಾಯಣ್ಣನ ಜೊತೆಗೆ ಗಲ್ಲಿಗೇರಿದವರ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ರಾಯಣ್ಣನ ಜೀವನದ ಹೋರಾಟ ಜನಪದರ ನಾಲಿಗೆಗಳಿಂದ, ಕೆಲವು ದಾಖಲೆಗಳಿಂದ ಕಿತ್ತೂರಿನ ಹಾಗೂ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ಐತಿಹಾಸಿಕ ಅಂಶಗಳನ್ನು ತಿಳಿಯಲು ಈ ಕೃತಿಯು ಸಹಾಯಕವಾಗುತ್ತದೆ.

ಈ ಕೃತಿಯಲ್ಲಿ ಲಾವಣಿಗಳ ನಂತರ ಹಿನ್ನುಡಿ, ಗಲ್ಲಿಗೇರಿದವರ ಪರಿವಾರ, ಕಿತ್ತೂರು ರಾಜ್ಯದ ನಕಾಶೆ, ಪರಿವಾರಕ್ಕೆ ಪುರವಣಿ, ದೇಶ ಮರೆತ ಸಂಗೊಳ್ಳಿ ರಾಯಣ್ಣನ ಮನೆತನ, ನಾವು ರಕ್ಷಿಸಬೇಕಾದ ವೀರಯೋಧನ ವಂಶ, ಸಂಗೊಳ್ಳಿ ರಾಯಣ್ಣನ ಆತ್ಮಾರ್ಪಣೆಯ ವೀರಗಾಥೆ ಎಂಬ ಅಂಶಗಳ ವಿವರಗಳನ್ನು ನೀಡಿದ್ದಾರೆ.

ಸಂಗೊಳ್ಳಿ ರಾಯಣ್ಣ ಅಂದಿನ ರಾಜಕೀಯ ಹಾಗೂ ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ಹೋರಾಟವನ್ನು ಮಾಡಿದ್ದಾನೆ. ಇಂತಹ ಸ್ವಾತಂತ್ರ ಹೋರಾಟವು ಮುಂದೆ ಭಾರತದಿಂದ ಬ್ರಿಟಿಷರನ್ನು ಹೊರಹಾಕುವಂತಹ ಹಾಗೂ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಹೋರಾಟಗಾರರಿಗೆ ರಾಯಣ್ಣನು ಸ್ಫೂರ್ತಿಯಾಗಿದ್ದನ್ನು ಕಾಣಬಹುದು. ಇಂತಹ ಸ್ವಾತಂತ್ರ್ಯ ಹೋರಾಟದ ವ್ಯಕ್ತಿಯಾದ ರಾಯಣ್ಣನ ಮನೆತನವನ್ನು ಹಾಗೂ ಇತರೆ ವಿಚಾರಗಳ ಬಗ್ಗೆ ಜನರಲ್ಲಾಗಲಿ, ಸರ್ಕಾರಕ್ಕಾಗಲಿ ಕಾಳಜಿ ಇಲ್ಲ ಎಂಬುದರ ಕುರಿತು ಮಾಹಿತಿಯನ್ನು ನೀಡಿದ್ದಾರೆ. ಒಟ್ಟಾರೆಯಾಗಿ ನಿಂಗಣ್ಣ ಸಣ್ಣಕ್ಕಿಯವರ ಸಂಗೊಳ್ಳಿ ರಾಯಣ್ಣನ ಪರಿವಾರ ಕೃತಿಯು ರಾಯಣ್ಣನಿಗೆ ಸಂಬಂಧಿಸಿದಂತೆ, ಮನೆತನಕ್ಕೆ ಸಂಬಂಧಿಸಿದಂತೆ ಹೋರಾಟದ ಕುರಿತು ಸ್ವಾತಂತ್ರ್ಯ ನಂತರ ಹಾಗೂ ಪ್ರಸ್ತುತ ದಿನಗಳಲ್ಲಿ ಯಾವ ರೀತಿಯಲ್ಲಿ ರಾಯಣ್ಣನನ್ನು ಗುರುತಿಸುತ್ತಿದ್ದಾರೆ ಎನ್ನುವುದನ್ನು ತಿಳಿಯಲು ಈ ಕೃತಿಯು ಸಹಾಯಕವಾಗುತ್ತದೆ.

ಸೂರ್ಯನಾಥ ಕಾಮತ್ ಸಂಪಾದಿಸಿರುವ 'ಸಂಗೊಳ್ಳಿ ರಾಯಣ್ಣ' ಎಂಬ ಕೃತಿಯಲ್ಲಿ ಜನಪದ 'ಸಾಹಿತ್ಯದಲ್ಲಿ ಮೂಡಿಬಂದ ರಾಯಣ್ಣ' ಹಾಗೂ 'ಸಂಗೊಳ್ಳಿ ರಾಯಣ್ಣನ ಹೋರಾಟದ ಪರಿಸರ ಮತ್ತು ಐತಿಹ್ಯಗಳು' ಎಂಬ ಎರಡು ಲೇಖನಗಳಿವೆ. ಇವುಗಳನ್ನು ಜ್ಯೋತಿ ಹೊಸೂರ ಮತ್ತು ಸಿ.ವಿ ಮಠದರವರು ಬರೆದಿದ್ದಾರೆ. ಜ್ಯೋತಿ ಹೊಸೂರ ಇವರು ರಾಯಣ್ಣನ ಜೀವನದ ಹಾಗೂ ಹೋರಾಟದ ಕುರಿತು ಸಂಕ್ಷಿಪ್ತವಾಗಿ ಹೇಳುತ್ತಾ, ಜನರ ನಾಲಿಗೆಗಳಲ್ಲಿ ರಾಯಣ್ಣನ ಕುರಿತು ಇರುವಂತಹ ಸಾಹಿತ್ಯವನ್ನು ಹೇಳುತ್ತಾರೆ. ರಾಯಣ್ಣನಿಗೆ ಸಂಬಂಧಿಸಿದಂತೆ ಇರುವಂತಹ ಜನಪದ ಹಾಡುಗಳನ್ನು, ಐತಿಹ್ಯಗಳನ್ನು, ಕಥೆಗಳನ್ನು ಸಂಗ್ರಹಿಸಿ ಅಭ್ಯಸಿಸಿದ್ದಾರೆ. ಇವರ 'ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ' ಎನ್ನುವ ಕೃತಿಯಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ ಚಿಕ್ಕವಯಸ್ಸಿನಿಂದಲೂ ಆಕರ್ಷಿತರಾಗಿ ರಾಯಣ್ಣನಿಗೆ ಸಂಬಂಧಿಸಿದಂತೆ ನಾಟಕ, ಚರಿತ್ರೆ, ಕೃತಿ, ಲಾವಣಿ, ಕಾದಂಬರಿ ಇತ್ಯಾದಿ ರೂಪದ ಸಾಹಿತ್ಯ ಕೃತಿಗಳನ್ನು ಆಸಕ್ತಿಯಿಂದ ಸಂಗ್ರಹಿಸಿದ್ದಾರೆ. ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ಅದರಲ್ಲೂ ಹೆಚ್ಚಾಗಿ ದೊರೆಯುವಂತಹ ಜನಪದ ಆಕರಗಳಿಂದ ರಾಯಣ್ಣನ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ.

ರಾಯಣ್ಣನು ಹೋರಾಟಕ್ಕೆ ಸಿದ್ಧತೆಗಳನ್ನು ಮಾಡಿಕೊಂಡ ನಂತರ ರಾಣಿಯನ್ನು ಭೇಟಿಯಾಗಿ ಹೇಳುವ ಒಬ್ಬ ವೀರನ ಮಾತುಗಳನ್ನು ಈ ರೀತಿಯಲ್ಲಿ ಗೆದ್ದೆ ಗೆಲ್ಲುತ್ತೇನೆ ಇಲ್ಲದಿದ್ದರೆ ರಣರಂಗದಲ್ಲಿ ಮರಣವನ್ನಪ್ಪುತ್ತೇನೆ ಹೊರತು ಮತ್ತೊಮ್ಮೆ ನಿಮ್ಮ ಮುಂದೆ ಬರುವುದಿಲ್ಲ ಎಂದು ಹೇಳುವುದರ ಮೂಲಕ ರಾಣಿಯಲ್ಲಿ ಹೊಸ ಭರವಸೆಯ ಬೆಳಕನ್ನು ತುಂಬುತ್ತಾನೆ. ಹಾಗೂ ರಾಯಣ್ಣನಲ್ಲಿ ಇದ್ದಂತಹ ಛಲ, ಗುರಿ, ಸ್ವಾತಂತ್ರ್ಯದ ಕನಸು ಮುಂತಾದವುಗಳನ್ನು ತಿಳಿಯಬಹುದು. ಹೊಸೂರರ ಈ ಲೇಖನವು ತ್ರಿಪದಿಗಳ ಮೂಲಕ, ಲಾವಣಿಗಳ ಮೂಲಕ ರಾಯಣ್ಣನ ಹೋರಾಟದ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.

ಶ್ರೀನಿವಾಸ ಹಾವನೂರ ಅವರು ಸಂಗೊಳ್ಳಿ ರಾಯಣ್ಣನ ಕುರಿತು 'ಬ್ರಿಟಿಷ್ ದಾಖಲೆಗಳು ಸೂಚಿಸುವ ಸಂಗೊಳ್ಳಿ ರಾಯಣ್ಣ' ಕ್ರಾಂತಿ ಕಾರ್ಯಾಚರಣೆ ಎನ್ನುವ ಲೇಖನವನ್ನು ಬರೆದಿದ್ದಾರೆ. ಈ ಲೇಖನವು ಬ್ರಿಟಿಷರು ರಾಯಣ್ಣನ ಹೋರಾಟದ ಕುರಿತು ನಡೆಸಿದಂತಹ ಪತ್ರವ್ಯವಹಾರಗಳು ಹಾಗೂ ಇತರೆ ದಾಖಲೆಗಳ ಸಹಾಯದಿಂದ ಹಾವನೂರ ಅವರು ಬ್ರಿಟಿಷ್ ದಾಖಲೆಗಳು ಸೂಚಿಸುವ ಸಂಗೊಳ್ಳಿ ರಾಯಣ್ಣ ಎನ್ನುವ ಲೇಖನವನ್ನ ಬರೆದಿದ್ದಾರೆ. ಈ ಲೇಖನದಲ್ಲಿ ನಿಖರವಾಗಿ, ನಿರ್ದಿಷ್ಟವಾಗಿ ರಾಯಣ್ಣನು ನಡೆಸಿದಂತಹ ಹೋರಾಟವನ್ನು ತಿಳಿಯಲು ಪ್ರಮುಖ ಆಧಾರಗಳು ದೊರೆಯುತ್ತವೆ ಎಂದು ಹೇಳಬಹುದು.

ಸಿ ವಿ ಮಠದ ಅವರ 'ಸಂಗೊಳ್ಳಿ ರಾಯಣ್ಣನ ಹೋರಾಟದ ಪರಿಸರ ಹಾಗೂ ಐತಿಹ್ಯಗಳು' ಎಂಬ ಲೇಖನವು ಕಿತ್ತೂರಿನ ಸಂಕ್ಷಿಪ್ತ ಇತಿಹಾಸದ ಜೊತೆಗೆ ರಾಯಣ್ಣನ ಹೋರಾಟದ ಚಿತ್ರಣವನ್ನು ಕೊಟ್ಟಿದ್ದಾರೆ. ಈ ಲೇಖನವು ಮುಖ್ಯವಾಗಿ ರಾಯಣ್ಣನಿಗೆ ಸಂಬಂಧಿಸಿದ ಹಾಗೂ ರಾಯಣ್ಣನು ನಡೆಸಿದಂತಹ ಹೋರಾಟದ ಕುರಿತು ಹುಟ್ಟಿಕೊಂಡಿರುವಂತಹ ಐತಿಹ್ಯಗಳನ್ನು, ಕತೆಗಳನ್ನು ತಿಳಿಯಲು ಸಹಾಯಕವಾಗುತ್ತದೆ. ಯಾವುದೇ ಒಂದು ಕಾರ್ಯಕ್ಕೆ, ಹೋರಾಟಕ್ಕೆ ಹಾಗೂ ಇತರೆ ವಿಷಯಗಳಿಗೆ ಸಂಬಂಧಿಸಿದಂತೆ ಪ್ರದೇಶದ ಪಾತ್ರ ತುಂಬಾ ಮುಖ್ಯವಾಗಿರುತ್ತದೆ. ರಾಯಣ್ಣನು ಹೋರಾಟದ ಸಂದರ್ಭದಲ್ಲಿ ಕಿತ್ತೂರಿನ ಸುತ್ತಮುತ್ತಲಿನ ಪ್ರದೇಶಗಳಾದ ದೇಶನೂರು, ಖಾನಾಪುರ, ನಂದಗಡದ ಸುತ್ತಮುತ್ತಲಿನ ಪ್ರದೇಶಗಳೆಲ್ಲವೂ ಅರಣ್ಯ ಪ್ರದೇಶಗಳಿಂದ ಕುಡಿದವುಗಳಾಗಿದ್ದವು. ರಾಯಣ್ಣನು ಬ್ರಿಟಿಷರ ವಿರುದ್ಧ ಗೆರಿಲ್ಲಾ ಯುದ್ಧ ಮಾದರಿಯನ್ನು ಅನುಸರಿಸಿ ಹೋರಾಟವನ್ನು ಮಾಡಿದನು. ರಾಯಣ್ಣನಿಗೆ ಮತ್ತು ಆತನ ಸಹಚರರಿಗೆ ಅರಣ್ಯದ ಬಗ್ಗೆ ಮಾಹಿತಿ ತಿಳಿದವರಾಗಿದ್ದರು. ಬ್ರಿಟಿಷರಿಗೆ ಅರಣ್ಯ ಪ್ರದೇಶಗಳಿಗೆ ಹೋಗಿ ಹಿಡಿಯುವಂತಹದ್ದು ಅಷ್ಟು ಸುಲಭವಾಗಿರಲಿಲ್ಲ. ರಾಯಣ್ಣನು ಇದ್ದಂತಹ ಸ್ಥಳದ ಬಗ್ಗೆ ಮಾಹಿತಿ ತಿಳಿಯಲು ಬ್ರಿಟಿಷರಿಗೆ ಅಷ್ಟು ಸುಲಭವಾದ ಕೆಲಸವಾಗಿರಲಿಲ್ಲ. ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಹೋರಾಟಗಾರರು ಹುಟ್ಟಿದಂತಹ ಪರಿಸರ ಹಾಗೂ ಪ್ರದೇಶಗಳು ಪ್ರಮುಖ ಪಾತ್ರವಹಿಸುತ್ತದೆ ಎನ್ನುವುದನ್ನು ಈ ಲೇಖನ ತಿಳಿಸುತ್ತದೆ.

ಸ.ರಾ ಸುಳಕೊಡೆ ಅವರು ಸಂಪಾದಿಸಿರುವ 'ಕಿತ್ತೂರು ಕಲಿಗಳು ಮತ್ತು ಸ್ವಾತಂತ್ರ ಸಂಗ್ರಾಮ ಎಂಬ ಕೃತಿಯಲ್ಲಿ ಎರಡು ಭಾಗಗಳಿದ್ದು ಭಾಗ-೧ ರೂಪಕ ಲೇಖನ. ಭಾಗ-೨ ಜನಪದ ಗೀತೆ ಲಾವಣಿ ಕವಿತೆಗಳು ಇರುವುದನ್ನು ಈ ಎರಡು ಭಾಗಗಳು ಸಂಗೊಳ್ಳಿ ರಾಯಣ್ಣ ಹಾಗೂ ಕಿತ್ತೂರಿಗೆ ಸಂಬಂಧಿಸಿದಂತೆ ಮಾಹಿತಿಗಳನ್ನು ತಿಳಿಯಲು ಸಹಾಯಕವಾಗುತ್ತವೆ. ಭಾಗ ಎರಡರಲ್ಲಿ 'ಶೂರ ರಾಯಣ್ಣ' ಎನ್ನುವಂತಹ ಲೇಖನವನ್ನು ಬಿ.ಫ್ಹಿ ನೇಸರಗಿ ಹಾಗೂ 'ವೀರಶೂರ ಸಂಗೊಳ್ಳಿ ರಾಯಣ್ಣ' ಲೇಖನವನ್ನು ಎಸ್.ಎಸ್ ರೇವಣ್ಣ ಇವರು ಬರೆದಿದ್ದಾರೆ. ಜಾನಪದ ಹಾಡುಗಳು ಎರಡು ಲೇಖನಗಳು ಜನಪದ ಸಾಹಿತ್ಯವನ್ನು ಮುಖ್ಯವಾಗಿಟ್ಟುಕೊಂಡು ರಚಿಸಿದಂತಹುಗಳಾಗಿವೆ.

ಜಾನಪದ ಹಾಡುಗಳು ರಾಯಣ್ಣನ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ತುಂಬ ಮಹತ್ವದ ಪಾತ್ರವಹಿಸುತ್ತವೆ ಎಂದು ಹೇಳಬಹುದು.

ವೀರೇಶ ಬಡಿಗೇರ ಅವರ 'ಸಂಸ್ಕೃತಿ ಸಂಕಥನ' ಎಂಬ ಕೃತಿಯಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ 'ಸಂಗೊಳ್ಳಿ ರಾಯಣ್ಣ' ಎನ್ನುವ ಲೇಖನವಿದೆ. ಈ ಲೇಖನದಲ್ಲಿ ರಾಯಣ್ಣನನ್ನು ಕುರಿತು ಇದುವರೆಗೂ ಬಂದಿರುವಂತಹ ಕೃತಿಗಳಲ್ಲಿ ಹಾಗೂ ಜಾನಪದದಲ್ಲಿ ಹೆಚ್ಚು ವೈಭವೀಕರಿಸಿ ಬರೆದಿರುವುದನ್ನು ಹಾಗೂ ದುರಂತ ನಾಯಕನನ್ನಾಗಿ ಚಿತ್ರಿಸಿರುವುದು ಹೆಚ್ಚಾಗಿ ಕಂಡುಬರುತ್ತದೆ ಎಂಬುವಂತಹ ಅಂಶಗಳನ್ನು ತಿಳಿಸುತ್ತಾ, ರಾಯಣ್ಣ ತಳಸಮುದಾಯಗಳ ಮೂಲಭೂತ ಬೇಡಿಕೆಗಳಿಗೆ ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದವರ ಕುರಿತು ಚಿತ್ರಿಸಲು ಪ್ರಯತ್ನಿಸಿದ್ದಾರೆ. ಜನಪದರು ತಮ್ಮವರನ್ನು ನಾಯಕನನ್ನಾಗಿ ಮಾಡಿ ವೈಭವೀಕರಿಸಿ ಹೇಳಿದ್ದಾರೆ. ಈ ಲೇಖನದಲ್ಲಿ ಕಿತ್ತೂರಿನ ಬಗ್ಗೆ ಸಂಕ್ಷಿಪ್ತವಾಗಿ ಹೇಳುತ್ತಾ ರಾಯಣ್ಣನಿಗೆ ಸಂಬಂಧಿಸಿದಂತೆ ಇದುವರೆಗೂ ಬಂದಂತಹ ಮೌಖಿಕ ಹಾಗೂ ಲಿಖಿತ ಸಾಹಿತ್ಯದ ಕುರಿತು ಹೇಳುತ್ತಾ, ತಮ್ಮ ಸ್ವಾತಂತ್ರ್ಯಕ್ಕೆ ದಕ್ಕೆ ಬಂದಾಗ ಮನುಷ್ಯ ಯಾವ ರೀತಿಯಲ್ಲಿ ಬದಲಾಗುತ್ತಾನೆ. ಎನ್ನುವಂತಹ ಸಂದರ್ಭವನ್ನು ಲೇಖಕರು 'ಇಂಥ ಸಂಬಂಧಗಳಿಗೆ ಚ್ಯುತಿ ಬಂದಾಗ ತೋರಿಸುವ ಪ್ರತಿರೋಧ ಪ್ರತಿಕ್ರಿಯೆ ಬೆಂಕಿಯನ್ನು ಬದುಕಿನ ಹಂಗನ್ನೆ ತೊರೆದು ಬಂಡಾಯಕ್ಕಿಳಿಯುವ ಗುಣ ಎರವಲು ಪಡೆದಂತದ್ದಲ್ಲ ಅದಕ್ಕೆ ರಾಯಣ್ಣ ಉತ್ತಮ ನಿದರ್ಶನ.' ಸ್ವಾತಂತ್ರ್ಯದ ಕುರಿತು ಜನರಲ್ಲಿ ಜಾಗೃತಿ ಮೂಡಿಸಿದವರಲ್ಲಿ, ಎಚ್ಚರಗೊಳಿಸಿದವರಲ್ಲಿ ರಾಯಣ್ಣ ಪ್ರಮುಖ ಎನ್ನುವಂತಹದನ್ನು ಲೇಖಕರು ಹೇಳಿದ್ದಾರೆ.

ವಾಯ್.ಎಫ್ ಸೈದಾಪುರ ಅವರ 'ಉತ್ತರ ಕರ್ನಾಟಕದ ಜನಪದ ವೀರ ಗೀತೆಗಳು' ಎಂಬ ಕೃತಿಯಲ್ಲಿ ಉತ್ತರ ಕರ್ನಾಟಕದಲ್ಲಿ ನಾಡು-ನುಡಿಗಾಗಿ ಹಾಗೂ ಸಾಮಾಜಿಕ ಸಮಾನತೆಗಾಗಿ ಹೋರಾಟ ಮಾಡಿದಂತಹ ಸಿಂಧೂರ ಲಕ್ಷ್ಮಣ, ಸಂಗೊಳ್ಳಿ ರಾಯಣ್ಣ, ಸುರಪುರ ರಾಜ ವೆಂಕಟಪ್ಪ ನಾಯಕ, ಕಿತ್ತೂರು ರಾಣಿ ಚನ್ನಮ್ಮ, ಉಲ್ಲಾಳದ ರಾಣಿ ಅಬ್ಬಕ್ಕ ಮುಂತಾದವರು ತೋರಿದ ಶೌರ್ಯ, ಪರಾಕ್ರಮ, ಸಾಹಸದ ಕುರಿತು ಕಾಲಾಂತರದಲ್ಲಿ ಹುಟ್ಟಿಕೊಂಡಿರುವಂಹ ಹಾಡುಗಳು, ಕಥೆಗಳು, ಐತಿಹ್ಯಗಳು ಕುರಿತು ಮಾಹಿತಿಯನ್ನು ತಿಳಿಯಲು ಸಹಾಯಕವಾಗುತ್ತವೆ. ಇಂತಹ ಸ್ವಾತಂತ್ರವೀರರ ಕುರಿತು ಹಲವಾರು ಹಾಡುಗಳು, ಲಾವಣಿಗಳ ಗೀಗೀ ಪದಗಳು, ಚೌಡಕಿ, ಭಜನೆ ಇತ್ಯಾದಿ ಜನಪದ ರೂಪಗಳ ಮೂಲಕ ಹೋರಾಟಗಾರರನ್ನು ನೆನೆಯುವುದನ್ನು ಇಂದಿಗೂ ಕಾಣುತ್ತೇವೆ. ಪ್ರಸ್ತುತ ಇವರ ನಾಲ್ಕನೇ ಅಧ್ಯಾಯವು 'ಐತಿಹಾಸಿಕ ವೀರಗೀತೆಗಳಿಗೆ' ಸಂಬಂಧಿಸಿದ್ದು ವೀರ ಗೀತೆಗಳ ಪ್ರಕಾರಗಳನ್ನು ಗುರ್ತಿಸುತ್ತ ಐತಿಹಾಸಿಕ ವೀರ ಗೀತೆಗಳು ಎಂಬ ಭಾಗದಲ್ಲಿ ಸಂಗೊಳ್ಳಿ ರಾಯಣ್ಣನ ಕುರಿತು ಮಾಹಿತಿ ಇದೆ. ರಾಯಣ್ಣನಿಗೆ ಸಂಬಂಧಿಸಿದಂತೆ ಮನೆತನ, ವೃತ್ತಿ, ಜಾತಿಯ ಕುರಿತು ಚರ್ಚೆ ಮಾಡಿದ್ದಾರೆ. ರಾಯಣ್ಣನ ಕೆಚ್ಚೆದೆಯ ಹೋರಾಟದ ಚಿತ್ರಣವನ್ನು

ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವುದನ್ನು ಕಾಣಬಹುದು. ಇಲ್ಲಿ ತೆಗೆದುಕೊಂಡಿರುವ ಲಾವಣಿಗಳು ಫ್ಲೀಟ್ ಅವರು ಸಂಗ್ರಹಿಸಿದ ಲಾವಣಿಗಳು ಕ್ಯಾತನಹಳ್ಳಿ ರಾಮಣ್ಣನವರ ಲಾವಣಿಗಳನ್ನು ಕೇಂದ್ರವಾಗಿಟ್ಟುಕೊಂಡು ವಿಶ್ಲೇಷಣೆ ಮಾಡಿರುವುದನ್ನು ಕಾಣಬಹುದು.

ಚಂದ್ರಕಾಂತ ಬಿಜ್ಜರಗಿ ಅವರ 'ಹಾಲುಮತ ರತ್ನಗಳು' ಎನ್ನು ಕೃತಿಯಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ 'ಸಂಗೊಳ್ಳಿ ರಾಯಣ್ಣ' ಎನ್ನುವ ಲೇಖನವಿದೆ. ಈ ಲೇಖನದಲ್ಲಿ ದಕ್ಷಿಣ ಭಾರತದಲ್ಲಿನ ರಾಜಕೀಯ ಪರಿಸ್ಥಿಗಳು ಹಾಗೂ ಭಾರತದಲ್ಲಿ ಬ್ರಿಟಿಷರು ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸುವ ಸಂದರ್ಭದಲ್ಲಿದ್ದಂತಹ ಸನ್ನಿವೇಶಗಳನ್ನು ಸಂಕ್ಷಿಪ್ತವಾಗಿ ಹೇಳುತ್ತಾ ರಾಯಣ್ಣನ ಸಮಗ್ರ ಇತಿಹಾಸವನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ.

ರಾಯಣ್ಣನ ಕೌಟುಂಬಿಕ ಚಿತ್ರಣವನ್ನು ಹೇಳುವ ಸಂದರ್ಭದಲ್ಲಿ ರಾಯಣ್ಣನ ತಾತ ರಾಘಣ್ಣನ ಹೆಸರು ದೊಡ್ಡರಾಗಣ್ಣ ಎಂದು ಹಾಗೂ ತಂದೆಯ ಸಹೋದರನಾದ ಸಣ್ಣಭರಮಪ್ಪ ಚಿಕ್ಕ ವಯಸ್ಸಿನಲ್ಲಿಯೇ ಮರಣ ಹೊಂದಿದನೆಂದು ಲೇಖಕರು ಹೇಳಿದ್ದಾರೆ. ದೊಡ್ಡರಾಗಣ್ಣನಿಗೆ ದೊಡ್ಡಭರಮಣ್ಣ ಮತ್ತು ಸಣ್ಣಭರಮಣ್ಣ ಎಂಬ ಪುತ್ರರಿದ್ದರು. ಸಣ್ಣಭರಮಣ್ಣ ಚಿಕ್ಕ ವಯಸ್ಸಿನಲ್ಲಿಯೇ ತೀರಿಕೊಂಡನು. ಹಾಗೆಯೇ ರಾಯಣ್ಣನ ಸಹೋದರನ ಕುರಿತು ರಾಯಣ್ಣನಿಗೆ ಭೀಮಪ್ಪ ಎನ್ನುವ ಅಣ್ಣನಿದ್ದನೆಂದು ರಾಯಣ್ಣನ ವಿವಾಹದ ಕುರಿತು ಹೇಳಿದ್ದಾರೆ. ಒರಿಗೆಯರ ಗುಂಪಿನಲ್ಲಿ ಎದ್ದು ಕಾಣುವಂತಹ ನಿಲುವು. ಸೈನ್ಯದ ಸರದಾರನ ಹೋಲಿಕೆ. ದೊಡ್ಡಭರಮಣ್ಣ ಭೀಮಪ್ಪನಿಗೆ ಸಿದ್ಧವ್ವಳನ್ನು, ರಾಯಣ್ಣನಿಗೆ ನೇಗಿನಹಾಳದ ಹಳಬರ ಲಕ್ಕಪ್ಪನ ತಂಗಿ ಮಲ್ಲವ್ವಳನ್ನು ತಂದುಕೊಂಡನು. ಭೀಮಪ್ಪನಿಗೆ ಮಕ್ಕಳಾದವು. ರಾಯಣ್ಣನಿಗೂ ಹನುಮಂತನೆಂಬ ಪುತ್ರ ಇದ್ದನೆಂದು ತಿಳಿದು ಬರುತ್ತದೆ. ರಾಯಣ್ಣನ ಕೌಟುಂಬಿಕ ವಿಚಾರದ ಕುರಿತಾಗಿ ಲೇಖಕರು ಚರಿತ್ರೆಯಲ್ಲಿ ದಾಖಲಾಗದ ಕೆಲವೊಂದು ಅಂಶಗಳ ಕುರಿತು ಈ ಮೇಲಿನಂತೆ ಹೇಳಿರುವುದು ಕಂಡುಬರುತ್ತದೆ.

ಕಿತ್ತೂರು ಸಂಸ್ಥಾನದ ಸಂಕ್ಷಿಪ್ತ ಇತಿಹಾಸದೊಂದಿಗೆ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ರಾಯಣ್ಣನ ವಂಶಜರು, ತಂದೆ, ತಾಯಿ, ಬಾಲ್ಯ, ರಾಯಣ್ಣ ಹಾಗೂ ಕಿತ್ತೂರು ಸಂಸ್ಥಾನದ ನಡುವಿನ ಸಂಬಂಧ, ಕಿತ್ತೂರು ಬ್ರಿಟಿಷರ ವಶವಾದ ನಂತರ ಕಿತ್ತೂರನ್ನು ಸ್ವಾತಂತ್ರ್ಯಗೊಳಿಸಲು ನಡೆಸಿದಂತಹ ಹೋರಾಟ ಹೀಗೆ ರಾಯಣ್ಣನ ಕುರಿತ ಸಮಗ್ರವಾದ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ.

ಸು. ರುದ್ರಮೂರ್ತಿ ಶಾಸ್ತ್ರೀ ಅವರ 'ಕರ್ನಾಟಕದ ಸ್ವಾತಂತ್ರ್ಯವೀರರು' ಎನ್ನುವ ಕೃತಿಯಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ 'ಸಂಗೊಳ್ಳಿ ರಾಯಣ್ಣ' ಎನ್ನುವ ಲೇಖನವಿದೆ. ೧೮ನೇ ಶತಮಾನದಲ್ಲಿ ಭಾರತ, ಕರ್ನಾಟಕದಲ್ಲಿ ಇದ್ದಂತಹ ರಾಜಕೀಯ ಪರಿಸ್ಥಿತಿಗಳ ಹಿನ್ನಲೆಯಲ್ಲಿ ರಾಯಣ್ಣನು ಮಾಡಿದಂತಹ ಹೋರಾಟದ ಮಹತ್ವವನ್ನು ಕಟ್ಟಿಕೊಟ್ಟಿದ್ದಾರೆ.

ರಾಯಣ್ಣನಿಗೆ ಸಂಬಂಧಿಸಿದಂತೆ ಈ ಕೃತಿಯಲ್ಲಿ ಕೆಲವೊಂದು ವಿಷಯಗಳಲ್ಲಿ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ರಾಯಣ್ಣನ ದಾಳಿಗಳಿಂದ ಸದಾ ಭಯಭೀತರಾಗಿದ್ದ ಬ್ರಿಟಿಷರು ಹಾಗೂ ಅಧಿಕಾರಿಗಳು ರಾಯಣ್ಣನನ್ನು ಸೆರೆಯಿಡಿಯಲು ಸದಾ ಸಿದ್ದತೆಯಲ್ಲಿರುತ್ತಿದ್ದರು. ಆದರೆ ರಾಯಣ್ಣ ಬ್ರಿಟಿಷರ ದಾರಿ ತಪ್ಪಿಸಿ ಬೇರೆ ಪ್ರದೇಶಗಳ ಮೇಲೆ ದಾಳಿ ಮಾಡುತ್ತಿದ್ದನು. ಸಂಪಗಾವಿ ಅಮಲ್ದಾರನಾದ ಕೃಷ್ಣರಾವ ರಾಯಣ್ಣನನ್ನು ಕುಲಕರ್ಣಿಯ ಮಾತಿನಿಂದ ಸೆರೆಮನೆಗೆ ಹಾಕಿದ್ದ. ರಾಯಣ್ಣ ತಾನು ಮಾಡಿರದ ತಪ್ಪಿಗೆ ಮೂರು ದಿನಗಳ ಕಾಲ ಸೆರೆಮನೆಯಲ್ಲಿರಬೇಕಾಗಿತ್ತು. ಮೂರು ದಿನಗಳ ನಂತರ ಮೇಲಗಿರ ರಂಗನಗೌಡರು ಕೊಟ್ಟಾ ಜಾಮೀನಿನಿಂದ ಸಂಪಗಾಂವಿಯ ಸೆರೆಮನೆಯಿಂದ ಹೊರಬಂದ ರಾಯಣ್ಣ ಅಂದೇ ಈ ಕಚೇರಿಯನ್ನು ಸುಡುತ್ತೇನೆ ಎಂದು ವೀರ ಪ್ರತಿಜ್ಞೆಯನ್ನು ಮಾಡಿ ಬಂದಿರುತ್ತಾನೆ. ಅದರಂತೆ ಹೋರಾಟದ ಸಮಯದಲ್ಲಿ ರಾಯಣ್ಣ ಸಂಪಗಾವಿ ಕಚೇರಿ ಹಾಗೂ ಕೃಷ್ಣರಾವನ ಮನೆಗೆ ಬೆಂಕಿ ಹಚ್ಚಿರುವುದರ ಕುರಿತು ಉಲ್ಲೇಖಗಳಿವೆ. ಅದರೆ ರಾಯಣ್ಣ ಈ ಸಮಯದಲ್ಲಿ ಕೃಷ್ಣರಾವನನ್ನು ಕೊಲ್ಲಲು ಹೋಗಿ ಕೊನೆಗೆ ಎಚ್ಚರಿಕೆ ಕೊಟ್ಟನೆಂದು ಲೇಖಕರು ಉಲ್ಲೇಖಿಸಿದ್ದಾರೆ.

ರಾಯಣ್ಣನನ್ನು ಗಲ್ಲಿಗೇರಿಸಿದ ದಿನ ೧೮೩೧ ಜನವರಿ ೨೬ ರಂದು ಅದರೆ, ಲೇಖಕರು ರಾಯಣ್ಣನನ್ನು ಗಲ್ಲಿಗೇರಿಸಿದ ವಿಷಯವನ್ನು ಕುರಿತು ರಾಯಣ್ಣನಿಗೆ ೧೮೩೦ ಡಿಸೆಂಬರ್ ೩೦ ರಂದು ರಾಯಣ್ಣನಿಗೆ ಗಲ್ಲಿಗೇರಿಸಲಾಯಿತೆಂದು ಹೇಳಿದ್ದಾರೆ.

'ಕಿತ್ತೂರು ನಾಡಿನ ಇತಿಹಾಸ ಹಾಗೂ ಸಂಸ್ಕೃತಿ' ಏಳು ಉಪನ್ಯಾಸಗಳು ಕಿತ್ತೂರು ರಾಣಿ ಚೆನ್ನಮ್ಮನ ೧೫೧ನೇ ವಿಜಯೋತ್ಸವದ ಅಂಗವಾಗಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ೧೯೭೫ರಲ್ಲಿ ಅಯೋಜಿಸಿದ್ದ ಕಾರ್ಯಗಾರದಲ್ಲಿ ಮಂಡಿಸಿದ ವಿವಿಧ ವಿದ್ವಾಂಸರ ಸಂಶೋಧನಾತ್ಮಕ ಲೇಖನಗಳನ್ನು ೧೯೭೬ರಲ್ಲಿ ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಪ್ರಕಟಿಸಿದೆ. ಕಿತ್ತೂರು ಸಂಸ್ಥಾನದ ಹಾಗೂ ಕಿತ್ತೂರಿನಲ್ಲಿ ಬ್ರಿಟಿಷರ ವಿರುದ್ದ ನಡೆದಂತಹ ಹೋರಾಟದ ಚರಿತ್ರೆಯನ್ನು ತಿಳಿಯಲು ಹೆಚ್ಚು ಸಹಕಾರಿಯಾಗುತ್ತದೆ. ಎಸ್. ಎಲ್. ಶಾಂತಕುಮಾರಿ ಅವರ ಪ್ರಾಚೀನ ಕಿತ್ತೂರು ನಾಡು, ಎ. ಎಂ. ರಾಜಶೇಖರಯ್ಯ ಅವರ ಕರ್ನಾಟಕದಲ್ಲಿ ಬ್ರಿಟಿಷರ ಆಳಿಕೆಯ ಆರಂಭ, ಸೂರ್ಯನಾಥ ಕಾಮತ್ ಅವರ ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಆರಂಭ, ಸಿ. ವ್ಹಿ. ಮಠದ ಅವರ ಕಿತ್ತೂರು ನಾಡಿನ ವೀರರು, ಎಸ್. ಶೆಟ್ಟರ್ ಅವರ ಕಿತ್ತೂರು ಸಂಸ್ಥಾನದ ಇತಿಹಾಸ, ಸೋಮಶೇಖರ ಇಮ್ರಾಪುರ ಅವರ ಕಿತ್ತೂರನ್ನು ಕುರಿತು ಲಾವಣಿಗಳು ಹಾಗೂ ಇತರ ಸಾಹಿತ್ಯ, ಸರೀಜಿನಿ ಶಿಂತ್ರಿ ಅವರ ವಿಶ್ವದ ಆಡಳಿತಗಾರ್ತಿಯರಲ್ಲಿ ಕಿತ್ತೂರು ರಾಣಿ ಚೆನ್ನಮ್ಮನ ಸ್ಥಾನ ಎನ್ನುವ ಈ ಮೇಲಿನ ಎಲ್ಲಾ ಲೇಖನಗಳು ಸ್ವಾತಂತ್ರ್ಯ, ಸ್ವಾಭಿಮಾನಕ್ಕಾಗಿ ಕಿತ್ತೂರಿನಲ್ಲಿ ನಡೆದಂತಹ ಹೋರಾಟಗಳ ಕುರಿತು ಮಾಹಿತಿಯನ್ನು ತಿಳಿಯಲು ಸಹಕಾರಿಯಾಗುತ್ತವೆ.

ಜಯಲಕ್ಷ್ಮಿ ಸೀತಾಪುರ ಅವರ 'ಕನ್ನಡದಲ್ಲಿ ಐತಿಹಾಸಿಕ ಜನಪದ ಲಾವಣಿಗಳು' ಎನ್ನುವ ಸಂಶೋಧನ ಕೃತಿಯಲ್ಲಿ ಕಿತ್ತೂರು ರಾಣಿ ಚೆನ್ನಮ್ಮ ಹಾಗೂ ಸಂಗೊಳ್ಳಿ ರಾಯಣ್ಣನಿಗೆ ಸಂಬಂದಿಸಿದ

ಲಾವಣಿಗಳಿರುವುದನ್ನು ಕಾಣಬಹುದು. ಅಧ್ಯಾಯ ನಾಲ್ಕು ಕನ್ನಡ ಲಾವಣಿಗಳ ಐತಿಹಾಸಿಕ ವಿವೇಚನೆ ಎನ್ನುವ ಅಧ್ಯಾಯದಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ ಫ್ಲೀಟ್ ಅವರು ಸಂಗ್ರಹಿಸಿದ ಲಾವಣಿಗಳನ್ನು ಮುಖ್ಯವಾಗಿಟ್ಟುಕೊಂಡು ಚರ್ಚಿಸಿದ್ದಾರೆ.

ಬಸವರಾಜ ಕಮತ ಅವರ 'ಸಂಗೊಳ್ಳಿ ಬಂಡಾಯ ಚರಿತ್ರೆ ಮತ್ತು ಜಾನಪದ ನೆಲೆಯಲ್ಲಿ' ಎನ್ನುವ ಕೃತಿಯು ರಾಯಣ್ಣನ ಹೋರಾಟದ ಕುರಿತು ತಿಳಿಯಲು ಸಹಾಕವಾಗುತ್ತದೆ. ಹೋರಾಟ ದಿನಾಂಕ, ಸ್ಥಳ, ಮುಂತಾದ ವಿಷಯಗಳನ್ನು ಆಧರಿಸಿ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ.

ಸ್ವಾತಂತ್ರ್ಯ ಸ್ವಾಭಿಮಾನಿಯಾದ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ಸಾಹಿತ್ಯ ಪ್ರಕಾರಗಳಲ್ಲಿ ಭಿನ್ನವಾದಂತಹ ಮಾಹಿತಿಗಳು ದೊರಕುತ್ತವೆ. ರಾಯಣ್ಣನ ಹೆಂಡತಿ, ಮಗ, ಸಹೋದರ ಇಂತಹ ವಿಷಯದ ಕುರಿತು ಮಾಹಿತಿ ಇರುವುದನ್ನು ನಾವು ಕಾಣುತ್ತೇವೆ. ನಾಟಕ ಕಥೆ ಕಾದಂಬರಿ ಲಾವಣಿ ಮುಂತಾದ ಪ್ರಕಾರಗಳಲ್ಲಿ ದೊರಕುತ್ತವೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಸಾಕಷ್ಟು ಚರ್ಚೆಗಳು ನಡೆದಿದ್ದರು ಸಹ ಒಮ್ಮತವಾದಂತಹ ಅಭಿಪ್ರಾಯಗಳು ಬಂದಿಲ್ಲವೆಂದು ಹೇಳಬಹುದು. ಇಂತಹ ಐತಿಹಾಸಿಕ ವ್ಯಕ್ತಿಯ ಕೌಟುಂಬಿಕ ಜೀವನದ ಮಾಹಿತಿಯು ಸ್ಪಷ್ಟವಾಗಿ ಇಲ್ಲದಿರುವುದಕ್ಕೆ ಕಾರಣ ತಿಳಿದುಬಂದಿಲ್ಲ.

ಕುತಂತ್ರದಿಂದ ಸೆರೆಮನೆ ಸೇರಿದಾಗ ರಾಯಣ್ಣನನ್ನು ಜಾಮೀನಿನ ಮೇರೆಗೆ ಬಿಡಿಸುವನು ಮೇಲಗಿರಿ ರಂಗನಗೌಡ ಎಂಬುದಾಗಿ ಜನಪದ ಸಾಹಿತ್ಯದಿಂದ ತಿಳಿದುಬರುತ್ತದೆ. ಆದರೆ ಈ ಕಾದಂಬರಿಯಲ್ಲಿ ಅಮಟೂರಿನ ಸೈದಾನವರ ಬಾಳಾಸಾಹೇಬ ನನ್ನನ್ನು ಸೆರೆಯಲ್ಲಿರಿಸಿದ ಸುದ್ದಿ ಕೇಳಿ ಕಚೇರಿಗೆ ಬಂದು ಹೋಗುತ್ತಿದ್ದ ಜನರಿಗೆಲ್ಲ ಗೊತ್ತಾಗಿರಬೇಕು. ಅಂದು ಮಧ್ಯಾಹ್ನ ಯಾವುದೋ ಕೆಲಸಕ್ಕಾಗಿ ಅಲ್ಲಿಗೆ ಬಂದ ಅಮಟೂರಿನ ಸೈದಾನವರ ಬಾಳ ಸಾಹೇಬನಿಗೆ ನನ್ನ ವಿಷಯ ತಿಳಿಯುತ್ತಲೂ ಆತ ಮಾಮಲೇದಾರನಿಗೆ ಭೇಟಿಯಾಗಿ ನನ್ನ ಸಲುವಾಗಿ ತಾನು ಜಾಮೀನಾಗುವುದಾಗಿ ತಿಳಿಸಿದ. ಆದರೆ ಈ ವಿಷಯದ ಕುರಿತು ಜನಪದ ಸಾಹಿತ್ಯದಲ್ಲಿ ಹೆಚ್ಚಾಗಿ ಮೇಲಗಿರಿ ರಂಗನಗೌಡರು ರಾಯಣ್ಣನಿಗೆ ಜಾಮೀನಾಗಿರುವುದು ತಿಳಿದುಬರುತ್ತದೆ.

ರಾಯಣ್ಣನ ಕುರಿತು ಬಂದಿರುವಂತಹ ಜೀವನ ಚರಿತ್ರೆಗಳಲ್ಲಿ ಕೆಲವೊಂದು ವ್ಯತ್ಯಾಸಗಳಿರುವುದನ್ನು ನಾವು ಗುರುತಿಸಬಹುದು. ಆ ವ್ಯತ್ಯಾಸಗಳು ವಿವಾಹ, ಮಗನ, ಅಣ್ಣನ, ಗಜವೀರನ ಕುರಿತು, ದೇಶನೂರು ಕೋಟೆಯ ಕುರಿತು, ತಳವಾರಿಕೆಯ ಕುರಿತು, ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಕೆಲವೊಂದು ವ್ಯತ್ಯಾಸಗಳಿರುವುದನ್ನು ಈ ಕೆಳಗಿನಂತೆ ಗುರುತಿಸಬಹುದು.

ರಾಯಣ್ಣನ ಕುರಿತು ಬಂದಿರುವಂತಹ ಸಂಶೋಧನ ಕೃತಿಗಳಲ್ಲಿ ಹಲವಾರು ಭಿನ್ನತೆಗಳಿರುವುದನ್ನು ನಾವು ಗುರುತಿಸಬಹುದು. ವಿವಾಹದ ಕುರಿತು ಮಗನನ್ನು ಕುರಿತು ಹೆಚ್ಚಾಗಿ ಇರುವುದನ್ನು ನಾವು

ಕಾಣುತ್ತೇವೆ. 'ಸಂಗೊಳ್ಳಿ ರಾಯಣ್ಣನ ಹೆಂಡತಿಯ ಹೆಸರಿಗೆ ಸಂಬಂಧಿಸಿದಂತೆಯೇ ಹೆಚ್ಚಿನ ವ್ಯತ್ಯಾಸಗಳು ತೋರುತ್ತವೆ. ಇವುಗಳಲ್ಲದೆ ರಾಯಣ್ಣನಿಗೆ ಮದುವೆಯೇ ಆಗಿಲ್ಲ ಎಂದಾಗ ಹೆಂಡತಿಯ ಹೆಸರೆಲ್ಲಿಯದೆಂದು ವಾದಿಸಲಾಗುತ್ತದೆ. ಈ ದಿಶೆಯಲ್ಲಿಯ ಪ್ರಸ್ತಾಪಿತ ವ್ಯತ್ಯಾಸಗಳ ಕುರಿತು ಗಮನಿಸಬೇಕಾಗಿದೆ.' ಎಂದು ಜ್ಯೋತಿ ಹೊಸೂರು ಅವರು ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆಯಲ್ಲಿ ರಾಯಣ್ಣನ ವಿವಾಹಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ಸೂಕ್ತ ದಾಖಲೆಗಳಿಲ್ಲವೆಂದು ಹೇಳಿದ್ದಾರೆ. ಒಂದು ವೇಳೆ ರಾಯಣ್ಣ ವಿವಾಹವಾಗಿದ್ದರೂ, ರಾಯಣ್ಣನ ಹೋರಾಟದ ಸಂದರ್ಭದಲ್ಲಿ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾಗಿದ್ದರಿಂದ ರಾಯಣ್ಣನನ್ನು ಬೆದರಿಸುವುದುಕ್ಕಾಗಿ ಬ್ರಿಟಿಷರು ಹೆಂಡತಿಯನ್ನು ಅಸ್ತ್ರವನ್ನಾಗಿ ಮಾಡಿಕೊಳ್ಳಬಹುದೆಂದು ನಮ್ಮ ಜನಪದಕಾರರು ರಾಯಣ್ಣನ ಹೆಂಡತಿಯ ಬಗ್ಗೆ ಹೆಚ್ಚಾಗಿ ಪ್ರಸ್ತಾಪ ಮಾಡಿಲ್ಲವೆಂದು ಹೇಳಬಹುದು.

ಸಂಗೊಳ್ಳಿ ರಾಯಣ್ಣನ ಬಗೆಗೆ ನಮಗೆ ಸಿಗುವಂತಹ ವಿವಿಧ ಆಕರಗಳು ಮತ್ತು ದಾಖಲೆಗಳನ್ನು ಅಧ್ಯಯನ ಮಾಡುವುದರ ಮೂಲಕ ಹಾಗೂ ಮುಕ್ತಮನಸ್ಸಿನಿಂದ, ವಿವೇಚನಾಯುಕ್ತ ಮನೋಭಾವದಿಂದ ಪರಿಶೀಲನೆ ಮಾಡಿದಾಗ ರಾಯಣ್ಣನ ಕುರಿತು ಮಹತ್ವದ ಸಂಗತಿಗಳು ಬೆಳಕಿಗೆ ಬರುತ್ತವೆ. ರಾಯಣ್ಣನ ಕುರಿತು ಬಂದಿರುವಂತಹ ಜನಪದ ಸಾಹಿತ್ಯದಲ್ಲಿ ರಾಯಣ್ಣನ ಮನೆತನ, ತಂದೆ, ತಾಯಿ, ವೃತ್ತಿ, ಕಿತ್ತೂರು ಸಂಸ್ಥಾನದಲ್ಲಿ ಸೈನಿಕನಾಗಿ, ಕಿತ್ತೂರು ಸಂಸ್ಥಾನ ಬ್ರಿಟಿಷರ ವಶವಾದ ನಂತರ ಕಿತ್ತೂರನ್ನು ಮತ್ತೆ ಸ್ವಾತಂತ್ರ್ಯಗೊಳಿಸಲು ನಡೆಸಿದಂತಹ ಹೋರಾಟವನ್ನು ತಿಳಿಯಲು ಜನಪದ ಸಾಹಿತ್ಯ ಸಹಾಯಕವಾಗುತ್ತದೆ. ರಾಯಣ್ಣನನ್ನು ಕುರಿತು ರಚನೆಗೊಂಡಿರುವಂತಹ ಎಲ್ಲಾ ಲಾವಣಿಗಳು ರಾಯಣ್ಣನ ಕುರಿತಂತಹ ಪ್ರಮುಖ ದಾಖಲೆಗಳು.

**ಅಡಿ ಟಿಪ್ಪಣಿಗಳು**

೧. ವೀರೇಶ ಬಡಿಗೇರ, ಸಂಸ್ಕೃತಿ ಸಂಕಥನ, ಪುಟ, ೨೪೬

೨. ತಿ. ತಾ ಶರ್ಮ, ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ಪುಟ, ೦೬

೩. ಜ್ಯೋತಿ ಹೊಸೂರ, ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ, ಪುಟ, ೧೭೩

೪. ಅದೇ, ಪುಟ, ೧೫೧

೫. ಬಸವರಾಜ ಮಲಶೆಟ್ಟಿ, ಡಾ. ಮಲಶೆಟ್ಟಿ ಆಯ್ದ ಲೇಖನಗಳು, ಪುಟ, ೭೩

* * *

# ಅಧ್ಯಾಯ : ಎಂಟು

# ಸಂಗೊಳ್ಳಿ ರಾಯಣ್ಣ : ದಾಖಲು ಸಾಹಿತ್ಯ

ರಾಯಣ್ಣನ ಕುರಿತು ಲಿಖಿತ ಆಕರಗಳು ದೊರಕುವುದು ಅತಿ ವಿರಳ. ಮುಖ್ಯವಾಗಿ ರಾಯಣ್ಣನಿಗೆ ಸಂಬಂಧಿಸಿದಂತೆ ಲಿಖಿತ ಆಕರಗಳೆಂದರೆ ಬ್ರಿಟಿಷ್ ಅಧಿಕಾರಿಗಳು ನಡೆಸಿದ ಪತ್ರ ವ್ಯವಹಾರಗಳು ಹಾಗೂ ಬ್ರಿಟಿಷ್ ಅಧಿಕಾರಿಗಳ ವೈಯಕ್ತಿಕ ಬರಹಗಳು ಮುಖ್ಯವಾಗುತ್ತವೆ. ಇವುಗಳ ಜೊತೆಗೆ ಆಧುನಿಕ ಸಾಹಿತ್ಯ ಪ್ರಕಾರಗಳಾದ ಕಾದಂಬರಿಗಳು, ನಾಟಕಗಳು, ಜೀವನ ಚರಿತ್ರೆಗಳು ಮತ್ತು ಸಂಶೋಧನ ಬರಹಗಳು ಸಹ ರಾಯಣ್ಣನ ಕುರಿತ ಲಿಖಿತ ಆಕರಗಳಾಗುತ್ತವೆ. ಈ ಸಾಹಿತ್ಯ ಪ್ರಾಕರಗಳು ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಮಹತ್ವದ ಪಾತ್ರ ವಹಿಸಿವೆ.

ಗತಕಾಲದಲ್ಲಿ ನಡೆದಂತಹ ಘಟನೆಗಳೆಲ್ಲವನ್ನು ಸಾಹಿತ್ಯ ಒಳಗೊಂಡಿರುತ್ತದೆ ಎಂದು ಹೇಳಬಹುದು. ಸಾಹಿತ್ಯ ಗತಕಾಲದ ಘಟನೆಗಳನ್ನು ಪ್ರಸ್ತುತವಾಗಿಸುವ ಕ್ರಿಯೆಗಳ ಹಾಗೆ ಕಾರ್ಯ ನಿರ್ವಹಿಸುತ್ತದೆ. ಒಂದು ನಾಡಿನ ಇತಿಹಾಸವನ್ನು ತಿಳಿದುಕೊಳ್ಳಲು ಶಾಸನಗಳು, ಸಾಹಿತ್ಯ ಕೃತಿಗಳು, ಕಾಗದ ಪತ್ರಗಳು ಮುಂತಾದವುಗಳು ಸಹಾಯಕವಾಗುತ್ತವೆ. ಅದೇ ರೀತಿ ಕಿತ್ತೂರಿನ ಇತಿಹಾಸವನ್ನು ಹಾಗೂ ಸಂಗೊಳ್ಳಿ ರಾಯಣ್ಣನ ಇತಿಹಾಸವನ್ನು ತಿಳಿಯಲು ಕಾಗದ ಪತ್ರಗಳು ಬಹಳ ಮಹತ್ವದ ಆಕರಗಳಾಗುತ್ತವೆ. 'ಸಂಗೊಳ್ಳಿ ರಾಯಣ್ಣ ಮತ್ತು ಕಿತ್ತೂರು ದೇಶಗತಿಗೆ ಸಂಬಂಧಿಸಿದ ಅಧಿಕೃತ ದಾಖಲೆಗಳು ಮುಂಬೈ, ಪುಣೆ, ಲಂಡನ್ ಮುಂತಾದೆಡೆಗಳಲ್ಲಿ ಭದ್ರವಾಗಿವೆ. ಆ ಅಧಿಕೃತ ದಾಖಲೆಗಳನ್ನೆಲ್ಲ ಒಂದೂ ಬಿಡದೆ ಕನಿಷ್ಠ ಪಕ್ಷ ಜೆರಳಚ್ಚು ಪ್ರತಿಗಳ ರೂಪದಲ್ಲಿಯಾದರೂ ಪಡೆದು, ವ್ಯವಸ್ಥಿತವಾಗಿ ಬೆಳಗಾವಿ, ಸಂಗೊಳ್ಳಿ, ನಂದಗಡ ಮತ್ತು ಬೆಂಗಳೂರು ಮುಂತಾದ ಸ್ಥಳಗಳಲ್ಲಿ ಅಭ್ಯಾಸಿಗಳಿಗೆ, ಆಸಕ್ತರಿಗೆ ಉಪಲಬ್ಧವಾಗುವಂತೆ ಏರ್ಪಾಡು ಮಾಡುವುದು ಮೊದಲ ಕೆಲಸ.' ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ಹಲವಾರು ರೀತಿಯ ಆಕರಗಳು ದೊರೆಯುತ್ತವೆ. ಇವುಗಳಲ್ಲಿ ಬಹಳ ಮುಖ್ಯವಾದ ಆಕರಗಳೆಂದರೆ ಬ್ರಿಟಿಷರು ಬರೆದಿಟ್ಟಿರುವಂತಹ ಪತ್ರಗಳು. ಇವುಗಳು ಬ್ರಿಟಿಷರು ರಾಯಣ್ಣನ ಮೇಲೆ ದಾಳಿ ಮಾಡಿದ ನಂತರದಲ್ಲಿನ ಪತ್ರಗಳಲ್ಲಿ ರಾಯಣ್ಣನನ್ನು

ದರೋಡೆಕೋರ, ಲೂಟಿಗಾರ ಎಂದು ಚಿತ್ರಿಸಿರುವುದನ್ನು ಕಾಣುತ್ತೇವೆ. ಈ ರೀತಿ ಚಿತ್ರಿಸಿದ್ದರೂ ಸಹ ರಾಯಣ್ಣನ ಹೋರಾಟದ ವಿವರಗಳನ್ನು ತಿಳಿಯಲು ಸಹಾಯಕವಾಗುತ್ತವೆ. ಜೊತೆಗೆ ಬ್ರಿಟಿಷ್ ಅಧಿಕಾರಿಗಳ ಜೀವನ ಚರಿತ್ರೆ, ಆತ್ಮಚರಿತ್ರೆ ಹಾಗೂ ಅವರ ಕೆಲವು ಕೃತಿಗಳು ಮುಖ್ಯವಾಗುತ್ತವೆ. ಅಂಥವರಲ್ಲಿ ಎಚ್. ಜೆ. ಸ್ಟೋಕ್ಸ್ ಮತ್ತು ಜೆ. ಎಫ್. ಫ್ಲೀಟ್ ಮುಖ್ಯರಾಗಿದ್ದಾರೆ. ಈ ದಾಖಲೆಗಳ ಜೊತೆಗೆ ಜನಪದ ಸಾಹಿತ್ಯವೂ ಕೂಡ ಅಷ್ಟೆ ಮಹತ್ವದ ದಾಖಲೆಗಳಾಗುತ್ತವೆ ಎಂದು ಹೇಳಬಹುದು.

"ಸಂಗೊಳ್ಳಿ ರಾಯಣ್ಣನ ಹೋರಾಟ ಪ್ರವೃತ್ತಿಯ ಪ್ರಭಾವ ಕಿತ್ತೂರು ನಾಡಿನಲ್ಲಿ ಸದಾಕಾಲವೂ ಬೂದಿಮುಚ್ಚಿದ ಕೆಂಡದಂತೆ ಇತ್ತು. ಸ್ವಾತಂತ್ರ್ಯ ಚಳುವಳಿ ಭಾರತದಲ್ಲಿ ಹೆಚ್ಚು ಪುಟಗೊಂಡಾಗ ಕಿತ್ತೂರು ನಾಡಿನಲ್ಲಿ ಮತ್ತೆ ರಾಯಣ್ಣನ ಆ ಹೋರಾಟದ ನೆನಪು ಜನತೆಯಲ್ಲಿ ಜಾಗೃತಿಯನ್ನು ಮೂಡಿಸಿತು. ರಾಯಣ್ಣನ ಬಗೆಗಿನ ಬಯಲಾಟಗಳು ಮತ್ತು ಪ್ರಾಸಂಗಿಕ ಹಬ್ಬ ಹರಿದಿನಗಳಲ್ಲಿ ಹಾಕಲಾಗುತ್ತಿದ್ದ ರಾಯಣ್ಣನ ಸೋಗು ಇತ್ಯಾದಿಗಳೆಲ್ಲ ಜನತೆಯಲ್ಲಿ ಸ್ವಾಭಿಮಾನ ಹಾಗೂ ದೇಶಾಭಿಮಾನ ಕೆರಳಿಸುವ ಕಾರ್ಯ ಮಾಡತೊಡಗಿದವು. ಅಸಹಕಾರ ಚಳುವಳಿ, ಬ್ರಿಟೀಷ್ ಸರಕಾರದ ವಿರೋಧಿ ಹೋರಾಟಗಳು ರಾಯಣ್ಣನ ಕಾರ್ಯ ನೆನಪಿಸಲಾರಂಭಿಸಿದವು. ವಾಲಿ ಚೆನ್ನಪ್ಪನವರಂಥ ಉಗ್ರ ಸ್ವಾತಂತ್ರ್ಯ ಹೋರಾಟಗಾರರು ಗಾಂಧೀಜಿ ಮುಂತಾದವರಿಗಿಂತ ಹೆಚ್ಚಿನ ಸ್ಫೂರ್ತಿ ತಮಗೆ ರಾಯಣ್ಣನ ಹೋರಾಟದ ಸ್ಮರಣೆಯಿಂದ ಸಿಕ್ಕಿತೆಂಬುದಾಗಿ ಹೇಳುತ್ತಿದ್ದುದನ್ನು ನೆನೆದಾಗ, ಅವನ ಹೋರಾಟದ ಪ್ರಭಾವ ಎಷ್ಟೊಂದು ದೀರ್ಘ ಪರಿಣಾಮಕಾರಿಯಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಕೊನೆಗೊಮ್ಮೆ ಸ್ವಾತಂತ್ರ್ಯ ಪ್ರಾಪ್ತಿ ಮತ್ತು ಪ್ರಜಾರಾಜ್ಯದ ಸ್ಥಾಪನೆಯೊಂದಿಗೆ ಅವನ ಬಲಿದಾನ ಸಾರ್ಥಕವಾಯಿತೆಂಬುದು ಜನಸಾಮಾನ್ಯರ ವಿಜಯದ ಸಂಕೇತ. ಸಂಗೊಳ್ಳಿ ರಾಯಣ್ಣನೆಂದರೆ ಜನಸಾಮಾನ್ಯರ ಶಕ್ತಿಯಲ್ಲಿ ಸತ್ತ್ವದ ಪ್ರತೀಕ."[೧] ಕರ್ನಾಟಕದಲ್ಲಿ ಭಾರತೀಯ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಉತ್ತರ ಕರ್ನಾಟಕದ ಹೋರಾಟಗಾರರಿಗೆ ಕಿತ್ತೂರು ರಾಣಿ ಚೆನ್ನಮ್ಮ ಮತ್ತು ಸಂಗೊಳ್ಳಿ ರಾಯಣ್ಣ ಸ್ಫೂರ್ತಿಯಾಗಿದ್ದಾರೆ.

ಒಂದು ನಾಡಿನ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಇಂದಿನ ಘಟನೆಗಳನ್ನು ತಿಳಿಸಿ ಹೇಳುವ ದಾಖಲೆಗಳು ಬಹುಮುಖ್ಯವಾದ ಪಾತ್ರವಹಿಸುತ್ತವೆ. ಸಾಮಾನ್ಯವಾಗಿ ದಾಖಲು ಎಂದರೆ ಲಿಪಿ ಮಾಧ್ಯಮದಲ್ಲಿ ಬರೆದದ್ದು. ಲಿಖಿತ ಸಾಹಿತ್ಯ ಎಂದರ್ಥ. ದಾಖಲು ಸಾಹಿತ್ಯದಲ್ಲಿ ಶಾಸನ, ಕಡತ, ಕೈಫಿಯತ್ತು, ನಾಮೆ, ವಂಶಾವಳಿ, ಸ್ಥಳಮಹಾತ್ಮೆಗಳು ಪ್ರಮುಖ ಪಾತ್ರವಹಿಸುತ್ತವೆ. ಆಧುನಿಕ ಪೂರ್ವ ಕರ್ನಾಟಕದ ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಚರಿತ್ರೆಯ ಅಧ್ಯಯನಕ್ಕೆ ದಾಖಲೆಗಳು ಪ್ರಮುಖ ಆಕರಗಳಾಗಿವೆ. ಇದಕ್ಕೆ ಸಂಗೊಳ್ಳಿ ರಾಯಣ್ಣನ ಚರಿತ್ರೆಯು ಸೇರಿದಂತೆ, ಕಿತ್ತೂರು ಸಂಸ್ಥಾನದ ಅಧ್ಯಯನಕ್ಕೆ ದಾಖಲೆಗಳು ಪ್ರಧಾನ ಆಕರಗಳಾಗಿವೆ. ಜೊತೆಗೆ ಅಂದಿನ

ಕಾಲದ ಮೌಖಿಕ ಹಾಗೂ ಲಿಖಿತ ಸಾಹಿತ್ಯವೂ ಕೂಡ ಅಷ್ಟೆ ಪ್ರಮುಖ ಪಾತ್ರವಹಿಸುತ್ತದೆ ಎಂದು ಹೇಳಬೇಕು.

ಕರ್ನಾಟಕದ ಪ್ರಮುಖ ಸಂಸ್ಥಾನಗಳಲ್ಲಿ ಕಿತ್ತೂರು ಸಂಸ್ಥಾನವೂ ಒಂದು. ಈ ಸಂಸ್ಥಾನವು ಕ್ರಿ. ಶ ೧೫೮೫ ರಿಂದ ೧೮೨೪ರವರೆಗೆ ೧೨ ಜನ ದೇಸಾಯಿಯರು ಆಳ್ವಿಕೆಯನ್ನು ಮಾಡಿದ್ದಾರೆ. ಇವರಲ್ಲಿ ಮಲ್ಲಸರ್ಜ ದೇಸಾಯಿಯು ಪ್ರಮುಖನಾಗಿದ್ದಾನೆ. ಮಲ್ಲಸರ್ಜನಿಗೆ ಇಬ್ಬರು ರಾಣಿಯರು ರುದ್ರಮ್ಮ ಮತ್ತು ಚೆನ್ನಮ್ಮ. ಮಲ್ಲಸರ್ಜನ ಎರಡನೆಯ ಹೆಂಡತಿಯಾದ ರಾಣಿ ಚೆನ್ನಮ್ಮ ಕರ್ನಾಟಕದ, ಭಾರತದ ಚರಿತ್ರೆಯಲ್ಲಿ ಅಜರಾಮರವಾಗಿದ್ದಾಳೆ. ಬ್ರಿಟಿಷರ ವಿರುದ್ಧ ೧೮೨೪ ರಲ್ಲಿ ಅಂದರೆ ೧೮೫೭ರ ಭಾರತೀಯ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕಿಂತ ಮೊದಲೇ ಕಿತ್ತೂರಿನ, ದೇಶಿಯ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿರುವುದನ್ನು ಕಾಣುತ್ತೇವೆ. ಕಿತ್ತೂರು ಸಂಸ್ಥಾನ ಎಂದ ತಕ್ಷಣ ನಮ್ಮ ನೆನಪಿಗೆ ಬರುವ ವ್ಯಕ್ತಿಗಳೆಂದರೆ ಕಿತ್ತೂರು ರಾಣಿ ಚೆನ್ನಮ್ಮ ಹಾಗೂ ಸಂಗೊಳ್ಳಿ ರಾಯಣ್ಣ. ಅದರಲ್ಲಿಯೂ ಕಿತ್ತೂರು ಸಂಸ್ಥಾನವನ್ನು ಬ್ರಿಟಿಷರ ಆಡಳಿತದಿಂದ ಮುಕ್ತಗೊಳಿಸಬೇಕೆಂದು ರಾಯಣ್ಣ ಮಾಡಿದಂತಹ ಹೋರಾಟದ ಪಾತ್ರ ಹಿರಿದಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ರಾಯಣ್ಣನ ಉಲ್ಲೇಖವಿರುವ ಮತ್ತು ಅವನನ್ನು ಕುರಿತಾದ ದಾಖಲೆಗಳಿಗೆ ಒತ್ತು ಕೊಡಲಾಗಿದೆ.

ಸಂಗೊಳ್ಳಿ ರಾಯಣ್ಣನ ಚರಿತ್ರೆಯನ್ನು ರಚಿಸುವಲ್ಲಿ ಮೌಖಿಕ ಸಾಹಿತ್ಯ ಮತ್ತು ದಾಖಲು (ಲಿಖಿತ)ಸಾಹಿತ್ಯ ಪ್ರಮುಖ ಪಾತ್ರವಹಿಸುತ್ತವೆ. ಮೌಖಿಕ ಸಾಹಿತ್ಯದಲ್ಲಿ ಲಾವಣಿ, ಕೋಲು, ಡೊಳ್ಳು ಮುಂತಾದವುಗಳನ್ನೊಳಗೊಂಡರೆ, ದಾಖಲೆಗಳಲ್ಲಿ ಬ್ರಿಟಿಷ್ ಅಧಿಕಾರಿಗಳ ಪತ್ರ ವ್ಯವಹಾರಗಳು, ಜೀವನ ಚರಿತ್ರೆಗಳು, ಆತ್ಮ ಚರಿತ್ರೆಗಳು ಹಾಗೂ ವಸ್ತು ಸಂಗ್ರಹಾಲಯಗಳು ಮುಖ್ಯವಾಗುತ್ತವೆ. ಈ ಕುರಿತು ಎಚ್. ಜೆ. ಸ್ಟೋಕ್ಸ್ ಅವರ A historical account of belgaum district ಡಾ. ಶ್ರೀನಿವಾಸ ಹಾವನೂರ ಅವರು 'ಬ್ರಿಟಿಷ್ ದಾಖಲೆಗಳು ರೂಪಿಸಿದ ಸಂಗೊಳ್ಳಿ ರಾಯಣ್ಣ' ಎಂಬ ಲೇಖನ ಮತ್ತು ಜ್ಯೋತಿ ಹೊಸೂರ ಅವರ 'ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ' ಹಾಗೂ ಬೆಳಗಾವಿ, ಸಂಪಂಗಾವ ಕಿತ್ತೂರು ಪರಿಸರದಲ್ಲಿ ಕ್ಷೇತ್ರಕಾರ್ಯದ ನೆರವಿನಿಂದ ದೊರೆತ ಮಾಹಿತಿಗಳಿಂದ ರಾಯಣ್ಣನನ್ನು ಕುರಿತ ದಾಖಲೆಗಳನ್ನು ಸಂಕ್ಷಿಪ್ತವಾಗಿ ಮತ್ತು ಸ್ಥೂಲವಾಗಿ ಇಲ್ಲಿ ಚರ್ಚಿಸಲಾಗಿದೆ. ರಾಯಣ್ಣ ಇತ್ತೀಚಿನ ವ್ಯಕ್ತಿಯಾಗಿರುವುದರಿಂದ (೧೮೨೪)ಅವನನ್ನು ಕುರಿತು ಶಾಸನಗಳಿಲ್ಲ. ಪ್ರಾಚೀನ ಹಸ್ತಪ್ರತಿಗಳು ಲಭ್ಯವಿಲ್ಲ. ನಮಗೆ ಬ್ರಿಟಿಷರ ದಾಖಲೆಗಳು ಮತ್ತು ಮೌಖಿಕ ಸಾಹಿತ್ಯ ತುಂಬಾ ಸಹಾಯಕವಾಗಿವೆ.

ರಾಯಣ್ಣನ ವೃತ್ತಾಂತವನ್ನು ಮೊತ್ತಮೊದಲಿಗೆ "ಎಚ್. ಜೆ. ಸ್ಟೋಕ್ಸ್ ಎಂಬ ಆಂಗ್ಲ ಅಧಿಕಾರಿಯು ಬರೆದ 'A Historical Account of the Belgaum District' (೧೮೭೦)ಗ್ರಂಥದಲ್ಲಿ ಬಂದಿದೆ. ಅದು ನಾಲ್ಕೆ ಪುಟಗಳದ್ದಾದರೂ ಅಧಿಕೃತವಾದದ್ದು."[೨] ಈ

ಕೃತಿಯಲ್ಲಿ ರಾಯಣ್ಣನ ಕುರಿತು ಮಹತ್ವದ ಅಂಶಗಳು ದಾಖಲಾಗಿವೆ. ಈ ದಾಖಲೆಗಳಲ್ಲಿ ಎದ್ದು ಕಾಣುವ ಅಂಶವೆಂದರೆ, ಬ್ರಿಟಿಷ್ ಸರ್ಕಾರದವರು ರಾಯಣ್ಣನ ಹೋರಾಟವನ್ನು ಕಿತ್ತೂರಿನ ಸಿಪಾಯಿಗಳ ದಂಗೆ ಎಂದು ಕರೆದರು. ಅವರ ದೃಷ್ಟಿಯಲ್ಲಿ ಕಿತ್ತೂರಿನ ದಂಗೆಯು ೧೮೨೪ರಿಂದ ೧೮೩೦ ರವರೆಗೆ ರಾಯಣ್ಣ ಹಾಗೂ ಅವನ ಸಹಚರರು ಹೋರಾಟ ಮಾಡಿರುವುದು ಕಂಡುಬರುತ್ತದೆ.

ಎಚ್. ಜೆ. ಸ್ಟೋಕ್ಸ್ ಎಂಬ ಆಂಗ್ಲ ಅಧಿಕಾರಿಯ ದಾಖಲೆಯಲ್ಲಿ (ವರದಿಯಲ್ಲಿ)ಕೆಲವು ಮುಖ್ಯ ಅಂಶಗಳು ದಾಖಲಾಗಿವೆ. ಅವುಗಳನ್ನು ಹೀಗೆ ಸಂಗ್ರಹಿಸಿ ಹೇಳಬಹುದು. ಸಂಗೊಳ್ಳಿಯ ಕುಲಕರ್ಣಿಯ ಅಧಿಕಾರತ್ವ, ಪ್ರಭುತ್ವ ಇದು ರಾಯಣ್ಣನ ಸ್ವಾಭಿಮಾನವನ್ನು ಕೆರಳಿಸಿತು. ರಾಯಣ್ಣ ಕಿತ್ತೂರಿಗೆ ನಿಷ್ಟನಾಗಿ ಇದ್ದದ್ದೂ, ಚೆನ್ನಮ್ಮಳು ದತ್ತು ಮಕ್ಕಳಿಗೆ ಹಕ್ಕಿಲ್ಲ ಎಂಬ ಬ್ರಿಟಿಷರ ಆಜ್ಞೆಗೆ ವಿರೋಧಿಸಿದ್ದು, ಇಂತಹ ಅಂಶಗಳಿಂದ ಬ್ರಿಟಿಷರು ರಾಯಣ್ಣನನ್ನು ಮನ್ನಿಸಲು ಯತ್ನಿಸಿದವು. ಅದನ್ನೂ ಹೀಗೂ ಹೇಳಬಹುದು. ಬ್ರಿಟಿಷರ ಸಾರ್ವಭೌಮತ್ವದ ವಿರುದ್ಧ ದಂಗೆ ಹೇಳಲು ಕಾರಣವಾಗಿದೆ. ಈ ದಾಖಲೆಗಳಲ್ಲಿ ಇನ್ನೊಂದು ಪ್ರಮುಖ ಅಂಶವೆಂದರೆ ರಾಯಣ್ಣನಿಗೆ ಸಂಪಂಗಾವ, ಸಂಗೊಳ್ಳಿ, ಕಿತ್ತೂರಿನ ಜನಸಾಮಾನ್ಯರು ಹಾಗೂ ಕೆಲ ಶ್ರೀಮಂತರು ಬೆಂಬಲವನ್ನು ಕೊಟ್ಟಿದ್ದರೆ, ಇನ್ನೂ ಕೆಲವರು ವಿರೋಧಿಸಿರುವ ಅಂಶ ದಾಖಲಾಗಿದೆ. ರಾಯಣ್ಣ ಬ್ರಿಟಿಷರ ವಿರುದ್ಧ ಪೂರ್ವ ತಯಾರಿಯಿಂದಲೆ ಹೋರಾಟ ನಡೆಸಿದ. ರಾಯಣ್ಣನ ಹೋರಾಟ ಗೆರಿಲ್ಲಾ ಯುದ್ಧ. ಬ್ರಿಟಿಷ್ ಸೇನಾ ಪಡೆಗಳ ಮೇಲೆ ದುತ್ತೆಂದು ದಾಳಿ ಮಾಡಿ ಅರಣ್ಯದಲ್ಲಿ ಮರೆಯಾಗುತ್ತಿದ್ದ.

ರಾಯಣ್ಣನ ಹೋರಾಟದ ಆರಂಭದ ದಿನಾಂಕದ ಕುರಿತು ಹಲವು ಕೃತಿಗಳಲ್ಲಿ ಭಿನ್ನತೆಗಳಿರುವುದನ್ನು ನಾವು ಗಮನಿಸಬಹುದು. ಶ್ರೀನಿವಾಸ ಹಾವನೂರ ಅವರು ರಾಯಣ್ಣನ ಹೋರಾಟದ ಬಗ್ಗೆ 'ಬ್ರಿಟಿಷ್ ದಾಖಲೆಗಳು ರೂಪಿಸಿದ ಸಂಗೊಳ್ಳಿ ರಾಯಣ್ಣ' ಲೇಖನದಲ್ಲಿ ದಾಖಲೆಗಳ ಪ್ರಕಾರ ಮೊದಲ ದಾಳಿಯು ದಿನಾಂಕ ೦೫.೦೧.೧೮೩೦ರ ನಡುರಾತ್ರಿಯಲ್ಲಿ ಬೀಡಿಯ ಮೇಲಾಯಿತು ಎಂಬ ಈ ಅಂಶವನ್ನು ಹೆಚ್ಚಿನ ಕೃತಿಗಳಲ್ಲಿ ತಿಳಿಸಿದ್ದಾರೆ. ಈ ದಾಖಲೆಯಲ್ಲಿನ ಮತ್ತೊಂದು ಪ್ರಮುಖ ಅಂಶವೆಂದರೆ ಕಿತ್ತೂರಿನ ಸುತ್ತ ಮುತ್ತಲಿನ ಜನರು ರಾಯಣ್ಣನಿಗೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಹಾಯ ಮಾಡುತ್ತಿದ್ದರ ಕುರಿತು ವರದಿಯಾಗಿದೆ.

ಕಿತ್ತೂರಿನ ಜನತೆ ರಾಯಣ್ಣನ ಹೋರಾಟಕ್ಕೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಾಯವನ್ನು ಮಾಡುತ್ತಿದ್ದರು. ರಾಯಣ್ಣ ಜನರಿಗೆ ಒಂದು ಮಾಹಿತಿ ತಿಳಿಸಿ ತಾನು ಮತ್ತೊಂದು ಕಡೆ ದಾಳಿ ಮಾಡುತ್ತಿದ್ದ. ಜನರು ಬ್ರಿಟಿಷರ ದಾರಿಯನ್ನು ತಪ್ಪಿಸಲು ರಾಯಣ್ಣನ ಕುರಿತು ಸುಳ್ಳು ಮಾಹಿತಿಯನ್ನು ತಿಳಿಸುತ್ತಿದ್ದರು. ಹಾಗೂ ರಾಯಣ್ಣನ ಕುರಿತು ಜನರು ಬ್ರಿಟಿಷರಿಗೆ ಬಗೆ-ಬಗೆಯ ಕಡೆ ರಾಯಣ್ಣನ ಇರುವಿಕೆಯನ್ನು ಹೇಳುತ್ತಿದ್ದರು. ಇಂತಹ ಮಾಹಿತಿಗಳಿಂದ ಬ್ರಿಟಿಷರು ಗೊಂದಲಗೊಳ್ಳುತ್ತಿದ್ದರು. ಕಿತ್ತೂರಿನ ಸುತ್ತ ಮುತ್ತಲಿನ ಜನತೆಯು ಬ್ರಿಟಿಷರ ಸೈನ್ಯವನ್ನು ಹರಿದು ಹಂಚಿ ಹೋಗುವಂತೆ

ರಾಯಣ್ಣನಿಗೆ ಸಹಕಾರವನ್ನು ನೀಡುತ್ತಿದ್ದರು. ಇದಕ್ಕೆ ಸಂಬಂಧಿಸಿದಂತೆ ಕ್ಯಾಥಿಯಾರ್ಟ ಎಂಬ ಬ್ರಿಟಿಷ ಅಧಿಕಾರಿಯು 'ಆ ಭಾಗದ ಗ್ರಾಮದ ಊರ ಶೇತ್ ಸನದಿಗಳು ಅಮಲ್ದಾರರಿಗೆ ಬಂಡಾಯಗಾರರ ವಿರುದ್ಧ ಏನು ಸಹಾಯ ನೀಡಲಿಲ್ಲ. ಅವರು ಬಂಡಾಯಗಾರರ ಜೊತೆ ಸಹಕರಿಸಿ ಅವರಿಗೆ ಮಾಹಿತಿಯನ್ನು ನೀಡುತ್ತಾರೆ. ಕಿತ್ತೂರು ನಾಡಿನ ಪ್ರಜೆಗಳಾದವರೆಲ್ಲ ಹೀಗೆ ಮಾಡಿದ್ದಾರೆ.' ಎಂದು ವರದಿ ಮಾಡಿದ್ದಾನೆ. ಈ ವರದಿಯ ಅರ್ಥ ಕಿತ್ತೂರಿನ ಜನರು ರಾಯಣ್ಣನ ಹೋರಾಟಕ್ಕೆ ಹಾಗೂ ಕಿತ್ತೂರು ಸಂಸ್ಥಾನವನ್ನು ಮರಳಿ ಸ್ಥಾಪಿಸಬೇಕು ಎಂಬಂತಹ ಹಂಬಲವಿರುವುದನ್ನು ಹಾಗೂ ದೇಶ ಪ್ರೇಮವಿರುವುದನ್ನು ಕಾಣಬಹುದು.

ಬ್ರಿಟಿಷ್ ಅಧಿಕಾರಿಗಳ ದಾಖಲೆಗಳ ಪ್ರಕಾರ ರಾಯಣ್ಣನ ಮೊದಲ ದಾಳಿಯು ದಿನಾಂಕ ೦೫.೦೧.೧೮೩೦ರ ಮಧ್ಯರಾತ್ರಿಯಲ್ಲಿ ರಾಯಣ್ಣ ಹಾಗೂ ಸಹಚರರು ಬೀಡಿ ಕಚೇರಿಯ ಮೇಲೆ ದಾಳಿ ಮಾಡಿ, ಖಜಾನೆಯಲ್ಲಿದ್ದಂತಹ ೧೯೦೯ರೂಗಳನ್ನೂ ವಶಪಡಿಸಿಕೊಂಡು, ಖಜಾನೆಯಲ್ಲಿನ ಕಾಗದ ಪತ್ರಗಳನ್ನ ಸುಟ್ಟು ಹಾಕಿದರು. ಬೀಡಿಯ ಮೇಲೆ ದಾಳಿ ಮಾಡಲು ಆಯ್ಕೆ ಮಾಡಿಕೊಳ್ಳಲು ರಾಯಣ್ಣನಿಗೆ ತನ್ನ ಗುಪ್ತಚರರಿಂದ ಬೀಡಿ ಕಚೇರಿಯಲ್ಲಿ ಸಾಕಷ್ಟು ಹಣವಿದೆ ಎಂಬ ಮಾಹಿತಿಯಿಂದ ದಾಳಿ ಮಾಡಿದ. ಆದರೆ, ರಾಯಣ್ಣ ದಾಳಿ ಮಾಡುವ ಮುನ್ನ ದಿನ ೨೮,೦೦೦ ರೂಪಾಯಿಗಳನ್ನು ಮುಂಬೈಗೆ ಕಳುಹಿಸಲಾಗಿತ್ತು.

ರಾಯಣ್ಣ ಬೀಡಿ ಕಚೇರಿಯ ಮೇಲೆ ದಾಳಿ ಮಾಡಿದ ಸುದ್ದಿ ಕಿತ್ತೂರಿನಾದ್ಯಂತ ಹರಡಿತ್ತು. ಕಿತ್ತೂರಿನ ಜನತೆಯೂ ರಾಯಣ್ಣನ ಹೋರಾಟಕ್ಕೆ ಬೆಂಬಲವಾಗಿ ನಿಂತರು, ಜನರು ತಂಡ ತಂಡವಾಗಿ ಬಂದು ಸೇರಿ ರಾಯಣ್ಣನ ಹೋರಾಟಕ್ಕೆ ಪ್ರೋತ್ಸಹವನ್ನು ನೀಡಿದರು. ರಾಯಣ್ಣ ಬೀಡಿ ಕಚೇರಿಯ ನಂತರ ನಂದಗಡ ಮೇಲೆ ದಾಳಿಯನ್ನು ಮಾಡುತ್ತಾನೆ. "ಬೀಡಿ ತಾಲೂಕ ಕಚೇರಿಯನ್ನು ಆಕ್ರಮಿಸಿ ಸರಕಾರಿ ಹಣ ಪಡೆದು, ಸರಕಾರಿ ಕಾಗದ ಪತ್ರಗಳನ್ನೆಲ್ಲ ಸುಟ್ಟು ಬೂದಿ ಮಾಡಿದ ಸಮಾಚಾರ ಎಲ್ಲೆಡೆ ಹಬ್ಬಿತು. ಅದನ್ನು ಕೇಳಿ ತಿಳಿದ ನಂದಗಡ ಗ್ರಾಮ ಮತ್ತು ಆ ಭಾಗದಲ್ಲಿಯ ಜನಸಾಮಾನ್ಯರು ರಾಯಣ್ಣ ಹಾಗೂ ಅವನ ತಂಡದವರಿಗೆ ಮನಸ್ಸಿನಲ್ಲಿ ಅಭಿನಂದನೆ ಸಲ್ಲಿಸಿದರು. ಅವರೆಲ್ಲ ಹೋರಾಟಗಾರರು ತಮ್ಮ ಭಾಗದ ಕಡೆಗೆ ಬಂದರೆ ಒಳಿತೆಂದು ಬಯಸುತಲಿದ್ದರು. ಅವರ ಬಯಕೆಯಂತೆಯೇ ಅವರೆಲ್ಲ ತಂಡ ತಂಡಗಳಲ್ಲಿ ಮುಂಜಾನೆ ಸುಮಾರು ಆರೇಳು ಗಂಟೆಯ ಸಮಯಕ್ಕೆ ನಂದಗಡ ತಲುಪಿದರು."[3] ಕಿತ್ತೂರಿನ ಸುತ್ತ ಮುತ್ತಲಿನ ಪ್ರದೇಶದ ಜನರು ರಾಯಣ್ಣ ಬೀಡಿ ಕಚೇರಿಯ ಮೇಲೆ ದಾಳಿ ಮಾಡಿದ ಸುದ್ದಿಯನ್ನು ತಿಳಿದ ನಂತರ ಬ್ರಿಟಿಷರ ವಿರುದ್ಧ ಹೋರಾಟ ಮಾಡುವುದಕ್ಕೆ ಕಾಯುತ್ತಿದ್ದಂತಹ ನೂರಾರು ಹೋರಾಟಗಾರರು ರಾಯಣ್ಣನ ಜೊತೆ ಸೇರತೊಡಗಿದರು. ಹೀಗೆ, ರಾಯಣ್ಣ ಬ್ರಿಟಿಷರ ಒಂದೊಂದೆ ಕಚೇರಿಗಳ ಮೇಲೆ ದಾಳಿಯನ್ನು ಮಾಡುತ್ತಾನೆ. ರಾಯಣ್ಣನ ಹೋರಾಟ(ದಾಳಿ)ಗಳಿಂದ ಬ್ರಿಟಿಷರು ಕಂಗಲಾಗುತ್ತಾರೆ. ರಾಯಣ್ಣ ಗೆರಿಲ್ಲಾ ಯುದ್ಧದ ಮೂಲಕ ಬ್ರಿಟಿಷರಿಗೆ ಸಿಂಹಸ್ವಪ್ನನಾಗುತ್ತಾನೆ. ರಾಯಣ್ಣನ ಹೋರಾಟಕ್ಕೆ

ರಾಣಿ ಪರಿವಾರದವರೆ ಕಾರಣವೆಂದು ಬ್ರಿಟಿಷ್ ಅಧಿಕಾರಿಗಳು ರಾಣಿ ಚೆನ್ನಮ್ಮನ ಸಾವಿನ ನಂತರ ಕಿತ್ತೂರಿ ಕೊನೆಯ ರಾಣಿಯಾದ ವೀರಮ್ಮನನ್ನು ಬೈಲುಹೊಂಗಲದಿಂದ ಕುಸುಗಲ್ಲಿಗೆ ಸ್ಥಳಾಂತರ ಮಾಡುತ್ತಾರೆ. ಕಿತ್ತೂರಿನ ಕೊನೆಯ ರಾಣಿಯ ಸ್ಥಳಾಂತರದ ಬಗ್ಗೆ ಕಿತ್ತೂರಿನ ಜನತೆಗೆ ಅಸಮಾಧಾನತೆಯಿತ್ತು. ಆದರೆ ಕಿತ್ತೂರಿನ ಜನತೆಯೂ ಅಸಹಾಯಕ ಸ್ಥಿತಿಯಲ್ಲಿದ್ದರು. ಬ್ರಿಟಿಷರು ರಾಯಣ್ಣ ಯಾವುದೇ ಸಮಯದಲ್ಲಿ ದಾಳಿ ಮಾಡಬಹುದೆಂದು ಮುನ್ನೆಚ್ಚರಿಕೆಯಿಂದ ಹೆಚ್ಚಿನ ಸೈನ್ಯದೊಂದಿಗೆ ಕಿತ್ತೂರಿನ ಕೊನೆಯ ರಾಣಿ ವೀರಮ್ಮನನ್ನು ಕುಸುಗಲ್ಲಿಗೆ ಸ್ಥಳಾಂತರ ಮಾಡಿದರು. ವೀರಮ್ಮ ರಾಣಿಯನ್ನು ಸ್ಥಳಾಂತರ ಮಾಡಿದುದರಿಂದ ಕಿತ್ತೂರಿನ ಜನತೆಯಲ್ಲಿ ಮತ್ತಷ್ಟು ಜಾಗೃತಿಯನ್ನು ಮೂಡಿಸಿತು.

ರಾಯಣ್ಣ ಬೀಡಿ, ನಂದಗಡ, ಖಾನಾಪೂರ, ಇಟಗಿ, ಸಂಶೆರ್‌ಗಡ, ಸಂಗೊಳ್ಳಿ, ಪಾರಿಶ್ವಾಡ, ಅಂಕಲಗಿ, ಕಿತ್ತೂರು, ಸಂಪಾಂಗವ, ಹಳಿಯಾಳ ಹೀಗೆ ಅನೇಕ ಬ್ರಿಟಿಷರ ಕೇಂದ್ರಗಳ ಅಥವಾ ಕಚೇರಿಗಳ ಮೇಲೆ ರಾಯಣ್ಣ ದಾಳಿಯನ್ನು ಮಾಡುತ್ತಾನೆ. ರಾಯಣ್ಣನ ದಾಳಿಗಳಿಂದ ಕಂಗೆಟ್ಟ ಬ್ರಿಟಿಷ್ ಅಧಿಕಾರಿಗಳು ರಾಯಣ್ಣನನ್ನು ನೇರವಾಗಿ ಹಿಡಿಯಲು ಸಾಧ್ಯವಿಲ್ಲ ಎಂದು ಭಾರತದಾದ್ಯಂತ ನಡೆಸಿದ ಕುತಂತ್ರದ ಮೂಲಕ ರಾಯಣ್ಣನನ್ನು ಹಿಡಿಯಲು ಸಂಚನ್ನು ರೂಪಿಸುತ್ತಾರೆ. ಬ್ರಿಟಿಷರ ವಿರುದ್ಧ ರಾಯಣ್ಣ ಗೆರಿಲ್ಲಾ ಯುದ್ಧಗಳ ಮೂಲಕ ಕಾಡತೊಡಗುತ್ತಾನೆ. ರಾಯಣ್ಣನ ಹೋರಾಟಗಳಿಂದ ಹೊರಬರಲಾಗದ ಬ್ರಿಟಿಷರು ರಾಯಣ್ಣನ್ನು ಹಿಡಿಯಲು ಕಿತ್ತೂರಿನವರನ್ನು ಬಳಸಿಕೊಂಡು ಮೋಸದ ಮೂಲಕ ಹಿಡಿದು ಗಲ್ಲಿಗೇರಿಸುತ್ತಾರೆ.

ರಾಯಣ್ಣನ ಕುರಿತು ಮೊಟ್ಟಮೊದಲು ಚರಿತ್ರೆಯನ್ನು ಬರೆದವರು ಎಚ್. ಜೆ. ಸ್ಟೋಕ್ಸ್. 'A Historical Account of the Belgaum District' ೧೮೭೦ ರಲ್ಲಿ ರಚಿಸಿದ್ದಾರೆ. ಈ ಕೃತಿಯಲ್ಲಿ ರಾಯಣ್ಣನ ಕುರಿತು ನಾಲ್ಕು ಪುಟಗಳಿದ್ದರೂ ಸಹ ರಾಯಣ್ಣನ ಕಾಲಘಟ್ಟದಲ್ಲಿಯೇ ರಚನೆಗೊಂಡಿದ್ದು ಹಾಗೂ ಸಂಪಗಾವಿಯ ಮಾಮಲೇದಾರನಾಗಿದ್ದ ಕೃಷ್ಣರಾವ್‌ನ ಮಗನು ಮಾಹಿತಿಯನ್ನು ನೀಡಿರುವುದರಿಂದ ಸತ್ಯಕ್ಕೆ ಸಮೀಪವಾಗಿದೆ ಎಂದು ಹೇಳಬಹುದು.

ಭಾರತೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಸಾಹಿತ್ಯದ ಪಾತ್ರ ಅನನ್ಯವಾದದ್ದು. ಸಾಹಿತ್ಯ ಮತ್ತು ಚರಿತ್ರೆ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಸಾಹಿತ್ಯವು ಅಂದಿನ ಕಾಲದ ಸಾಮಾಜಿಕ, ಆರ್ಥಿಕ, ರಾಜಕೀಯ ಮುಂತಾದ ಅಂಶಗಳನ್ನು ತಿಳಿಸಿ ಸಹಕಾರಿಯಾಗುತ್ತದೆ. ಹಾಗೂ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಜನರಲ್ಲಿ ಐಕ್ಯತೆಯನ್ನು ಮೂಡಿಸುವುದಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ತಮ್ಮ ಬದುಕನ್ನು ತ್ಯಾಗ ಮಾಡಿದವರ ಜೀವನ ಚಿತ್ರಣವನ್ನು ಚಿತ್ರಿಸುವುದರ ಜೊತೆಗೆ ಹೋರಾಟಗಾರರ ಪ್ರೇರಣೆಯನ್ನು ನೀಡುತ್ತದೆ. ಕತೆ, ಕಾದಂಬರಿ, ನಾಟಕ, ಸಂಶೋಧನೆಗಳು ಹಾಗೂ ಮೌಖಿಕ ಸಾಹಿತ್ಯ ಜನರಲ್ಲಿ ಜಾಗೃತಿಯನ್ನು ಮೂಡಿಸಿರುವುದನ್ನು ಕಾಣುತ್ತೇವೆ.

ರಾಯಣ್ಣನಿಗೆ ಸಂಬಂಧಿಸಿದಂತೆ ಇದುವರೆಗೂ ಬಂದಿರುವ ಕೃತಿಗಳಲ್ಲಿ ಒಂದಕ್ಕಿಂತ ಒಂದು ಭಿನ್ನವಾಗಿದ್ದು, ನಮ್ಮನ್ನು ದ್ವಂದ್ವದೆಡೆಗೆ ಕರೆದೊಯ್ಯುತ್ತವೆ. ಕುಟುಂಬದ ಸದಸ್ಯರ ಕುರಿತು, ವಿವಾಹ, ಸಹೋದರರನ ಕುರಿತು ಈವರೆಗೆ ಬಂದಿರುವ ಕೃತಿಗಳಲ್ಲಿ ವ್ಯತ್ಯಾಸವಿರುವುದನ್ನು ಗಮನಿಸಬಹುದು. ರಾಯಣ್ಣನ ವಂಶಜರ ಕುರಿತು ಹಾಗೂ ವಿವಾಹದ ಕುರಿತು ಇತ್ತೀಚಿನ ದಿನಗಳಲ್ಲಿ ತುಂಬ ಚರ್ಚೆಯಾಗುತ್ತಿರುವುದನ್ನು ಸಹ ಗಮನಿಸಬಹುದು.

ಸಂಗೊಳ್ಳಿ ರಾಯಣ್ಣನನ್ನು ಕುರಿತು ಹಲವಾರು ಸಂಶೋಧನಾ ಕೃತಿಗಳು ರಚನೆಗೊಂಡಿವೆ. ಈ ಸಂಶೋಧನಾ ಕೃತಿಗಳಲ್ಲಿ ರಾಯಣ್ಣನಿಗೆ ಸಂಬಂಧಿಸಿದಂತೆ ಮನೆತನ, ವೃತ್ತಿ, ಜಾತಿ, ರಾಯಣ್ಣನ ಬಾಲ್ಯ ಚಿತ್ರಣ, ಸಹೋದರರನ ಚಿತ್ರಣ, ಸಹೋದರಿಯ ಚಿತ್ರಣ, ವಿವಾಹದ ಕುರಿತು, ಮಗನ ಕುರಿತು, ಕಿತ್ತೂರು ಸಂಸ್ಥಾನದಲ್ಲಿ ರಾಯಣ್ಣನ ಪಾತ್ರ, ಕಿತ್ತೂರು ಬ್ರಿಟಿಷರ ವಶವಾದ ನಂತರ ಕಿತ್ತೂರನ್ನ ಮತ್ತೇ ಸ್ವಾತಂತ್ರ್ಯಗೊಳಿಸಲು ನಡೆಸಿದಂತಹ ಹೋರಾಟದ ಕುರಿತು ಮಾಹಿತಿಯನ್ನು ತಿಳಿಯಲು ಈ ಸಂಶೋಧನ ಕೃತಿಗಳು ಸಹಾಯಕವಾಗುತ್ತವೆ. ಹಾಗೆಯೇ ಈ ಸಂಶೋಧನಾ ಕೃತಿಗಳು ಒಂದಕ್ಕಿಂತ ಒಂದು ಕೃತಿಗಳಲ್ಲಿ ಭಿನ್ನತೆಗಳಿರುವುದನ್ನ ಗಮನಿಸಬಹುದು.

ಭಾರತೀಯ ಐತಿಹಾಸಿಕ ವೀರಪರಂಪರೆಗೆ ಕಿತ್ತೂರಿನಂತಹ ಸಣ್ಣ ಸಂಸ್ಥಾನದ ಪಾತ್ರ ತುಂಬ ಮಹತ್ವದಾಗಿದೆ. ಬ್ರಿಟಿಷರು ಬರೆದಿರುವ ದಾಖಲೆಗಳಿಂದ ಇತಿಹಾಸವನ್ನು ನೋಡಿದ್ದರಿಂದ ಕಿತ್ತೂರಿನ ಹಾಗೂ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ಸತ್ಯಾಂಶಗಳು ಮರೆಮಾಚಿಹೋದಂತೆ ಕಾಣುತ್ತದೆ. ಕಿತ್ತೂರಿನ ದೇಶಾಭಿಮಾನ, ಸ್ವಾಭಿಮಾನ ಹಾಗೂ ಆತ್ಮಗೌರವ ಮುಂತಾದವುಗಳ ಬಗ್ಗೆ ತಿಳಿಯಲು ದಾಖಲೆಗಳಿಲ್ಲದ್ದಿದ್ದರೂ, ಜಾನಪದಕಾರರು ಮಾತ್ರ ಇವುಗಳನ್ನು ತಮ್ಮ ಕಾರ್ಯಗಳಲ್ಲಿ ಅಂದರೆ ಹಾಡುಗಳ ಮೂಲಕ ರಕ್ತರಂಜಿತಗೊಳಿಸಿದ್ದಾರೆ. ಹಾಗೂ ಆಧುನಿಕ ಸಾಹಿತ್ಯದಲ್ಲಿ ಕತೆ, ಕಾದಂಬರಿ, ನಾಟಕ, ಕಾವ್ಯ, ಸಂಶೋಧನೆ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಕಿತ್ತೂರಿನ ಹಾಗೂ ರಾಯಣ್ಣನಿಗೆ ಸಂಬಂಧಿಸಿದಂತೆ ಚಿತ್ರಣಗಳನ್ನು ಪ್ರಮುಖವಾಗಿ ಚಿತ್ರಿಸಿರುವುದನ್ನು ಗುರುತಿಸಬಹುದು. ರಾಯಣ್ಣನ ಹೋರಾಟದ ಚಿತ್ರಣ, ಕಿತ್ತೂರು ಸಂಸ್ಥಾನದ ಚಿತ್ರಣ, ಯುದ್ಧ, ಸ್ವಾತಂತ್ರ್ಯಯೋಧರ ಮನಸ್ಥಿತಿ ಇವುಗಳ ಕುರಿತು ಲಿಖಿತ ಸಾಹಿತ್ಯಕ್ಕಿಂತ ಮೌಖಿಕ ಸಾಹಿತ್ಯದಲ್ಲಿ ಹೆಚ್ಚಾಗಿ ಇರುವುದನ್ನು ಕಾಣುತ್ತೇವೆ. ಕಿತ್ತೂರಿಗೆ ಹಾಗೂ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ಹೇಳಿಕೆಗಳು, ಐತಿಹ್ಯಗಳು, ನಂಬಿಕೆಗಳು, ಕಥೆಗಳು ರಾಯಣ್ಣನ ಕುರಿತ ಹೊಸ ಇತಿಹಾಸವನ್ನು ಪ್ರಮುಖ ಆಧಾರಗಳಾಗುತ್ತವೆ ಎಂಬುದನ್ನು ಮರೆಯಬಾರದು.

ಭಾರತೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ರಾಯಣ್ಣನ ಪಾತ್ರ ಅನನ್ಯವಾದದ್ದು. ಸಾಹಿತ್ಯ ಮತ್ತು ಚರಿತ್ರೆ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಸಾಹಿತ್ಯವು ಅಂದಿನ ಕಾಲದ ಸಾಮಾಜಿಕ, ಆರ್ಥಿಕ, ರಾಜಕೀಯ ಮುಂತಾದ ಅಂಶಗಳನ್ನು ತಿಳಿಸಿ ಸಹಕಾರಿಯಾಗುತ್ತದೆ. ಹಾಗೂ ಸ್ವಾತಂತ್ರ್ಯ

ಚಳುವಳಿಯ ಸಂದರ್ಭದಲ್ಲಿ ಜನರಲ್ಲಿ ಐಕ್ಯತೆಯನ್ನು ಮೂಡಿಸುವುದಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ತಮ್ಮ ಬದುಕನ್ನು ತ್ಯಾಗ ಮಾಡಿದವರ ಜೀವನ ಚಿತ್ರಣವನ್ನು ಚಿತ್ರಿಸುವುದರ ಜೊತೆಗೆ ಹೋರಾಟಗಾರರ ಪ್ರೇರಣೆಯನ್ನು ನೀಡುತ್ತದೆ. ಕತೆ, ಕಾದಂಬರಿ, ನಾಟಕ, ಸಂಶೋಧನೆಗಳು ಹಾಗೂ ಮೌಖಿಕ ಸಾಹಿತ್ಯ ಜನರಲ್ಲಿ ಜಾಗೃತಿಯನ್ನು ಮೂಡಿಸಿರುವುದನ್ನು ಕಾಣುತ್ತೇವೆ.

ರಾಯಣ್ಣನ ಹುಟ್ಟೂರಿನಲ್ಲಿಯೂ ಅವನ ನೆನಪು ಹಸಿರಾಗಿ ಉಳಿಯಲು ಅನಂತರದ ದಿನಗಳಲ್ಲಿ ಸ್ಮಾರಕಗಳು ನಿರ್ಮಾಣಗೊಂಡ ಬಗ್ಗೆ ಮಾಹಿತಿ ಸಿಗುತ್ತದೆ. ಸಂಗೊಳ್ಳಿಯಲ್ಲಿ ಸಣ್ಣದೊಂದು ಕಟ್ಟೆ, ಅವನಿಗಾಗಿ ನಿರ್ಮಾಣವಾಗಿತ್ತು. ಇಂದು ಹಳೆಯ ಸಂಗೊಳ್ಳಿಯು ನವಿಲುತೀರ್ಥ ಅಣೆಕಟ್ಟೆಯ ಹಿನ್ನೀರಿನಲ್ಲಿ ಮುಳುಗಿಹೋಗಿದೆ. ಸಂಗೊಳ್ಳಿ ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ. ಹೊಸ ಸಂಗೊಳ್ಳಿ ಸಮೀಪದಲ್ಲಿಯೇ ಎತ್ತರ ಪ್ರದೇಶದಲ್ಲಿ ನಿರ್ಮಾಣಗೊಂಡಿದೆ. ಈಗ ಸುಮಾರು ಎರಡು ಎಕರೆ ಪ್ರದೇಶ ರಾಯಣ್ಣನ ಹೆಸರಿನಲ್ಲಿ ಸರ್ಕಾರದಿಂದ ಕೊಡಲ್ಪಟ್ಟಿದೆ. ಅಲ್ಲಿ ಇತ್ತೀಚೆಗೆ ರಾಯಣ್ಣನ ಸಮುದಾಯ ಭವನ, ರಾಯಣ್ಣನ ಕಲ್ಲಿನ ಮೂರ್ತಿ ಒಳಗೊಂಡ ಒಂದು ಗುಡಿ ನಿರ್ಮಾಣಗೊಂಡಿವೆ. ಹಳೆಯ ಸಂಗೊಳ್ಳಿಯ ಗುಡಿ ನೀರುಪಾಲಾಗಿ ಹೋಗಿ ಅದು ಎಲ್ಲಿದೆ ಎಂಬುದು ಈಗ ತಿಳಿಯದಂಥ ಪರಿಸ್ಥಿತಿ ಇದೆ. ಇತ್ತೀಚೆಗೆ ಕಂಚಿನ ಆಳೆತ್ತರದ ಮೂರ್ತಿಯೂ ನಿರ್ಮಾಣವಾಗಿ ಅನಾವರಣಗೊಂಡಿದೆ.

ಐತಿಹಾಸಿಕ ವಿಷಯಗಳಿಗೆ ಸಂಬಂಧಿಸಿದಂತೆ ಸಾಹಿತ್ಯ ರಚನೆಗೆ ಮುಖ್ಯ ಆಕರಗಳು ದೊರಕುವುದು ತೀರಾ ವಿರಳ. ೧೯ನೇ ಶತಮಾನದ ನಂತರ ಚಾರಿತ್ರಿಕ ವಿಷಯಗಳಿಗೆ ಸಂಬಧಿಸಿದಂತಹ ಆಕರಗಳು ದೊರಕುತ್ತವೆ. ಇದಕ್ಕಿಂತ ಪೂರ್ವದಲ್ಲಿ ನಡೆದಂತಹ ಐತಿಹಾಸಿಕ ಘಟನೆಗಳಿಗೆ ಆಕರಗಳಿಗಾಗಿ ಹೆಚ್ಚಾಗಿ ಜನಪದ ಸಾಹಿತ್ಯದ ಮೋರೆ ಹೋಗಬೇಕಾಗುತ್ತದೆ. ಹಾಗೂ ಬ್ರಿಟಿಷರು ನಡೆಸಿದಂತಹ ಪತ್ರ ವ್ಯವಹಾರಗಳು ರಾಯಣ್ಣನಿಗೆ ಸಂಬಂಧಿಸಿದ ಪ್ರಮುಖ ಆಕರಗಳು ಇಂತಹ ಆಕರಗಳನ್ನು ಇಟ್ಟುಕೊಂಡು ಲೇಖಕರು ಅಂದಿನ ಕಾಲದ ಸೂಕ್ಷ್ಮ ವಿಷಯಗಳನ್ನು ಚರ್ಚಿಸಿದ್ದಾರೆ.

ಭಾರತದಲ್ಲಿ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ ಮೊದಲ ಮಹಿಳೆ ಕಿತ್ತೂರು ರಾಣಿ ಚೆನ್ನಮ್ಮ. ಬ್ರಿಟಿಷರು ಭಾರತದಲ್ಲಿನ ಒಂದೊಂದು ರಾಜ್ಯ ವಶಪಡಿಸಿಕೊಂಡು ದೇಶಿಯ ಅರಸರ ಮೇಲೆ ಸಾರ್ವಭೌಮತ್ವವನ್ನು ಸ್ಥಾಪಿಸುತ್ತಾರೆ. ಅರಸರನ್ನು ವಾರ್ಷಿಕ ಕಪ್ಪಕಾಣಿಕೆಯ ಮೇರೆಗೆ ತಮ್ಮ ಕೈಗೊಂಬೆಗಳಾಗಿ ಮಾಡಿಕೊಳ್ಳುತ್ತಾರೆ. ಹಾಗೂ ದತ್ತು ಮಕ್ಕಳಿಗೆ ಹಕ್ಕಿಲ್ಲ ಎಂಬ ನಿಯಮವನ್ನು ಜಾರಿಗೊಳಿಸಿ ಭಾರತದಲ್ಲಿ ಇದ್ದಂತಹ ಅನೇಕ ಸಂಸ್ಥಾನಗಳನ್ನು ನೇರವಾಗಿ ವಶಪಡಿಸಿಕೊಳ್ಳಲು ಮುಂದಾಗುತ್ತಾರೆ. ಅಂತಹ ಸಂಸ್ಥಾನಗಳಲ್ಲಿ ಕಿತ್ತೂರು ಸಂಸ್ಥಾನವು ಸಹ ಒಂದಾಗಿದೆ.

ಹೀಗೆ ರಾಯಣ್ಣನನ್ನು ಕುರಿತು ಮೇಲಿನ ದಾಖಲೆಗಳಲ್ಲಿ ಅಂದರೆ ಬ್ರಿಟಿಷರ ದಾಖಲೆಗಳು ರಾಯಣ್ಣನನ್ನು ದರೋಡೆಕೋರ, ಲೂಟಿಕೋರ ಎಂದು ಚಿತ್ರಿಸಿರುವುದನ್ನು ಕಾಣುತ್ತೇವೆ. ದೇಶಿ ಮೂಲದ ಅಂದರೆ ಕಿತ್ತೂರು ಪರಿಸರದಲ್ಲಿರುವ ಜಾನಪದ ಹಾಗೂ ಇತರೆ ದಾಖಲೆಗಳಲ್ಲಿ ರಾಯಣ್ಣ ದೇಶಭಕ್ತ, ಕಿತ್ತೂರಿಗೆ ಸ್ವಾಮಿನಿಷ್ಠೆ, ಉದಾರ ವ್ಯಕ್ತಿ ಎಂದು ಚಿತ್ರಿಸಲಾಗಿದೆ. ಈ ಎರಡು ಸಂಗತಿಗಳನ್ನು ಗಮನಿಸಿದರೆ ರಾಯಣ್ಣ ದೇಶಭಕ್ತ, ಸ್ವಾಮಿನಿಷ್ಟ ಎಂಬುದು ಬಹಳ ಮುಖ್ಯವಾದ ಸಂಗತಿಯಾಗಿದೆ. ಕಿತ್ತೂರಿನ ದೇಸಗತಿಯ ಇತಿಹಾಸವನ್ನು ಚಿತ್ರಿಸುವಾಗ ಮತ್ತು ಪುನಾರಚಿಸುವಾಗ ಈ ಮೇಲಿನ ದಾಖಲೆಗಳು ಬಹು ಮುಖ್ಯ ಪಾತ್ರವಹಿಸುತ್ತವೆ.

**ಅಡಿ ಟಿಪ್ಪಣಿಗಳು**

೧. ಜ್ಯೋತಿ ಹೊಸೂರ, ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ, ಪುಟ, ೧೫೧

೨. ಸುರ್ಯಾನಾಥ ಕಾಮತ(ಸಂ), ಸಂಗೊಳ್ಳಿ ರಾಯಣ್ಣ, ಪುಟ, ೭೮

೩. ಜ್ಯೋತಿ ಹೊಸೂರ, ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ, ಪುಟ, ೧೧೨

* * *

ಅಧ್ಯಾಯ : ಒಂಬತ್ತು

# ಸಂಗೊಳ್ಳಿ ರಾಯಣ್ಣ : ಆಧುನಿಕ ಸಂದರ್ಭ

ಭಾರತೀಯ ಸ್ವಾತಂತ್ರ್ಯ ಹೋರಾಟಗಾರರಲ್ಲಿ ರಾಯಣ್ಣನಿಗೆ ಅಗ್ರಸ್ಥಾನವಿದೆ. ಸಾಮಾನ್ಯ ವ್ಯಕ್ತಿಯೊಬ್ಬ ದೇಶದ, ನಾಡಿನ ಸ್ವಾತಂತ್ರ್ಯಕ್ಕಾಗಿ ತನ್ನನ್ನು ಸಮರ್ಪಿಸಿಕೊಂಡ ರಾಯಣ್ಣನ ಹೋರಾಟವು ಚಿರಸ್ಮರಣೀಯವಾಗಿದೆ. ೧೮೨೪ ರಿಂದ ೧೮೩೦ ರವರೆಗೆ ಕಿತ್ತೂರಿನಲ್ಲಿ ನಡೆದಂತಹ ಹೋರಾಟವು ಭಾರತೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿದೆ. ೧೯೪೨ ರಲ್ಲಿ ಭಾರತದಲ್ಲಿ ನಡೆದಂತಹ ಚಲೇಜಾವ್, ಅಸಹಕಾರ ಚಳುವಳಿಯ ಸಂದರ್ಭದಲ್ಲಿ ಉತ್ತರ ಕರ್ನಾಟಕದ ಹೋರಾಟಗಾರರಿಗೆ ರಾಯಣ್ಣನ ತ್ಯಾಗ, ಬಲಿದಾನ, ನಾಡಭಕ್ತಿ, ಸ್ವಾತಂತ್ರ್ಯ, ಸ್ವಾಭಿಮಾನಗಳನ್ನು ತಮ್ಮಲ್ಲಿ ಅಳವಡಿಸಿಕೊಂಡಿರುವುದನ್ನು ಕಾಣುತ್ತೇವೆ.

ಪ್ರಸ್ತುತ ದಿನಮಾನಗಳಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದಂತಹ ವೀರರನೇಕರನ್ನು ನೆನೆಯುವಂತಹ ಹಾಗೂ ಯುವ ಜನತೆಯಲ್ಲಿ ಜಾಗೃತಿಯನ್ನು ಮೂಡಿಸುವಂತಹ ಕಾರ್ಯಕ್ರಮಗಳನ್ನು ಸರ್ಕಾರ ಹಾಗೂ ಸರ್ಕಾರೇತರ ಅನೇಕ ಸಂಘ, ಸಂಸ್ಥೆಗಳು ಸ್ವಾತಂತ್ರ್ಯ ಹೋರಾಟಗಾರರ ಕುರಿತು ಹಲವಾರು ಕಾರ್ಯಕ್ರಗಳನ್ನು ಹಾಕಿಕೊಂಡು ಬರುತ್ತಿರುವುದನ್ನು ಕಾಣುತ್ತೇವೆ.

ರಾಯಣ್ಣನ ನಿಧನದ ನಂತರ ರಾಯಣ್ಣನ ಸಿದ್ಧಿ ಸಾಧನೆಗಳನ್ನು ಪರಿಚಯಿಸುವ, ವಿದ್ಯಾರ್ಥಿಗಳಲ್ಲಿ, ಮಕ್ಕಳಲ್ಲಿ ನಾಡು-ನುಡಿಯ ಬಗ್ಗೆ ಅಭಿಮಾನ ಬೆಳೆಸುವ ಹಲವಾರು ಮಾಧ್ಯಮಗಳು ಅಂದರೆ, ಚಲನಚಿತ್ರ, ನಾಮಫಲಕ, ಪ್ರಶಸ್ತಿಗಳು, ಶಾಲಾ-ಕಾಲೇಜುಗಳು, ಸಂಘ -ಸಂಸ್ಥೆಗಳು ಇತ್ಯಾದಿಗಳು ಅವುಗಳ ಆಶಯದ ಹಿನ್ನಲೆಯಲ್ಲಿ ಈ ಅಧ್ಯಾಯದಲ್ಲಿ ಚರ್ಚಿಸುವ ಪ್ರಯತ್ನವಾಗಿದೆ.

ಆಧುನಿಕ ಸಮೂಹ ಸಂವಹನ ಮಾಧ್ಯಮಗಳು, ವೃತ್ತಗಳು, ಶಿಕ್ಷಣ ಸಂಸ್ಥೆಗಳು, ಸಂಘ-ಸಂಸ್ಥೆಗಳು, ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನ ಹೀಗೆ ಹಲವಾರು ಸಂಘ ಸಂಸ್ಥೆಗಳು ರಾಯಣ್ಣನಲ್ಲಿದ್ದಂತಹ ಸ್ವಾತಂತ್ರ್ಯ, ಸ್ವಾಭಿಮಾನ, ದೇಶಭಕ್ತಿಯನ್ನು ಯುವಜನರಲ್ಲಿ ದೇಶದ ಐಕ್ಯತೆಯನ್ನು ಮೂಡಿಸುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸುತ್ತಿವೆ.

ಕಿತ್ತೂರು ಸಂಸ್ಥಾನಕ್ಕೂ ರಾಯಣ್ಣನ ಮನೆತನಕ್ಕೂ ತುಂಬಾ ಅವಿನಾಭಾವ ಸಂಬಂಧವಿತ್ತು. ಇದನ್ನು ನೆನಪಿಸಿಕೊಂಡ ರಾಯಣ್ಣನ ಮನಸ್ಸಿನಲ್ಲಿ ರಾಜನಿಷ್ಠೆ, ಸ್ವಾಮಿಭಕ್ತಿ, ಸ್ವಾತಂತ್ರ್ಯ, ಸ್ವಾಭಿಮಾನ ಕಿತ್ತೂರು ಪರಕೀಯರ ಆಡಳಿತದಲ್ಲಿರುವುದನ್ನು ಹಾಗೂ ಬ್ರಿಟಿಷರು ಮಾಡುತ್ತಿದ್ದ ಶೋಷಣೆಯನ್ನು ಕಂಡು ಒಳಒಳಗೆ ಸಿಡಿಮಿಡಿಗೊಳ್ಳುತ್ತಿದ್ದನು ಅಷ್ಟೆ. ಇದರಿಂದಾಚೆ ಏನು ಮಾಡುವಂತಿರಲಿಲ್ಲ. ಏಕೆಂದರೆ ರಾಯಣ್ಣ ಒಬ್ಬ ಸಾಮಾನ್ಯ ಪ್ರಜೆಯಾಗಿದ್ದ. ಸಂಗೊಳ್ಳಿಯ ಕುಲಕರ್ಣಿ ಬಾಳಪ್ಪ ರಾಯಣ್ಣನನ್ನು ಉದ್ದೇಶ ಪೂರ್ವಕವಾಗಿ ಇಲ್ಲ ಸಲ್ಲದ ಕೆಲಸಗಳಿಗೆ ಕರೆಯುತ್ತಿದ್ದ. ಕಿತ್ತೂರು ಬ್ರಿಟಿಷರ ವಶವಾದ ಮೇಲೆ ಕಿತ್ತೂರಿನಲ್ಲಿ ಜಮೀನಿನ ಅಳತೆಯ ನೆಪದಿಂದ ಬಾಳಪ್ಪ ರಾಯಣ್ಣನನ್ನು ತನ್ನ ಹಿಡಿತದಲ್ಲಿಡಲು ಪ್ರಯತ್ನಿಸಿದ. ಆದರೆ ಸ್ವಾಭಿಮಾನಿಯಾದ ರಾಯಣ್ಣ ಕುಲಕರ್ಣಿಯ ಹಿಡಿತಕ್ಕೆ ಒಳಗಾಗಲಿಲ್ಲ. ರಾಯಣ್ಣನನ್ನು ಹೇಗಾದರೂ ಮಾಡಿ ತನ್ನ ಹಿಡಿತದಲ್ಲಿಡಲು ಪ್ರಯತ್ನಿಸಿ ವಿಫಲವಾದಾಗ ಕುಲಕರ್ಣಿಯು ರಾಯಣ್ಣನನ್ನು ಕರೆದು ವಾಲಿಕಾರಿಕೆ ಕೆಲಸದ ಮೇಲೆ ಸಂಪಗಾವಿಗೆ ಕಳುಹಿಸಿದ. ಸಂಪಗಾವಿಗೆ ಹೋಗಿ ಲಕೋಟೆಯನ್ನು ಕೊಟ್ಟ ನಂತರ ನಡೆಯುವ ಘಟನೆಯು ರಾಯಣ್ಣನನ್ನು ಬೆಚ್ಚಿ ಬೀಳಿಸುತ್ತದೆ. ಕುಲಕರ್ಣಿಯು ರಾಯಣ್ಣನ ವಿರುದ್ಧ ಅಮಲ್ದಾರರಿಗೆ ರಾಯಣ್ಣ ನನ್ನನ್ನು ಕೊಲ್ಲಲು ಬಂದಿದ್ದ ಎಂದು ಆರೋಪದ ಪತ್ರವನ್ನು ಕಳುಹಿಸಿದ್ದ. ಸಂಪಗಾವಿಯ ಅಧಿಕಾರಿ ರಾಯಣ್ಣನನ್ನು ಬಂಧನದಲ್ಲಿರಿಸಿದನು.

ರಾಯಣ್ಣ ಸಂಪಗಾವಿಗೆ ಹೋದ ನಂತರ ಸಂಗೊಳ್ಳಿಯಲ್ಲಿ ಕುಲಕರ್ಣಿ ಬಾಳಪ್ಪನು ರಾಯಣ್ಣನ ವಯಸ್ಸಾದ ತಾಯಿಯನ್ನು ಚಾವಡಿಗೆ ಕರೆಯಿಸಿ, ಕಂದಾಯದ ಹಣವನ್ನು ಈಗಿಂದಿಗಲೇ ಕೊಡಬೇಕೆಂದು ಕೇಳುತ್ತಾನೆ. ವಯಸ್ಸಾದ ಕೆಂಚವ್ವ ನನ್ನ ಮಗ ರಾಯ ಬಂದು ಕೊಡುತ್ತಾನೆ ಎಂದು ಹೇಳಿದಳು. ಅದಕ್ಕೆ ಕುಲಕರ್ಣಿ ಕೆಂಚವ್ವನ ಮಾತನ್ನು ಕೇಳದೆ, ಈಗಿಂದಿಗ ಕೊಡಬೇಕೆಂದು ಹೇಳುತ್ತಾನೆ. ರಾಯಣ್ಣನ ತಾಯಿ ಕೆಂಚವ್ವನ ಸೊಂಟದ ಮೇಲೆ ಬೀಸುವ ಕಲ್ಲನ್ನು ಏರಿ ಶಿಕ್ಷೆಗೆ ಗುರಿಪಡಿಸುತ್ತಾನೆ. ಇಂತಹ ಘಟನೆಗಳಿಂದ ರಾಯಣ್ಣ ಸಿಟ್ಟಿಗೆದ್ದು ಹೋರಾಟಕ್ಕೆ ಮುಂದಾಗುತ್ತಾನೆ. ಬ್ರಿಟಿಷರ ವಿರುದ್ಧ ರಾಯಣ್ಣ ಗೆರಿಲ್ಲಾ ಯುದ್ಧಗಳ ಮೂಲಕ ಕಾಡತೊಡಗುತ್ತಾನೆ. ರಾಯಣ್ಣನ ಹೋರಾಟಗಳಿಂದ ಹೊರಬರಲಾಗದ ಬ್ರಿಟಿಷರು, ರಾಯಣ್ಣನ್ನು ಹಿಡಿಯಲು ಕಿತ್ತೂರಿನವರನ್ನು ಬಳಸಿಕೊಂಡು ಮೋಸದ ಮೂಲಕ ಹಿಡಿದು ಗಲ್ಲಿಗೇರಿಸುತ್ತಾರೆ.

ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ರಾಯಣ್ಣನ ಪಾತ್ರ ಮಹತ್ವದಾಗಿದೆ. ರಾಯಣ್ಣ ಅರಸನಾಗಿರಲಿಲ್ಲ ಕಿತ್ತೂರು ಸಂಸ್ಥಾನದ ಸಾಮಾನ್ಯ ಸೈನಿಕ. ಕಿತ್ತೂರು ಪತನದ ನಂತರ ಸೆರೆಮನೆ ಸೇರುತ್ತಾನೆ. ಬ್ರಿಟಿಷರು ಕಿತ್ತೂರಿನ ಸೈನಿಕರನ್ನು ಹಂತ ಹಂತವಾಗಿ ಬಿಡುಗಡೆ ಮಾಡುತ್ತಾರೆ. ಹಾಗೆ ಬಿಡುಗಡೆಯಾದವರಲ್ಲಿ ರಾಯಣ್ಣನು ಒಬ್ಬ. ಬಿಡುಗಡೆಯ ನಂತರ ಕಿತ್ತೂರನ್ನು ಮತ್ತೆ ಸ್ವತಂತ್ರಗೊಳಿಸಲು ರಾಣಿ ಚೆನ್ನಮ್ಮನ ನಡೆಸಿದಂತಹ ಹೋರಾಟವನ್ನು ಮುಂದುವರಿಸುತ್ತಾನೆ. ಆದರೆ ನಮ್ಮವರ ಕುತಂತ್ರದಿಂದ ರಾಯಣ್ಣನ ಅಂತ್ಯವಾಗುತ್ತದೆ.

ರಾಯಣ್ಣನ ಮರಣದ ನಂತರ "ರಾಯಣ್ಣನ ಹುಟ್ಟೂರಿನಲ್ಲಿ ಅವನ ನೆನಪು ಹಸಿರಾಗಿ ಉಳಿಯಲು ಅನಂತರದ ದಿನಗಳಲ್ಲಿ ಸ್ಮಾರಕಗಳು ನಿರ್ಮಾಣಗೊಂಡ ಬಗ್ಗೆ ಮಾಹಿತಿ ದೊರೆಯುತ್ತದೆ. ಸಂಗೊಳ್ಳಿಯಲ್ಲಿ ಸಣ್ಣದೊಂದು ಕಟ್ಟೆ, ಅವನ ನೆನಪಿಗಾಗಿ ನಿರ್ಮಾಣವಾಗಿತ್ತು ಎಂದು ಹೇಳಲಾಗುತ್ತದೆ. ಇಂದು ಹಳೆಯ ಸಂಗೊಳ್ಳಿಯು ನವಿಲುತೀರ್ಥ ಅಣೆಕಟ್ಟೆಯ ಹಿನ್ನೀರಿನಲ್ಲಿ ಮುಳುಗಿಹೋಗಿದೆ. ಹಳೆಯ ಸಂಗೊಳ್ಳಿ ಸಂಪೂರ್ಣವಾಗಿ ತನ್ನ ಹಳೆಯ ಅಸ್ತಿತ್ವವನ್ನು ಕಳೆದುಕೊಂಡಿದೆ. ಈಗ ಸಮೀಪದಲ್ಲಿಯೇ ಹೊಸ ಸಂಗೊಳ್ಳಿ ಎತ್ತರ ಪ್ರದೇಶದಲ್ಲಿ ನಿರ್ಮಾಣಗೊಂಡಿದೆ. ಈಗ ಸುಮಾರು ಎರಡು ಎಕರೆ ಪ್ರದೇಶ ರಾಯಣ್ಣನ ಹೆಸರಿನಲ್ಲಿ ಸರ್ಕಾರದಿಂದ ಕೊಡಲ್ಪಟ್ಟಿದೆ. ಅಲ್ಲಿ ಇತ್ತೀಚಿಗೆ ರಾಯಣ್ಣನ ಸಮುದಾಯ ಭವನ, ರಾಯಣ್ಣನ ಕಲ್ಲಿನ ಮೂರ್ತಿ ಒಳಗೊಂಡ ಒಂದು ಗುಡಿ ನಿರ್ಮಾಣಗೊಂಡಿವೆ. ಹಳೆಯ ಸಂಗೊಳ್ಳಿಯ ಗುಡಿ ನೀರುಪಾಲಾಗಿ ಹೋಗಿ ಅದು ಎಲ್ಲಿದೆ ಎಂಬುದೂ ಈಗ ತಿಳಿಯದಂಥ ಪರಿಸ್ಥಿತಿ ಇದೆ. ಇತ್ತೀಚಿಗೆ ಕಂಚಿನ ಆಳೆತ್ತರದ ಮೂರ್ತಿಯೂ ನಿರ್ಮಾಣವಾಗಿ ಅನಾವರಣಗೊಂಡಿದೆ."[೧]

೧೮೩೧ ರಲ್ಲಿ ರಾಯಣ್ಣನನ್ನು ಗಲ್ಲಿಗೇರಿಸಿದ ನಂತರ ಸಂಗೊಳ್ಳಿಯ ಜನತೆ ರಾಯಣ್ಣನ ಸ್ಮರಣೆಗಾಗಿ ಪರಿವಾಳದ ಜಾತ್ರೆಯ ಆಚರಣೆಯನ್ನು ಜಾರಿಗೆ ತಂದರು. ಹೆಸರಿಗೆ ಮಾತ್ರ ಪಾರಿವಾಳ ಜಾತ್ರೆ ಆದರೆ ಅದು ರಾಯಣ್ಣನನ್ನು ನೆನೆಯುವುದಕ್ಕಾಗಿ ಪ್ರತಿ ವರ್ಷ ಸಂಗೊಳ್ಳಿ ರಾಯಣ್ಣನ ಕಟ್ಟೆಯ ಮೇಲೆ ಪಾರಿವಾಳಗಳ ಸ್ಪರ್ಧೆಯನ್ನಿಟ್ಟುಕೊಂಡು ಸ್ಪರ್ಧೆಯಲ್ಲಿ ಭಾಗವಹಿಸಿ ಪ್ರಥಮ ಸ್ಥಾನ ಪಡೆದಂತಹ ಪಾರಿವಾಳಕೆ ಬಹುಮಾನವನ್ನು ನೀಡುತ್ತಿದ್ದರು. ಬ್ರಿಟಿಷರಿಗೆ ಪಾರಿವಾಳ ಜಾತ್ರೆ ಗ್ರಾಮದ ಜನತೆಗೆ ಸಂಗೊಳ್ಳಿ ರಾಯಣ್ಣನ ಜಾತ್ರೆಯಾಗಿತ್ತು. ಸಂಗೊಳ್ಳಿಯಲ್ಲಿ ರಾಯಣ್ಣ ಅಂಗ ಸಾಧನೆ ಮಾಡುತ್ತಿದ್ದ ಕಟ್ಟೆಗೆ ಶಕ್ತಿ ಕಟ್ಟೆ ಎಂದು ಕರೆದು ರಾಯಣ್ಣ ಬಳಸುತ್ತಿದ್ದ ಲೋಡುಗಳನ್ನು ನಂತರ ಕಾಲದಲ್ಲಿ ರಾಯಣ್ಣನ ಒಂದು ಚಿಕ್ಕ ಮೂರ್ತಿಯನ್ನು ಕೆತ್ತಿ ಪೂಜೆ ಮಾಡತೊಡಗಿದರು.

ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ಹಲವಾರು ಸಂಘ ಸಂಸ್ಥೆಗಳು ಬೆಳಕಿಗೆ ಬಂದಿವೆ. ಅಂತಹುಗಳಲ್ಲಿ ೧೯೫೮ರಲ್ಲಿ ರಾಯಣ್ಣನ ಕುರಿತ ಮೊದಲ ಸಂಘಟನೆರೆಂದರೆ, 'ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಸ್ಮಾರಕ ಸಮಿತಿ'ಯನ್ನು ಸ್ವತಃ ಹೋರಾಟಗಾರರಾಗಿದ್ದ ಬೆಳಗಾವಿಯ ಗವಿಸಿದ್ದಪ್ಪ ಸಿದ್ದಪ್ಪ ಬೆಳವಡಿಯವರು ಈ ಸಮಿತಿಯನ್ನು ಸ್ಥಾಪಿಸಿದ್ದರು.

ಸಂಗೊಳ್ಳಿ ರಾಯಣ್ಣನ ಹೆಸರಿನಲ್ಲಿ ನಾಡು-ನುಡಿಯ, ಭಾಷೆ ಮುಂತಾದ ಕ್ಷೇತ್ರಗಳಲ್ಲಿ ಸಾಧನೆ ಮಾಡಿದವರನ್ನು ಗುರುತಿಸಿ ೨೦೧೩ರಿಂದ ಪ್ರತಿ ವರ್ಷವು ಒಬ್ಬ ಸಾಧಕರಿಗೆ ಸಂಗೊಳ್ಳಿ ರಾಯಣ್ಣ ಪ್ರಶಸ್ತಿಯನ್ನು ನೀಡಲಾಗುತ್ತಿದೆ. ಪ್ರಶಸ್ತಿಯು ೫ ಲಕ್ಷಗಳ ನಗದು ಬಹುಮಾನ, ಹಾಗೂ ಸಂಗೊಳ್ಳಿ ರಾಯಣ್ಣನ ಕಂಚಿನ ಪ್ರತಿಮೆ, ಪ್ರಶಸ್ತಿ ಪಲಕಗಳನ್ನು ಒಳಗೊಂಡಿದೆ.

## ೯.೧. ಚಲನಚಿತ್ರಗಳು

ಇತಿಹಾಸದ ವಸ್ತುವನ್ನಿಟ್ಟುಕೊಂಡು ಹಲವಾರು ಚಲನಚಿತ್ರಗಳು ತೆರೆಯ ಮೇಲೆ ಬಂದಿವೆ. ಈ ಐತಿಹಾಸಿಕ ಚಲನಚಿತ್ರಗಳು ಅಂದಿನ ಕಾಲದ ವಿಚಾರಗಳ ಜೊತೆಗೆ ಪ್ರಸ್ತುತ ಕಾಲದಲ್ಲಿ ನಡೆಯುವ ಘಟನೆಗಳೊಂದಿಗೆ ಚಲನಚಿತ್ರಗಳು ನಿರ್ಮಾಣಗೊಳ್ಳುತ್ತಿವೆ. ಇತಿಹಾಸ ನಾವು ಬದುಕಿ ಬಂದ ಪರಂಪರೆಯನ್ನು ಘಟನಾವಳಿಗಳ ಮೂಲಕ ಹಿಂದುರುಗಿ ನೋಡುವ ಕ್ರಮ. ದೇಶಕ್ಕಾಗಿ, ತಮ್ಮನ್ನು ನಂಬಿದ ಜನರ ಪ್ರಾಣ ರಕ್ಷಣೆಗಾಗಿ ಹಾಗೂ ಸಾಮಾಜಿಕ ಸಮಸ್ಯೆಗಳ ವಿರುದ್ಧ ಹೋರಾಟ ಮಾಡಿದಂತಹ ಕತೆಯನ್ನು ಜನಸಾಮಾನ್ಯರಿಗೆ ತಲುಪಿಸುವಲ್ಲಿ ಚಲನಚಿತ್ರಗಳು ಪ್ರಮುಖ ಪಾತ್ರವಹಿಸುತ್ತವೆ. ಸಂಗೊಳ್ಳಿ ರಾಯಣ್ಣನ ಕುರಿತು ಕನ್ನಡದಲ್ಲಿ ಎರಡು ಚಲನಚಿತ್ರಗಳು ತೆರೆಯ ಮೇಲೆ ಬಂದಿರುವುದನ್ನು ಕಾಣುತ್ತೇವೆ.

### ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ (೧೯೬೬)

ಸಂಗೊಳ್ಳಿ ರಾಯಣ್ಣನು ಬ್ರಿಟಿಷರ ವಿರುದ್ಧ ಭಾರತದ, ಕಿತ್ತೂರಿನ ಸ್ವತಂತ್ರ್ಯಕ್ಕಾಗಿ ಹೋರಾಟ ಮಾಡಿದ ಕತೆಯನ್ನಾಧರಿಸಿ ೧೯೬೬ರಲ್ಲಿ ಮೊದಲ ಚಲನಚಿತ್ರವು ತೆರೆಯ ಮೇಲೆ ಬಂದಿರುವುದನ್ನು ಕಾಣುತ್ತೇವೆ. ಕನ್ನಡದಲ್ಲಿ ಸಂಗೊಳ್ಳಿ ರಾಯಣ್ಣನ ಕುರಿತು ಎರಡು ಚಲನಚಿತ್ರಗಳು ಹೊರಬಂದಿವೆ. ೧೯೬೪ ರಲ್ಲಿ ತೆರೆ ಕಂಡ ಚಲನಚಿತ್ರ ಕಪ್ಪು ಬಿಳುಪಿನದಾಗಿದೆ. ಈ ಚಲನಚಿತ್ರವನ್ನು ಮರಾಠಿ ಸಾಹಿತಿ ರಂಜಿತ ದೇಸಾಯಿಯಿಂದ ಮರಾಠಿ ಭಾಷೆಯಲ್ಲಿ ಸಂಭಾಷಣೆಯನ್ನು ಬರೆಯಿಸಿ ಎಸ್. ಎಂ. ಅರಳಿಮಟ್ಟಿ ಇತರರಿಂದ ಕನ್ನಡಕ್ಕೆ ಅನುವಾದಿಸಲಾಗಿದೆ. ಈ ಚಲನಚಿತ್ರಕ್ಕೆ ಗಾಯಕಿ ಲತಾ ಮಂಗೇಶಕರ ಅವರಿಂದ ಸಂಗೀತವನ್ನು ಹಾಡಿಸಿರುವುದು ಕಂಡುಬರುತ್ತದೆ. ಈ ಚಿತ್ರದಲ್ಲಿ ಸಂಗೊಳ್ಳಿ ರಾಯಣ್ಣನ ಪಾತ್ರವನ್ನು ಶ್ರೀ ಶಿವನಗೌಡ ಪಾಟೀಲ ಅವರು ರಾಯಣ್ಣನ ಹೆಂಡತಿಯ ಪಾತ್ರದಲ್ಲಿ ಕಾಮಿನಿ ಕದಂ ಅವರು ಅಭಿನಯಿಸಿದ್ದಾರೆ.

### ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ (೨೦೧೨)

೨೦೧೨ರಲ್ಲಿ ಆನಂದ ಅಪ್ಪುಗೋಳ ಅವರು ನಿರ್ಮಾತೃಗಳಾಗಿ ತೆರೆಗೆ ತಂದ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಚಿತ್ರ ಎಲ್ಲ ರೀತಿಯಿಂದಲೂ ಅದ್ದೂರಿಯಾದ ಸಿನಿಮಾವಾಗಿದೆ. ಈ ಚಲನಚಿತ್ರಕ್ಕೆ ಸುದೀಪ್ ಅವರು ಸಂಭಾಷಣೆಯನ್ನು, ಕೇಶವಾದಿತ್ಯ ಅವರ ಸಾಹಿತ್ಯ ಮತ್ತು ನಾಗಣ್ಣ ಅವರ ನಿರ್ದೇಶನದಲ್ಲಿ ಈ ಚಿತ್ರ ರೂಪುಗೊಂಡಿದೆ. ರಾಯಣ್ಣನ ಪಾತ್ರವನ್ನು ನಟ ಚಾಲೆಂಜಿಂಗ್ ಸ್ಟಾರ್ ದರ್ಶನ್, ರಾಯಣ್ಣನ ಅಪ್ತ ಸ್ನೇಹಿತನಾದ ಬಿಚ್ಚುಗತ್ತಿ ಚನ್ನಬಸವನ ಪಾತ್ರವನ್ನು ಶಶಿಕುಮಾರ, ರಾಯಣ್ಣನ ತಾಯಿ ಕೆಂಚಮ್ಮನ ಪಾತ್ರವನ್ನು ನಟಿ ಉಮಾಶ್ರೀ, ಚೆನ್ನಮ್ಮ ರಾಣಿಯ ಪಾತ್ರವನ್ನು ನಟಿ ಜಯಪ್ರದ ಅಭಿನಯಿಸಿದ್ದಾರೆ. ಈ ಚಲನಚಿತ್ರವು ೧೧:೦೧:೨೦೧೨ ಕನ್ನಡ ರಾಜ್ಯೋತ್ಸವದಂದು ಚಿತ್ರ ಬಿಡುಗಡೆಯಾಗಿರುವುದು ವಿಶೇಷತೆಯಾಗಿದೆ.

ರಾಯಣ್ಣ ಸಂಪಗಾವಿಗೆ ಹೋದ ನಂತರ ಸಂಗೊಳ್ಳಿಯಲ್ಲಿ ಕುಲಕರ್ಣಿ ಬಾಳಪ್ಪನು ರಾಯಣ್ಣನ ತಾಯಿಯನ್ನು ಚಾವಡಿಗೆ ಕರೆಯಿಸಿ ಕಂದಾಯದ ಹಣವನ್ನು ಕೊಡಬೇಕೆಂದು ಕೇಳುತ್ತಾನೆ. ವಯಸ್ಸಾದ ಕೆಂಚವ್ವ ನನ್ನ ಮಗ ರಾಯ ಬಂದು ಕೊಡುತ್ತಾನೆ ಎಂದು ಹೇಳಿದಳು ಅದಕ್ಕೆ ಕುಲಕರ್ಣಿ ಕೆಂಚವ್ವನ ಮಾತನ್ನು ಕೇಳದೆ ಈಗಿಂದೀಗ ಕೊಡಬೇಕೆಂದು ಹೇಳುತ್ತಾನೆ. ಹಾಗೂ ರಾಯಣ್ಣನ ತಾಯಿ ಕೆಂಚವ್ವನ ಸೊಂಟದ ಮೇಲೆ ಬೀಸುವ ಕಲ್ಲನ್ನು ಏರಿ ಶಿಕ್ಷೆಗೆ ಗುರಿಪಡಿಸುತ್ತಾನೆ. ಇಂತಹ ಘಟನೆಗಳಿಂದ ರಾಯಣ್ಣ ಸಿಟ್ಟಿಗೆದ್ದು ಹೋರಾಟಕ್ಕೆ ಮುಂದಾಗುತ್ತಾನೆ. ಬ್ರಿಟಿಷರ ವಿರುದ್ಧ ರಾಯಣ್ಣ ಗೆರಿಲ್ಲಾ ಯುದ್ಧಗಳ ಮೂಲಕ ಕಾಡತೊಡಗುತ್ತಾನೆ. ರಾಯಣ್ಣನ ಹೋರಾಟಗಳಿಂದ ಹೊರಬರಲಾಗದ ಬ್ರಿಟಿಷರು ರಾಯಣ್ಣನನ್ನು ಹಿಡಿಯಲು ಕಿತ್ತೂರಿನವರನ್ನು ಬಳಸಿಕೊಂಡು ಮೋಸದ ಮೂಲಕ ಹಿಡಿದು ಗಲ್ಲಿಗೇರಿಸುತ್ತಾರೆ. ಈ ಘಟನೆಗಳು ಚಲನಚಿತ್ರಗಳಲ್ಲಿ ವಸ್ತುನಿಷ್ಠವಾಗಿ ಬಂದಿವೆ.

ಸಂಗೊಳ್ಳಿ ರಾಯಣ್ಣನ ರಾಷ್ಟ್ರೀಯ ಮನೋಭಾವದ ಹಿನ್ನೆಲೆಯಲ್ಲಿನ ಗೌರವದ ಆಶಯದಿಂದ ನಂದಗಡದಲ್ಲಿ ಒಂದು ಸೈನಿಕ ಶಾಲೆಯನ್ನು ಕರ್ನಾಟಕ ಸರ್ಕಾರ ಸ್ಥಾಪಿಸಿರುವುದು ಒಳ್ಳೆಯ ಕಾರ್ಯವಾಗಿದೆ. ಸಂಗೊಳ್ಳಿ ರಾಯಣ್ಣ ಸ್ಮಾರಕ ಶಾಲೆ ಎಂಬ ಹೆಸರಿನಲ್ಲಿ ದಿನಾಂಕ ೧೬.೮.೨೦೦೨ ರಂದು ಸ್ಥಾಪನೆಗೊಂಡಿದೆ. ಈ ಶಾಲೆಯಲ್ಲಿ ಪ್ರಾಸಂಗಿಕವಾಗಿ ಸಂಗೊಳ್ಳಿ ರಾಯಣ್ಣನು ಮಾಡಿದ ಕಾರ್ಯ ಚಟುವಟಿಕೆಗಳ ಬಗೆಗೆ ಎಲ್ಲಾ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗೆ ಮಾಹಿತಿ ನೀಡುವ ವ್ಯವಸ್ಥೆ ಮಾಡಲಾಗಿದೆ ಎಂಬುದು ಗಮನಾರ್ಹ.

ಕ್ರಾಂತಿವೀರ ಸಂಗೊಳ್ಳಿ ರಾಯಣ್ಣನ ಹೋರಾಟವು ಅನ್ಯಾಯ, ಶೋಷಣೆ ರಾಯಣ್ಣನಲ್ಲಿದ್ದಂತಹ ದೇಶಪ್ರೇಮ, ಸ್ವಾತಂತ್ರ್ಯ, ನಿಷ್ಠೆ ಮುಂತಾದ ಅಂಶಗಳನ್ನಿಟ್ಟುಕೊಂಡು ರಾಯಣ್ಣನ ಹೋರಾಟದ ಇತಿಹಾವನ್ನು ಕಟ್ಟಿಕೊಡುವುದಕ್ಕಾಗಿ ೧೦:೧೨:೨೦೧೨ ರಲ್ಲಿ ಕರ್ನಾಟಕ ಸರ್ಕಾರ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನವನ್ನು ಸ್ಥಾಪಿಸಿದೆ. ಈ ಪ್ರತಿಷ್ಠಾನ ಸಂಗೊಳ್ಳಿ ರಾಯಣ್ಣನ ಸಮಗ್ರ ಜೀವನ ಚಿತ್ರಣವನ್ನು ಶೋಧಿಸುವ ಹಾಗೂ ಯುವಜನತೆಯಲ್ಲಿ ರಾಯಣ್ಣನ ಆಶಯಗಳನ್ನು ತಿಳಿಸುವ ಸಲುವಾಗಿ ರಾಜ್ಯ, ರಾಷ್ಟ್ರಮಟ್ಟದ ವಿಚಾರ ಸಂಕೀರ್ಣಗಳನ್ನು ಆಯೋಜಿಸುವ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ.

**ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನದ ಉದ್ದೇಶಗಳು.**

೧. ಸಂಗೊಳ್ಳಿ ರಾಯಣ್ಣನ ಬಗ್ಗೆ ಮತ್ತು ಐತಿಹಾಸಿಕ ಜಾನಪದ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿ ವಿಶೇಷ ಅಧ್ಯಯನ ಮಾಡುವ ಯುವ ಸಂಶೋಧನಾರ್ಥಿಗಳಿಗೆ ಫೆಲೋಷಿಪ್ ನೀಡುವುದು ಹಾಗೂ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣನ ಸಾಧನೆಯ ಸ್ಮರಣಾರ್ಥ ೪೦ ವರ್ಷದೊಳಗಿನ ಯುವ ಸಾಹಸಿಗಳಿಗೆ ಪುರಸ್ಕಾರ ನೀಡುವುದು,

೨. ಸಂಗೊಳ್ಳಿ ರಾಯಣ್ಣನ ಜೀವನ, ಸಾಧನೆ ಆಶಯಗಳ ಕುರಿತಂತೆ ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ವಿಚಾರ ಸಂಕಿರಣ ಹಾಗೂ ಬಹು ಮಾಧ್ಯಮಗಳಲ್ಲಿ ಕಾರ್ಯಕ್ರಮಗಳನ್ನು ಸಿದ್ಧಪಡಿಸಿ ಪ್ರದರ್ಶಿಸುವುದು.

೩. ಸಂಗೊಳ್ಳಿ ರಾಯಣ್ಣನ ಜನ್ಮಸ್ಥಳವಾದ (ಕಿತ್ತೂರಿನ ಸಮೀಪವಿರುವ) ಸಂಗೊಳ್ಳಿಯನ್ನು ಹಾಗೂ ನಂದಗಡದಲ್ಲಿ ಗಲ್ಲಿಗೇರಿಸಿದ ಸ್ಥಳ ಮತ್ತು ಸಮಾಧಿ ಸ್ಥಳಗಳನ್ನು ಪ್ರವಾಸಿ ಕೇಂದ್ರಗಳನ್ನಾಗಿ ಆಕರ್ಷಿಸುವ ಸಲುವಾಗಿ ಈ ಮೂರು ಸ್ಥಳಗಳಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವುದು ಹಾಗೂ ವಾರ್ಷಿಕ ಕಾರ್ಯಕ್ರಮಗಳನ್ನು ಏರ್ಪಡಿಸುವುದು

೪. ಸಂಗೊಳ್ಳಿ ರಾಯಣ್ಣನ ಜೀವನ ವಿವರ, ಇತಿಹಾಸ, ಹೋರಾಟ ಮತ್ತು ಅವನ ಬಗ್ಗೆ ಬಂದಿರುವ ಜನಪದ ಸಾಹಿತ್ಯದ ಸಂಗ್ರಹಣೆ, ಅಧ್ಯಯನ, ಸಂಶೋಧನೆ ಹಾಗೂ ಪ್ರಕಟಣೆ ಮತ್ತು ಪ್ರಸಾರ ಕಾರ್ಯಗಳನ್ನು ಕೈಗೊಳ್ಳುವುದು.

೫. ಸಂಗೊಳ್ಳಿ ರಾಯಣ್ಣ ಹಾಗೂ ಅವನ ಸಮಕಾಲೀನ ಇತಿಹಾಸದ ಪುನರಾವಲೋಕನ ಹಾಗೂ ಪುನಾರಚನೆ.

೬. ಸಂಗೊಳ್ಳಿ ರಾಯಣ್ಣನ ಸಮಕಾಲೀನ ಸ್ವಾತಂತ್ರ್ಯ ಹೋರಾಟಗಾರರ (ರಾಜ್ಯ ರಾಷ್ಟ್ರಮಟ್ಟದಲ್ಲಿ) ಕುರಿತಂತೆ ತುಲನಾತ್ಮಕ ಅಧ್ಯಯನ ಮತ್ತು ಪ್ರಕಟಣೆ.

೭. ಸಂಗೊಳ್ಳಿ ರಾಯಣ್ಣನ ಬಗೆಗಿನ ಮೌಖಿಕ ಪರಂಪರೆಯ ಸಂಪೂರ್ಣ ಕ್ಷೇತ್ರ ಕಾರ್ಯ ಹಾಗೂ ದಾಖಲೀಕರಣ.

೮. ಸಂಗೊಳ್ಳಿ ರಾಯಣ್ಣನ ಆದರ್ಶ, ಸ್ವಾತಂತ್ರ ಹೋರಾಟ, ಸಾಹಸ ಹಾಗೂ ನಾಡ ಪ್ರೇಮದ ಕುರಿತಂತೆ ಯುವ ಜನತೆಯಲ್ಲಿ ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ಏರ್ಪಾಡು ಮಾಡುವುದು. ಹಾಗೂ ಇಂಥ ಸಮಾನ ಉದ್ದೇಶ ಹೊಂದಿರುವ ಸಂಸ್ಥೆಗಳೊಂದಿಗೆ ಸಹಕರಿಸುವುದು.

೯. ಸಂಗೊಳ್ಳಿ ರಾಯಣ್ಣನ ಬಗ್ಗೆ ವಸ್ತು ಸಂಗ್ರಹಾಲಯ (ಮ್ಯುಸಿಯಂ) ಮತ್ತು ವಾಚನಾಲಯ ಸ್ಥಾಪನೆ.

೧೦. ಶಾಲಾ ಕಾಲೇಜು, ಸರ್ಕಾರಿ ವಿದ್ಯಾರ್ಥಿ ನಿಲಯಗಳ ವಿದ್ಯಾರ್ಥಿಗಳಲ್ಲಿ ನಾಡು, ನುಡಿ, ಅಭಿಮಾನ, ಆಸಕ್ತಿ ಮೂಡಿಸುವ ಹಾಗೂ ಸಂಸ್ಕೃತಿ ಹಾಗೂ ಸಾಹಸ ಕಲೆಗಳ ಬಗ್ಗೆ ಜಾಗೃತಿ ಉಂಟುಮಾಡುವ ಬಗ್ಗೆ ಕ್ರಿಯಾ ಶಿಬಿರಗಳ, ರಸಗ್ರಹಣ ಶಿಬಿರಗಳ ಏರ್ಪಾಡು ಹಾಗೂ ಅವರಿಗೆ ಲೇಖನ ಸ್ಪರ್ಧೆ, ಚಿತ್ರಕಲೆ, ನಾಟಕ ಮುಂತಾದ ಕಾರ್ಯಕ್ರಮಗಳನ್ನು ಏರ್ಪಡಿಸುವುದು.

ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನವು ಸಂಗೊಳ್ಳಿಯಲ್ಲಿ ಸೈನಿಕ ಶಾಲೆನ್ನು, ರಾಯಣ್ಣನನ್ನು ಗಲ್ಲಿಗೇರಿಸಿದ ಸ್ಥಳವಾದ ನಂದಗಡದಲ್ಲಿ ಕಿತ್ತೂರು ರಾಣಿ ಚೆನ್ನಮ್ಮ ಹಾಗೂ ಸಂಗೊಳ್ಳಿ ರಾಯಣ್ಣ ಹೋರಾಟವನ್ನು ಬಿಂಬಿಸುವ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸುತ್ತಿದೆ.

ಸಂಗೊಳ್ಳಿ ರಾಯಣ್ಣನ ಹೆಸರಿನಲ್ಲಿ ಕರ್ನಾಟಕದ ಹಲವಾರು ಜಿಲ್ಲೆಗಳಲ್ಲಿ ಶಿಕ್ಷಣ ಸಂಸ್ಥೆಗಳು, ಶಾಲಾ ಕಾಲೇಜುಗಳು, ಸಂಘ ಸಂಸ್ಥೆಗಳು, ಅಲ್ಲದೆ ಸಹಕಾರಿ ಸಂಘಗಳು, ಸಹಕಾರಿ ಸೌಹಾರ್ದ ಸಂಘಗಳು ಕಾರ್ಯನಿರ್ವಹಿಸುತ್ತಿವೆ. ರಾಯಣ್ಣನ ಹೆಸರು ಪಟ್ಟಣಗಳಲ್ಲಿ ವೃತ್ತಗಳು, ಬೀದಿಗಳು, ಬಡಾವಣೆಗಳು, ಮನೆಗಳ ಹೆಸರುಗಳು, ವಾಹನದ ಹೆಸರುಗಳು ಅಸ್ತಿತ್ವದಲ್ಲಿ ಬಂದಿವೆ ಹಾಗೂ ಬರುತ್ತಲೇ ಇವೆ. ರಾಯಣ್ಣ ಸೇನೆ, ರಾಯಣ್ಣ ಸಂಘ, ರಾಯಣ್ಣ ಪ್ರತಿಷ್ಠಾನ, ರಾಯಣ್ಣ ಸ್ಮಾರಕಗಳ ಜೀರ್ಣೋದ್ಧಾರ ಟ್ರಸ್ಟ್, ಮುಂತಾದ ಸಂಘಟನೆಗಳು ಹುಟ್ಟಿಕೊಂಡಿವೆ ಇವೆಲ್ಲವೂ ರಾಯಣ್ಣನ ಸ್ಮಾರಕಗಳಾಗಿವೆ. ಹಾಗೂ ಅವನ ಬಗೆಗೆ ಗೌರವದ ಪ್ರತೀಕ ಎನ್ನುವಲ್ಲಿ ಸಂಶಯವಿಲ್ಲ.

ಸಂಗೊಳ್ಳಿ ರಾಯಣ್ಣನ ಹೆಸರಿನಲ್ಲಿ ಕರ್ನಾಟಕದ ಬೇರೆಬೇರೆ ಜಿಲ್ಲೆಗಳಲ್ಲಿ ಉದಾಹರಣೆ ಬೆಳಗಾವಿ, ಬೈಲವಂಗಲ, ಬೆಂಗಳೂರು, ಸಂಗೊಳ್ಳಿ ಹೀಗೆ ಕರ್ನಾಟಕದ ಮುಂತಾದ ಕಡೆಗೆ ರಾಯಣ್ಣನ ಹೆಸರಿನಲ್ಲಿ ಶಿಕ್ಷಣ ಸಂಸ್ಥೆಗಳು ಶಾಲೆ, ಹೈಸ್ಕೂಲ, ಕಾಲೇಜುಗಳು, ಸಂಘಗಳು, ಬ್ಯಾಂಕ್ ಅಲ್ಲದೆ ಸಹಕಾರಿ ಸಂಘಗಳು, ಸಹಕಾರಿ ಸೌಹಾರ್ದ ಸಂಘಗಳು ನಿರ್ಮಾಣವಾಗಿ ಕಾರ್ಯನಿರ್ವಹಿಸುತ್ತಿವೆ.

**ಅಡಿ ಟಿಪ್ಪಣಿ**

೧. ಜ್ಯೋತಿ ಹೊಸೂರ, ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ, ಪುಟ, ೧೯೧.

* * *

ಅಧ್ಯಾಯ : ಹತ್ತು

# ಸಮಾರೋಪ

ಸಂಗೊಳ್ಳಿ ರಾಯಣ್ಣನದು ವೈಶಿಷ್ಟ್ಯಪೂರ್ಣ ವ್ಯಕ್ತಿತ್ವ. ಆತ ನುಡಿದಂತೆ ನಡೆದನು, ಅದರಂತೆ ಬದುಕಿದನು. ಅವನನ್ನು ಕುರಿತು ನಡೆದ ಅಧ್ಯಯನದ ಸಮೀಕ್ಷೆಯನ್ನು ಕರ್ನಾಟಕದ ಸಾಂಸ್ಕೃತಿಕ ಲೋಕದಲ್ಲಿ ಅವನ ಸಾಂಸ್ಕೃತಿಕ ವೈಶಿಷ್ಟ್ಯವನ್ನು ದಾಖಲಿಸುವುದು, ಆಕರಗಳ ನೆರವಿನಿಂದ ಚಿತ್ರಿಸುವುದು ಈ ಮಹಾಪ್ರಂಬಧದ ಬಹುಮುಖ್ಯ ಉದ್ದೇಶವಾಗಿದೆ. ಈ ಉದ್ದೇಶಕ್ಕೆ ಅನುಗುಣವಾಗಿ ಆತನ ಚರಿತ್ರೆ, ಪರಿವಾರ, ಅವನನ್ನು ಕುರಿತು ಬಂದಂತಹ ನಾಟಕ ಸಾಹಿತ್ಯ, ಕಾದಂಬರಿ ಸಾಹಿತ್ಯ, ಜನಪದ ಸಾಹಿತ್ಯ, ಜೀವನ ಚರಿತ್ರೆಗಳು, ಸಂಶೋಧನ ಸಾಹಿತ್ಯ, ದಾಖಲು ಸಾಹಿತ್ಯ ಮತ್ತು ಆಧುನಿಕ ಸಂದರ್ಭದಲ್ಲಿ ಬಂದಿರುವ ಆಕರಗಳನ್ನು ಶೋಧಿಸಿ ಕ್ರಮಬದ್ಧವಾಗಿ ವಿಶ್ಲೇಷಣೆಗೆ ಒಳಪಡಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಆಕರ ಸಂಪತ್ತನ್ನು ಸ್ಥೂಲವಾಗಿ ಮತ್ತು ಅಧ್ಯಯನದ ಅನುಕೂಲಕ್ಕಾಗಿ ಆಧುನಿಕ ಲಿಖಿತ ಸಾಹಿತ್ಯ (ಅಂದರೆ ಕಾದಂಬರಿ, ನಾಟಕ ಇತ್ಯಾದಿ) ಸಾಹಿತ್ಯ ಮತ್ತು ಮೌಖಿಕ ಸಾಹಿತ್ಯವೆಂದು ವರ್ಗೀಕರಿಸಲಾಗಿದೆ.

ರಾಯಣ್ಣನು ಬ್ರಿಟಿಷರ ಸಾಮ್ರಾಜ್ಯಶಾಹಿ ವ್ಯವಸ್ಥೆಯನ್ನು ಸ್ವೀಕರಿಸಿದವನಲ್ಲ. ಹಾಗೆಂದು ವ್ಯವಸ್ಥೆಯನ್ನು ಅಲ್ಲೋಲ ಕಲ್ಲೋಲ ಉಂಟುಮಾಡುವ ವಿಕ್ಷಿಪ್ತ ಮನೋಭಾವವು ಅವನದಲ್ಲ. ಹೀಗಾಗಿ ಅವನು ಬದುಕನ್ನು ವಿರೂಪಗೊಳಿಸಿದವನಲ್ಲ. ಆತ ಕನ್ನಡ ಸಾಂಸ್ಕೃತಿಕ ಪರಂಪರೆಯನ್ನು ಹಾಗೂ ಅದನ್ನು ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಕಿತ್ತೂರು ಸಂಸ್ಥಾನದ ರಕ್ಷಣೆಗಾಗಿ ತನ್ನನ್ನು ತಾನು ಅರ್ಪಿಸಿಕೊಂಡವನು. ಈ ನೆಲೆಗಳನ್ನು ಹಿನ್ನಲೆಯಾಗಿಟ್ಟುಕೊಂಡು ನೋಡಿದ ಪ್ರಸ್ತುತ ಮಹಾಪ್ರಬಂಧದ ಕೆಲವು ಫಲಿತಗಳು ಹೀಗಿವೆ.

೧. ಸ್ವಾತಂತ್ರ್ಯ ಪೂರ್ವದಲ್ಲಿ ನಾಡು-ನುಡಿಯ ರಕ್ಷಣೆ ಮತ್ತು ಪೋಷಣೆಯಲ್ಲಿ ಸಂಸ್ಥಾನಗಳು ಪ್ರಮುಖ ಪಾತ್ರವಹಿಸಿವೆ. ಅಂತಹವುಗಳಲ್ಲಿ ಕಿತ್ತೂರು ಸಂಸ್ಥಾನವು

ಒಂದು. ಆ ಸಂಸ್ಥಾನದ ರಕ್ಷಣೆಗೆ ರಾಯಣ್ಣ ಸ್ವಾಮಿ ನಿಷ್ಠೆಯಿಂದ ದುಡಿದನು. ಈ ಕುರಿತು ಬಂದಂತಹ ಕಾದಂಬರಿ, ನಾಟಕ, ಜನಪದ ಸಾಹಿತ್ಯ, ಜೀವನ ಚರಿತ್ರೆಗಳು ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಅವನ ವ್ಯಕ್ತಿತ್ವವನ್ನು ವಸ್ತುನಿಷ್ಠವಾಗಿ ತೋರಿಸಿಕೊಡುವುದರೊಂದಿಗೆ, ಅವನನ್ನು ಕುರಿತು ಬಂದಿರುವಂತಹ ಆಕರಗಳು ಪ್ರಾಚೀನ ಕಾವ್ಯ ಸಾಹಿತ್ಯಗಳಂತೆ ಆಧುನಿಕ ಸಾಹಿತ್ಯ ಪ್ರಕಾರಗಳು ವಸ್ತುನಿಷ್ಠ ಸಾಮಾಗ್ರಿಯಾಗಿವೆ ಎಂಬುದನ್ನು ಈ ಅಧ್ಯಯನವು ಪ್ರಸ್ತುತಪಡಿಸುತ್ತದೆ.

೨. ಮೇಲುನೋಟಕ್ಕೆ ಇದು ಸಂಗೊಳ್ಳಿ ರಾಯಣ್ಣನ ಕುರಿತ ಸಮೀಕ್ಷೆಯಂತೆ ಕಂಡುಬಂದರೂ ಆಕರಗಳ ಮೂಲಕ ರಾಯಣ್ಣನನ್ನು ಕೇಂದ್ರವಾಗಿಟ್ಟುಕೊಂಡು ಕಿತ್ತೂರು ಸಂಸ್ಥಾನದ ಸಾಂಸ್ಕೃತಿಕ ಅಧ್ಯಯನಕ್ಕೆ ಈ ಅಧ್ಯಯನ ಬಹುಮುಖ್ಯವಾಗಿದೆ.

೩. ಸಂಗೊಳ್ಳಿ ರಾಯಣ್ಣನ ಕುರಿತು ಆಕರಗಳ ಸ್ವರೂಪ ಮತ್ತು ವಿಶ್ಲೇಷಣೆ ಮಾಡುವುದರ ಮೂಲಕ ಕನ್ನಡ ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ವಿಶೇಷವಾಗಿ ಕ್ರಿ.ಶ.೧೭– ೧೮ನೇ ಶತಮಾನದ ಕನ್ನಡ ನಾಡಿನ ಚರಿತ್ರೆಯನ್ನು ಇನ್ನಷ್ಟು ಸ್ಪುಟವಾಗಿ ತಿಳಿಯಲು ಈ ಅಧ್ಯಯನದಿಂದ ಸಾಧ್ಯವಿದೆ.

೪. ಆಕರಗಳು ಐತಿಹಾಸಿಕ ವ್ಯಕ್ತಿಯಾದ ಸಂಗೊಳ್ಳಿ ರಾಯಣ್ಣನ ಚರಿತ್ರೆ ಬರೆದಿರುವುದರಿಂದ ಮುಂದಿನ ಕವಿಗಳಿಗೆ ಚಾರಿತ್ರಿಕ ಕಾವ್ಯ ಬರೆಯಲು ಅಥವಾ ರಾಯಣ್ಣನ ಕುರಿತು ಪ್ರಬಂಧಗಳನ್ನು, ಕಥೆಗಳನ್ನು ರಚಿಸಲು ಹೇಗೆ ಪ್ರೇರಣೆ ಅಗಿದೆ ಎಂಬುದನ್ನು ಈ ಮಹಾಪ್ರಬಂಧದ ಅಧ್ಯಯನ ತಿಳಿಸುತ್ತದೆ.

೫. ಸ್ವಾತಂತ್ರ್ಯ ಹೋರಾಟಕ್ಕೆ ಹೊಸ ಕ್ಷಿತಿಜವನ್ನು ತೆರೆದಿಟ್ಟ ಸಂಗೊಳ್ಳಿ ರಾಯಣ್ಣನ ನಿಲುವನ್ನು ದಾಖಲೆ ಮತ್ತು ಮೌಖಿಕ ಸಾಹಿತ್ಯದ ಅಂತರಂಗದಲ್ಲಿ ಕಾಣುವುದರಿಂದ ರಾಯಣ್ಣ ಸ್ವಾತಂತ್ರ್ಯ ಹೋರಾಟದ ಮೊದಲ ಬಾರಿಗೆ ಕನ್ನಡಿಗರಿಗೆ ಕನ್ನಡ ನಾಡು–ನುಡಿಯ ಪ್ರಜ್ಞೆಯನ್ನು ಎಚ್ಚರಿಸಿದ್ದಾನೆ. ಅವನ ಸಾಹಿತ್ಯದ ಅಧ್ಯಯನವು ಸಹೃದಯರಲ್ಲಿ ಕ್ರಾಂತಿಕಾರಕ ಬದಲಾವಣೆಯನ್ನು ಪ್ರೇರೇಪಿಸುತ್ತದೆ. ಅದನ್ನು ಹೀಗೂ ಹೇಳಬಹುದು. ಇಂದಿನ ದಲಿತ ಬಂಡಾಯ, ಪ್ರಗತಿಪರ ಚಳುವಳಿಗೆ ರಾಯಣ್ಣನ ಬದುಕು ಮತ್ತು ಹೋರಾಟ ಪ್ರೇರಣೆ ಕೊಡುತ್ತದೆ.

೬. 'ಸ್ವಾಭಿಮಾನ' ನಾಡು–ನುಡಿಯ ಬಗ್ಗೆ ಅಭಿಮಾನ, ಸ್ವಾಮಿನಿಷ್ಠೆ ಇವು ರಾಯಣ್ಣನ ಬದುಕಿನ ಹೆಜ್ಜೆ ಗುರುತುಗಳು. ಈ ಅಂಶಗಳು ಅವನ ಕುರಿತಾದ ಸಾಹಿತ್ಯದುದ್ದಕ್ಕೂ ಕಾಣುತ್ತವೆ. ಬ್ರಿಟಿಷರ ಸಾರ್ವಭೌಮತ್ವವನ್ನು ಧಿಕ್ಕರಿಸಿ ಸ್ವಾತಂತ್ರಕ್ಕಾಗಿ ಹೋರಾಟ ಮಾಡುತ್ತಾನೆ. ಇದನ್ನು ಈ ಮಹಾಪ್ರಬಂಧದಲ್ಲಿ ಗುರುತಿಸಲಾಗಿದೆ.

೭. ಇತ್ತೀಚಿನ ದಶಕಗಳಲ್ಲಿ ಶಿಷ್ಟ ಸಾಹಿತ್ಯದಂತೆ ದಾಖಲು ಸಾಹಿತ್ಯವು ಸಂಶೋಧನೆಗಳಲ್ಲಿ ಮಹತ್ವದ ಆಕರಗಳಾಗಿವೆ. ರಾಯಣ್ಣ ೧೮ನೇ ಶತಮಾನದ ಪೂರ್ವಾರ್ಧದಲ್ಲಿ ಬದುಕಿದ್ದರಿಂದ ಅವನನ್ನು ಕುರಿತಾದ ಶಾಸನಗಳಿಲ್ಲ. ನಮಗೆ ಮುಖ್ಯ ಆಕರಗಳೆಂದರೆ, ದಾಖಲೆಗಳು ಮತ್ತು ಮೌಖಿಕ ಸಾಹಿತ್ಯ. ಬ್ರಿಟಿಷರು ಬಳಸಿದ ದಾಖಲೆಗಳು ರಾಯಣ್ಣನನ್ನು ದರೋಡೆಕೋರ, ಲೂಟಿಕೋರ ಇತ್ಯಾದಿ ಅರ್ಥಗಳಲ್ಲಿ ಚಿತ್ರಿಸಲಾಗಿದೆ. ದೇಸಿಯ ಆಕರಗಳು ಅಂದರೆ ವರದಿಗಳು, ಕಾಗದ ಪತ್ರಗಳು ರಾಯಣ್ಣನನ್ನು ಸ್ವಾತಂತ್ರ್ಯ ಹೋರಾಟಗಾರ, ದೇಶಭಕ್ತ, ಕಿತ್ತೂರಿನ ರಕ್ಷಕ ಎಂದು ಗುರುತಿಸಲಾಗಿದೆ. ಈ ಎರಡೂ ಅಂಶಗಳನ್ನು ತೌಲನಿಕವಾಗಿ ವಿವೇಚನೆ ಮಾಡಿ ರಾಯಣ್ಣನು ದೇಶಭಕ್ತ, ನಾಡುನುಡಿಯ ಸೇವಕ ಎಂದು ಗುರುತಿಸಲಾಗಿದೆ.

೮. ಲಿಖಿತ ಸಾಹಿತ್ಯದಂತೆ ಮೌಖಿಕ ಸಾಹಿತ್ಯ (ಜನಪದ ಸಾಹಿತ್ಯ)ದ ಕುರಿತು ಇತ್ತೀಚಿಗೆ ವ್ಯಾಪಕ ಸಂಗ್ರಹ, ಸಂಪಾದನೆ, ಅಧ್ಯಯನಗಳು ನಡೆಯುತ್ತಿವೆ. ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದಂತೆ ಲಾವಣಿ, ಕೋಲಾಟ, ಹಂತಿ, ಡೊಳ್ಳು, ತ್ರಿಪದಿಗಳು ಅಧಿಕ ಪ್ರಮಾಣದಲ್ಲಿವೆ. ಅವುಗಳನ್ನು ಸಾಧ್ಯವಿದ್ದಷ್ಟು ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅವುಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ರಾಯಣ್ಣನ ಚರಿತ್ರೆಯನ್ನು ಪುನರ್ ರಚಿಸಲು ಪ್ರಯತ್ನಿಸಲಾಗಿದೆ.

೯. ಆಧುನಿಕ ಸಂದರ್ಭದಲ್ಲಿ ರಾಯಣ್ಣನ ವ್ಯಕ್ತಿತ್ವ ಮತ್ತು ಸಾಧನೆಯನ್ನು ಸರ್ಕಾರ, ಸಮಾಜ, ಹಾಗೂ ಕೆಲವು ಸಂಘ-ಸಂಸ್ಥೆಗಳು ಅವನನ್ನು ಸಾಂಸ್ಕೃತಿಕ ವೀರನನ್ನಾಗಿ ಸ್ಥೀರಿಕರಣಗೊಳಿಸಲಾಗಿದೆ. ಇದರಿಂದ ಯುವಕರಲ್ಲಿ ರಾಯಣ್ಣನ ಬಗ್ಗೆ ಗೌರವ, ಪ್ರೀತಿ, ಅಭಿಮಾನ ಮೂಡುವಂತಹ ಭಾವನೆಯನ್ನು ಇಲ್ಲಿ ಗಮನಹರಿಸಲಾಗಿದೆ.

೧೦. ಕನ್ನಡ ನಾಡು-ನುಡಿಯ ಪ್ರತೀಕವಾದಂತಹ ಐತಿಹಾಸಿಕ ವ್ಯಕ್ತಿಯನ್ನು ಒಂದು ಸಮುದಾಯದ ನಾಯಕನಾಗಿ ಚಿತ್ರಿಸುವುದು ಸೂಕ್ತವಲ್ಲ ಎಂದು ಹೇಳಬಹುದು.

ಹೀಗೆ ಸಂಗೊಳ್ಳಿ ರಾಯಣ್ಣನ ಆಕರಗಳ ಸ್ವರೂಪ ಮತ್ತು ವಿಶ್ಲೇಷಣೆಗೆ ಸಂಬಂಧಿಸಿದ ಈ ಅಧ್ಯಯನವು ಬಹುಮಟ್ಟಿಗೆ ಸಮಗ್ರವಾಗಿದೆ. ಈ ಅಧ್ಯಯನದ ಉದ್ದಕ್ಕೂ ಕ್ಷೇತ್ರಕಾರ್ಯದ ಹಿನ್ನೆಲೆಯಿದೆ. ಒಂದರ್ಥದಲ್ಲಿ ಈ ಅಧ್ಯಯನ ಕ್ಷೇತ್ರಾಧಾರಿತ, ದಾಖಲಾಧಾರಿತ ಅಧ್ಯಯನವಾಗಿರದೆ, ಲಿಖಿತ ಮತ್ತು ಮೌಖಿಕ ಆಕರಗಳನ್ನು ಬಳಸಿಕೊಂಡು ರಾಯಣ್ಣನ ಚರಿತ್ರೆಯನ್ನು ಗುರುತಿಸುವ ಮತ್ತು ದಾಖಲಿಸುವ ಕಾರ್ಯವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

* * *

**ಅನುಬಂಧಗಳು**

* ಸಂಗೊಳ್ಳಿ ರಾಯಣ್ಣನನ್ನು ಕುರಿತ ಅಪ್ರಕಟಿತ ಲಾವಣಿ
* ಛಾಯಾಚಿತ್ರಗಳು
* ಮೂಲ ಆಕರಗಳು
* ಆನುಷಂಗಿಕ ಆಕರಗಳು
* ಇಂಗ್ಲೀಷ್ ಗ್ರಂಥಗಳು

**ಅನುಬಂಧ – ೧**

**ಸಂಗೊಳ್ಳಿ ರಾಯಣ್ಣನನ್ನು ಕುರಿತ ಅಪ್ರಕಟಿತ ಲಾವಣಿ**

**ಹಾಡಿದವರು** – ರಮೇಶ ನಿರುಳ್ಳಿ

**ಊರು** – ಚಿಕ್ಕಹುಳ್ಳಾಳ

**ಜಿಲ್ಲೆ** – ಹಾವೇರಿ

**ಕ್ರಾಂತಿ ವೀರ ಸಂಗೊಳ್ಳಿ ರಾಯಣ್ಣನ ಪದ**

ಕ್ರಾಂತಿ ವೀರ ಸಂಗೊಳ್ಳಿ ರಾಯಣ್ಣನ ಚರಿತ್ರೆ ಹೇಳುತ್ತೇನೆ ಕೇಳ್ರಿದನಾ॥

ಬೆಳಗಾವಿ ಜಿಲ್ಲೆಯ ಕಿತ್ತೂರು ಪಟ್ಟಣವೆಂಬ ಮಲ್ಲಸರ್ಜರಾಜ ಆಳುತ್ತಿದ್ದ॥

ರಾಜನ ಹಿರಿಯ ಹೆಂಡತಿ ಚನ್ನಮ್ಮನೋ ಚಿಕ್ಕಹೆಂಡತಿ ವೀರಮ್ಮನೋ॥

ಇವರಿಗೆ ಮಕ್ಕಳ ಸಂತಾನವಿಲ್ಲದೆ ಮನದಲ್ಲಿ ಮರಮರ ಕೊರಗುವರೊ॥

ಕಿತ್ತೂರು ಸಂಸ್ಥಾನದ ಸಂಗೋಳ್ಳಿಯೆಂಬ ಊರು ಅಲ್ಲಿ ರೋಗಣ್ಣನವರ ಬರಮಣ್ಣನೊ॥

ಇವನ ಪತ್ನಿಯ ಹೆಸರು ಕೆಂಚಮ್ಮನೊ ಇವರ ಮಗನೇ ರಾಯಣ್ಣನೊ॥

ಹಾಲುಮತದ ಕುರುಬರೋ ಇವರು ಊರ ವಾಲಿಕಾರ್ತಿ ಮಾಡುತ್ತಿದ್ದರೊ॥

ಭರಮಣ್ಣನು ಶಿವಾಧಿನಾದನಂತರ ರಾಯಣ್ಣನು ಊರ ವಾಲಿಕಾರ್ಕಿ ಮಾಡುತ್ತಿದ್ದ॥

॥ವಚನ॥ ಈ ಕೇಳಿರಿ ಪರದೇಶದವರಾದ ಕೆಂಪು ಮುಖದ ಇಂಗ್ಲಿಷರು

ಸಮುದ್ರದಾಟಿ ಭಾರತಕ್ಕೆ ಬಂದು ಇಲ್ಲಿ ವ್ಯಾಪಾರ ಮಾಡತೊಡಗಿದದು ಭಾತರದ

(ಮುತ್ತು, ರತ್ನದ) ಸಿರಿ ಸಂಪತ್ತು ನೋಡಿ ಈ ದೇಶವನ್ನು ನಾನೇ ಆಳಬೇಕೆಂದು ಹಂಚಿಕೆ ಮಾಡಿದರು

ಉತ್ತರ ಭಾರತದ ರಾಜರನ್ನು ಮೊಸದಿಂದ ಕೊಲ್ಲುತ್ತ ದಕ್ಷಿಣ ದಿಕ್ಕಿಗೆ ಬಂದು

ಬೆಳಗಾವ, ಧಾರವಾಡ ತಮ್ಮ ವಶಕ್ಕೆ ತೆಗೆದುಕೊಂಡು ಆಳತೊಡಗಿದ್ದರು

ಆಳತೊಡಗಿದ್ದಳು ಕಿತ್ತೂರು ರಾಜ್ಯದ ಒಂದು ವರ್ಷದ ಆದಾಯ ಐದು ಕಾಲ--

ಇಂಗ್ಲಿಷ ಅಧಿಕಾರಿ ಥ್ಯಾಕರೆಯು ಕಿತ್ತೂರು ಖಜಾನೆ ವಶಮಾಡಿ ಕೋಳುವೆ

ಹಂಚಿಕೆ ಮಾಡಿದನು ॥ಪದ॥

ಹದಿನೆಂಟುನೂರಾ ಇಪ್ಪತ್ತನಾಲ್ಕನೆ(೧೮೨೪) ಇಸ್ವಿಯ ಅಕ್ಟೋಬರ್ ತಿಂಗಳ ಇಪ್ಪತ್ತೊಂದನೆಯ

ತಾರೀಖಿಗೆ ಕಿತ್ತೂರು ರಾಜ್ಯಕ್ಕೆ ಮುತ್ತಿಗೆ ಹಾಕಿದನು ಥ್ಯಾಕರೆಯು॥

ಕಿತ್ತೂರು ರಾಜ್ಯ ಸೈನ್ಯವು ಕೋಟೆಬಾಗಿಲ ತೆರೆದು ಯುದ್ಧ ಮಾಡಲು ಸೂರುವಾತ॥

ಯುದ್ಧ ಮಾಡುವ ತಕ್ಷಣ ಚನ್ನಮ್ಮ ಥಾಕರೆ ರುಂಡ ಹಾರಿಸಿದ್ದಳು॥

ಈ ಯುದ್ಧದಲ್ಲಿ ಕಿತ್ತೂರು ರಾಜ್ಯಕ್ಕೆ ಪ್ರಚಂಡ ಜಯವು ಸಿಕ್ಕಿತು॥

ಮತ್ತೊಬ್ಬ ಅಧಿಕಾರಿ ಚಾಂಪಿಯನ್ ಸಾಹೇಬ್ ಯುದ್ಧಕ್ಕೆ ಸಜ್ಜಾದನು॥

॥ವಚನ॥ ಈ ಕೇಳಿರಿ ಕಿತ್ತೂರಿನವರೆ ಆದ ಕೃಷ್ಣಾಜಿ ಪಂಥ ಎನ್ನುವನು ಇಂಗ್ಲಿಷರು

ಕೊಡುತ್ತೇನೆಂದ ಅಧಿಕಾರ ಆಸೆಗೆ ಆಸೆಮಾಡಿ ಕಿತ್ತೂರು ರಾಣಿ ಚನ್ನಮ್ಮನ

ಮದ್ದಿನ ಕೊಣೆಗೆ ಸಗಣಿ ರಾಗಿ ನೀರು ಕೊಡಿಸಿ ಮದ್ದು ಹಾರದಂತೆ ಮಾಡಿದನು

ಇದರಿಂದ ಇಂಗ್ಲಿಷರು ಚನ್ನಮ್ಮನನ್ನು ದೋಷದಿಂದ ಸೆರೆಹಿಡಿದು ಬೈಲಹೊಂಗಲ

ಸೆರೆಮನೆಯಲ್ಲಿಟ್ಟರು ಈ ಯುದ್ಧದಲ್ಲಿ ನಮ್ಮವರಿಂದ ಮೋಸವಾದನು ರಾಯಣ್ಣ

ನೋಡಿ ಇಂಗ್ಲೀಷರನ್ನು ಹೋಡೆದೊಡಿಸಿ ಚನ್ನಮ್ಮ ರಾಣಿಯನ್ನು ಸಿಂಹಾಸನದ

ಮೇಲೆ ಕೋಡ್ರಿಸಿ ತೀರುತ್ತೇನೆಂದು ಪಂಥಮಾಡಿ ಸೈನ್ಯ ತಯಾರಿಮಾಡತೊಡಗಿದಾ

ರಾಯಣ್ಣನ ಸೈನ್ಯದಲ್ಲಿ ಚನ್ನಬಸಪ್ಪ ಅನುವವನ್ನು ಕತ್ಕೆತೀರುವುದರಲ್ಲಿ ಬಾರೀಸೂರಾ

ಇವನಿಗೆ ಬಿಚ್ಚುಗತ್ತಿ ಚನ್ನಬಸಪ್ಪ ಅನ್ನುತ್ತಿದ್ದರು. ಬೆಳವಡಿ ಗ್ರಾಮದ ವಡ್ಡರ

ಎಲ್ಲಣ್ಣನ್ನು ಭೂಮಿಗೆ ಕಿವಿಹಚ್ಚಿ ಐದು ನಿಮಿಷ ಮಲಗಿದರೆ ಸಾಕು ಇಪ್ಪತ್ತು

ಮೈಲು ದೂರದಲ್ಲಿ ಬರುವ ಸೈನ್ಯದ ಹೆಜ್ಜೆ ಸಪ್ಪಳ ಗುರುತು ಹಿಡಿಯುತ್ತಿದ್ದನಂತೆ

ಜೈಲಿನಲ್ಲಿ ಚನ್ನಮ್ಮನ ದರ್ಶನ ಪಡೆಯಬೇಕೆಂದು ಮಾಡಿದಾ॥

ಜೈಲಿನಲ್ಲಿ ಜಂಗಮ ಸೇನೆ ಮಾಡಿ ಚನ್ನಮ್ಮ ಊಟ ಮಾಡುತ್ತಿದ್ದಳು ಕಾವಿ ಬಟ್ಟೆ ತೊಟ್ಟು
ಜಂಗಮನಾಗಿ

ರಾಯಣ್ಣ ಚನ್ನಮ್ಮನ ಹತ್ತಿರ ಹೋರಜಾನು॥ ನಾನು ಜಂಗಮನಲ್ಲಿ ನಿನ್ನ ಮಗ ರಾಯಣ್ಣ
ಎಂದು

ಪಾದಕ್ಕೆ ಶರಣು ಮಾಡಿದನು॥ ಸೈನ್ಯಕಟ್ಟಿ ಯುದ್ಧಕ್ಕೆ ಸಜ್ಜು ಮಾಡೇನೇ ನಿನ್ನ ದರ್ಶನ ಪಡಿಯಲು ಬಂದೆ।

ಈ ಮಾತು ಕೇಳಿ ಚನ್ನಮ್ಮ ಆನಂದವಾಗಿ ನನ್ನ ಹತ್ತಿರದಲ್ಲಿ ಇದ್ದಂತಾ॥ ಮುತ್ತು ರತ್ನ

ಬಂಗಾರದ ಆಭರಣಗಳನ್ನು ತೆಗೆದು ರಾಯಣ್ಣನನಿಗೆ ಕೊಟ್ಟಳು॥ ಇವನು ಮಾರಿ ಸೈನ್ಯದ

ಕರ್ಚಿಗೆ ದುಡ್ಡು ತೆಗೆದುಕೊ ಎಂದು ಹೇಳಿದಳು। ತಾಯಿ ಆರ್ಶೀವಾದ

ಪಡೆದುಕೊಂಡ ರಾಯಣ್ಣ ಜೈಲಿನಿಂದ ಹೋದನು॥

ಇನಾಮಿ ಜಮೀನ ಅಳತೆ ಮಾಡಬೇಕೆಂದು ಕುಲಕರ್ಣಿ ಹಂಚಿಕೆ ಮಾಡಿದನು॥

ರಾಯಣ್ಣನ ಹೋಲಕ್ಕಾಗಿ ತಪ್ಪು ಅಳತೆಯ ಮಾಡಿ ಹೋಲ ಹಚ್ಚಿಗೆ ಮಾಡಿದ ಕುಲಕರ್ಣಿ

ಮೂವತ್ತು ರೂಪಾಯಿಗೆ ಹೆಚ್ಚು ಅಗತೈತ್ತಿ ಇವತ್ತ ಕೋಡಬೇಕು ಅಂದಾಗ॥

॥ವಚನ॥ ಈ ಕೇಳಿರಿ ಆಗ ರಾಯಣ್ಣ ಹೇಳಿದಾ ನಮ್ಮ ಕಿತ್ತೂರು ರಾಜ್ಯದ ತೋಟದಲ್ಲಿ ಒಂದು ಹುಲಿಯು

ಸೇರಿ ಜನರನ್ನು ಕೊಂದು ತಿನ್ನುತ್ತಿತ್ತು ಅದನ್ನು ನಮ್ಮ ತಂದೆ ಒಬ್ಬನೆ ಹೊಡೆದು ಕೊಂದದಕ್ಕೆ

ನಮ್ಮ ರಾಜರು ರಕ್ತ ಮಾನ್ಯದ ಹೋ ಅಂತಾ ಹೆಸರಿಟ್ಟು ಇನಾಮಕೊಟ್ಟು ಹೊದಾ ನಾನು

ಹಪ್ತೆ ಕೊಡೊದಿಲ್ಲಾ ಅಂದು ಹೋದನು ಇವನ ಹೇಗಾದರೂ ಮಾಡಿ ಜೈಲಿಗೆ ಹಾಕಿಸಬೇಕೆಂದು

ಕುಲಕರ್ಣಿ ಹಂಚಿಕೆ ಹಾಕಿ ಸಂಪಗಾವಿ ಮಾಮ್ಲೆದಾರಗ ಅರ್ಜಿ ಬರೆದು ರಾಯಣ್ಣಗ

ಅರ್ಜಿಕೊಟ್ಟು ಬರಲು ಹೇಳಿದಾ ॥ಪದ॥

ಸಂಪಗಾವಿ ಕಛೇರಿಗೆ ರಾಯಣ್ಣ ಹೋಗಿ ಮಾಮ್ಲೆದಾರಗ ಅರ್ಜಿಕೊಟ್ಟಾನ॥

ರಾಯಣ್ಣ ಕೊಲ್ಲಾಕ ಬಂದಿದದ್ನೆಂದು ಕುಲಕರ್ಣಿ ಅರ್ಜಿಯ ಬರೆದಿದ್ದನಾ॥

ತಕ್ಷಣ ಮಾಮ್ಲೆದಾರ ರಾಯಣ್ಣನನ್ನು ಜೈಲಿನೊಳಗೆ ಹಾಕಿಸಿದನು॥

ಇತ್ತ ಕೆಂಚವ್ವನನ್ನು ಛಾವಡಿಗೆ ಕರಿಸಿ ಕುಲಕರ್ಣಿ ಹಪ್ತೆಯ ಕೊಡುಯೆಂದಾ

ಸಂಪಗಾವಿಗೆ ಹೋದ ನನ್ನ ಮಗ ಬರಲೆಂದು ಕೆಂಚವ್ವ ದಯನದಿ ಹೇಳಿದಳಾ॥

ಆಗಿನ ಕಾಲದಲ್ಲಿ ಹಪ್ತೆ ಕೊಡದಿದ್ದರೆ ತಲೆಯ ಮೇಲೆ ಕಲ್ಲು ಹೇರುತ್ತಿದ್ದರು॥

ನೀಚ ಕುಲಕರ್ಣಿ ಕೆಂಚವ್ವನ ತಲಿಮೇಲೆ ಕಲ್ಲು ಹೇರಿ ನಿಲ್ಲಿಸಿದನು॥

ಕೆಂಚವ್ವನ ಕಷ್ಟನೋಡಿ ಊರಜನಕ್ಕೆ ಮನದಲ್ಲಿ ಮರಗಿದರು॥

ರಾಯಣ್ಣನ ಗೆಳೆಯ ಬಿಚ್ಚುಗತ್ತಿ ಚನ್ನಪ್ಪ ಈ ಸುದ್ಧಿ ಗೋತ್ತಾಗಿ ಬಂದಾನ॥

ಕುಲಕರ್ಣಿಗೆ ಜಾಮೀನು ಕೊಟ್ಟು ತಲಿ ಮೇಲಿನ ಕಲ್ಲು ತಗಸಿದನು॥

ಜೈಲಿನಲ್ಲಿಂದ ರಾಯಣ್ಣನನ್ನು ಜಾಮೀನು ತಗೊಂಡು ಬಿಟ್ವಾರ॥

॥ವಚನ॥ ಈ ಕೇಳಿರಿ ರಾಯಣ್ಣ ಜೈಲಿನಿಂದ ಹೊರಗೆ ಬಮದು ನಿಂತು ಬಲಗಾಲ

ಮಂಡಿಊರಿ ಭೂಮಿ ಚಪ್ಪರಸಿ ಮಣ್ಣಾ ಮಡಾ ಮದ್ಯಾನದಾಗ ಈ ಕಛೇರಿ ಸುಡುತ್ತೇನೆ

ಅಂತಾ ಪಂಥ ಮಾಡಿ ಊರಿಗೆ ಚಂದಾ। ಕೆಂಚವ್ವ ತನ್ನ ತಲಿಮೇಲೆ ಕಲ್ಲು ಹೇರಿದ್ದು
ಹೇಳಿ

ಜೋರಾಗಿ ಅತ್ತಳು ರಾಯಣ್ಣ ಬೆಂಕಿ ಬೆಂಕಿ ಆದ ಕುಲಕರ್ಣಿ ಮನೆಗೆ ಬಂದು ಕುಲಕರ್ಣಿ

ಹೊರಗಬಾರದೇ ಅಂದಾಗ ಕುಲಕರ್ಣಿ ಪತ್ನಿಯನ್ನು ಕೊಂದು ನನ್ನನ್ನು ರಂಡಿ
ಮಾಡಬೇಡಣ್ಣಾ

ಅಂದ್ಲು ರಾಯಣ್ಣ ಹೆಣ್ಣು ಮಕ್ಕಳ ಮೇಲೆ ಬಾಳ ಪ್ರೀತಿ ಕಿತ್ತೂರು ಹೆಣ್ಣಿನ ಪುಣ್ಯದಿಂದ
ಕುಲಕರ್ಣಿ

ಬದುಕಿದಾ ಸರ್ಕಾರಿ ಕೆಲಸಕ್ಕೆ ರಾಯಣ್ಣ ಶರಣು ಮಾಡಿಬಿಟ್ವಾ ಸೈನ್ಯಕಟ್ಟಿ ಯುದ್ಧಕ್ಕೆ ಸಜ್ಜಾದ॥

॥ಪದ॥ ಹದಿನೆಂಟನೂರಾ ಇಪ್ಪತ್ತೊಂಬತ್ತನೆ ಇಸ್ವಿಯ ಏಪ್ರೀಲ್ ತಿಂಗಳ ಎರಡನೇ ಶನಿವಾರ

ಚನ್ನಮ್ಮ ಜೈಲಿನಲ್ಲಿ ನಿಧನಳಾದಳು॥ ಈ ಸುದ್ಧಿ ಕೇಳಿ ರಾಯಣ್ಣನಿಗೆ ಆಕಾಶವೇ

ಕಳಚಿ ಬಿದ್ದಂತಾಯಿತು। ಶಿವಗತ್ತಿಯ ರಾಚನಲ್ಲಿಗೆ ಬಂದು ಸಹಾಯ

ಕೇಳಿದನು॥ ಒಕ್ಕಳಬರಮನು ಬಕಾಸೂರನಂತೆ ನಮ್ಮನ್ನು ಕಾಡುತ್ತಿರುವನು

ಅವನನ್ನು ಕೊಂದು ಎಲ್ಲಾ ಸೈನ್ಯವನ್ನು ತಗೊಂಡು ಹೋಗೆಂದು ಹೇಳಿದನು॥

ತಕ್ಷಣ ರಾಯಣ್ಣ ಬರಮಣ್ಣನಲ್ಲಿಗೆ ಬಂದು ಯುದ್ಧ ಮಾಡಲು ಕರಿದಾನ॥

ಎರಡು ಜನರು ಯುದ್ಧ ಮಾಡಲು ಭರಮನ ರುಂಡವ ಹಾರ್ಸಿದನು॥

ಶಿವಗುತ್ತಿರಾಜನ ಎಲ್ಲಾ ಸೈನ್ಯವು ರಾಯಣ್ಣನ ಸೈನ್ಯಕ್ಕೆ ಸೇರಿದರು ನಂದಗಡದ ಕಛೇರಿಗೆ

ಹೋಗಿ ಖಜಾನೆಯ ಲೂಟಿಮಾಡಿದರು ಅಂಕಲಗಿ ಊರು ಹಡಲಿಗಿ ಊರು
ಚಾವಡಿಯನ್ನು

ಸುಟ್ಟು ಸಂಪಗಾವಿ ಕಛೇರಿಯ ಕಾವಲ ಮಾಡಲು ಮಿಲಿಟ್ರಿಯದೆಂದು ಇಟ್ಟಿದ್ದರು॥

ಕಿತ್ತೂರಿಗೆ ಮುತ್ತಿಗೆ ಹಾಕಬೇಕೆಂದು ರಾಯಣ್ಣ ಸುಳ್ಳ ಸುದ್ಧಿ ಹರಡಿಸಿದನು॥

ಇತ್ತ ರಾಯಣ್ಣನು ಸಂಪಗಾವಿ ಕಛೇರಿಗೆ ಬೆಂಕಿ ಹಚ್ಚಿ ಸುಟ್ಟನು ಸುಟ್ಟ ಬೂದಿಯನ್ನು

ಹಣೆಗೆ ಹಚ್ಚಿಕೊಂಡು ಪಂಥವು ತೀರಿತೆಂದು ಬಂದಾನ॥

॥ವಚನ॥ ಈ ಕೇಳಿರಿ ಇದರಂತೆ ರಾಯಣ್ಣ ಇಂಗ್ಲಿಷರಿಗೆ ಮೊಸ ಮಾಡುತ್ತಿದ್ದಾ ಬೆದರಿನ

ಗೊಂಬೆ ಮಾಡಿ ಅಡವಿಯಲ್ಲಿ ನಿಲ್ಲಿಸಿ ಪರಾಗಿ ಆಗುತ್ತಿದ್ದಾಗ ರಾಯಣ್ಣನನ್ನು ಹಿಡಿಯಲು

ಬಂದವರು ಬೆದರಗೊಂಬೆನೋಡಿ ನಿರಾಶರಾಗುತ್ತಿದ್ದರು ಒಂದು ಕಡೆಯ ದಂಡೆಯ ಮೇಲೆ

ಇಂಗ್ಲೀಷರು ಬಿಡು ಬಿಟ್ಟಿದ್ದರು ಬಂದುಕುಗಳನ್ನು ದಂಡಿಗೆ ಇಟ್ಟಿದ್ದರು ರಾಯಣ್ಣ ದೂರದಿಂದ

ನೋಡಿದಾಗ ಹೋಲದಲ್ಲಿ ಕೆಲಸಾ ಮಾಡುತ್ತಿದ್ದ ಬಾಳುನಾಯಕನಲ್ಲಿ ಹೋದಾ

ನನ್ನನ್ನು ನಿನ್ನ ಹುಲ್ಲಿನ ಹೋರೆಯಲ್ಲಿ ಕಟ್ಟಿಕೊಂಡು ಹೋಗಿ ಕೆರೆಯದಂಡಿ ಮೇಲೆ ಇಟ್ಟ

ಇಂಗ್ಲಿಷರು ಬಂದು ಕೆರೆ ಹತ್ತಿರ ಹುಲ್ಲಿನ ಹೋರೆ ಇಳುವು ಅಂದಾ ಅದರಂತೆ ಬಾಳು

ನಾಯಕ ಹುಲ್ಲಿನ ಹೋರೆಯಲ್ಲಿ ರಾಯಣ್ಣ ಮಲಗಿಸಿ ಹೋರಿ ಕಟ್ಟಿ ಹೋತ್ತು

ಕೊಂಡುಬಂದು

ಇಂಗ್ಲಿಷರು ಇಟ್ಟ ಬಂದಕದ ಹತ್ತಿರ ಇಟ್ಟು ನೀರು ಕುಡಿಯುವನಂತೆ ಕೆರೆಯಲ್ಲಿ ಹೋದಾ

ಹುಲ್ಲಿನ ಹೋರೆಯಿಂದ ರಾಯಣ್ಣ ಕಡಿಗೆ ಬಂದು ಇಂಗ್ಲಿಷರ ಎಲ್ಲಾ ಬಂದುಕು ಕೆರೆಯಲ್ಲಿ

ಒಗದು ಪರಾರೀಯಾದಾ॥ಪದ॥ ಕೆಂಪು ಮುಖದ ಇಂಗ್ಲಿಷರು ಜನರಿಗೆ ರಾಯಣ್ಣನು

ಹಿಡಿಯುವರು ಕಪ್ಪಾತು॥ ಕುದಾನಪುರ ಲಿಂಗನಗೌಡ ನೆಗಿನಹಾಳದ ವೆಂಕನಗೌಡ॥

ಧಾರವಾಡದ ಕಲೆಕ್ಟರ ಕೂಡಿಕೊಂಡು ಗುಪ್ತ ಆಲೋಚನ ಮಾಡಿದರು॥

ಮೋಸಮಾಡಿಯು ಹಿಡಿಯಬೇಕೆಂದು ಅವರು ಹಂಚಿಕೆ ಮಾಡಿದರು॥ ರಾಯಣ್ಣನ ಸೋದರ

ಮಾವ ಲಕ್ಕಪ್ಪನನ್ನು ಕರಿಸಿ ರಾಯಣ್ಣನನ್ನು ಹಿಡಿದುಕೊಂಡು ಎಂದಾಗ ಲಕ್ಕಪ್ಪ ಹೇಳುತ್ತಾನೆ

ನನ್ನನ್ನು ಕೊಲ್ಲಿರಿ ನನ್ನ ಅಳಿಯನು ಹಿಡಿದುಕೋಡಲಾರೆ॥ ಹೆಂಡರು ಮಕ್ಕಳನ್ನು

ಬೀದಿಯಲ್ಲಿ ನಿಲ್ಲಿಸಿ ಬೆಂಕಿ ಹಚ್ಚಿಬಿಡುತ್ತೇವೆಂದಾನು ನಾನು ಸಾಯಲಿ ನನ್ನ ಹೆಂಡರು

ಮಕ್ಕಳು ಸಾಯುವದುಬೇಡಾ ಅನ್ನುವ॥ ಮೋಹಪಾಶಕ್ಕೆ ಸಿಕ್ಕು ಲಕ್ಕಪ್ಪನು ರಾಯಣ್ಣನನ್ನು

ಹಿಡಿಯಲು ಒಪ್ಪಿದನು॥ ಬುತ್ತಿಯ ಕಟ್ಟಿಕೊಂಡು ರಾಯಣ್ಣನಲ್ಲಿಗೆ ಬಂದು ನಿನ್ನ ನೋಡಾಕ

ಬಂದೆನೆಂದಾ॥ ನಾನು ನಿನ್ನಲ್ಲಿಯೇ ಇರುವೆನೆಂದು ರಾಯಣ್ಣನಿಗೆ ಹೇಳಿದನು॥

ಡೋರಿ ಹಳ್ಳದ ಮಡಕ್ಕೆ ಜಳಕಮಾಡಲು ಲಕ್ಕಪ್ಪ ರಾಯಣ್ಣನ ಕರಿದಾನು॥

॥ವಚನ॥ ಈ ಕೇಳಿರಿ ರಾಯಣ್ಣನ ಜಳಕಾ ಮಾಡುವಾಗ ಯಾವಾಗಲೂ ಬಾಯಲ್ಲಿ ಕತ್ತಿ ಇಟ್ಟುಕೊಂಡೆ

ಜಳಕಾ ಮಾಡುತ್ತಿದಾ ಅವನ ಹತ್ತಿರ ಕತ್ತಿ ಇದ್ದಾಗ ನೂರಾರು ಜನರನ್ನು ಒಬ್ಬನೇ ಸಂಹಾರ್ದ ಮಾಡುವಷ್ಟು ಶಕ್ತಿವಾನನಿದ್ದು ಆದರೆ ಸೋದರಮಾವ ಅನುವ ವಿಶ್ವಾಸದಿಂದ ಹಳ್ಳದ ದಂಡಿಮೇಲೆ ಅರವಿಕಳೆಬಿಟ್ಟು ಅಲ್ಲಿಯೇ ಕತ್ತಿ ಇಟ್ಟು ಜಳಕ ಮಾಡುವಾಗ ಇಂಗ್ಲಿಷರ ದಂಡು ಮುತ್ತಿಗೆ ಹಾಕಿ ರಾಯಣ್ಣನನ್ನು ಹಿಡಿದರು. ಕಿತ್ತೂರಿನ ಹುಲಿ ಸ್ವಾತಂತ್ರ್ಯದ ಹುಲಿ ಮೋಸದ ಬಲೆಗೆ ಸಿಕ್ಕಿತು॥ಪದ॥ ರಾಯಣ್ಣನನ್ನು ಗಲ್ಲಿಗೇರಿಸಲು ನಂದಗಡಕ್ಕೆ ತಂದಾಗ ರಾಯಣ್ಣ ಒಂದು ಸ್ಥಳವನ್ನು ತೋರಿಸಿ ನನ್ನ ಸಮಾಧಿ ಇಲ್ಲೆ ಮಾಡಿರೆಂದಾ॥ ನನ್ನ ಸಮಾಧಿ ಮೇಲೆ ಆಲದ ಮರ ಹಚ್ಚಿ ಬೆಳಸಿರಿ ಮಂತ್ರಾನ ಹೇಳಿದನು॥ ಊರ ಹೊರಗ ದೊಡ್ಡ ಬಯಲಿನಲ್ಲಿ ದೊಡ್ಡ ಆಲದಮರವಿತ್ತು॥

ಹದಿನೆಂಟುನೂರಾ ಮೂವತ್ತೊಂದನೆ ಇಸ್ವಿಯ ಜನವರಿ ತಿಂಗಳಾ॥ (೧೮೩೧) ೨೬-೧)
ಇಪ್ಪತ್ತಾಲ್ಕನೆಯ ತಾರೀಖಿನ ದಿನ ರಾಯಣ್ಣನನ್ನು ಗಲ್ಲಿಗೆ ಹಾಕಿದರು॥
ಊರ ಜನರು ಇವನನ್ನು ಓದು ರಾಯಣ್ಣ ಹುಗಿದ ಜಾಗದಲ್ಲಿ॥
ಆಲದ ಮರವು ಒದ್ರತ್ ಪ್ರಮಾಣದಲ್ಲಿ ಬೆಳೆದುನಿಂತಿದೆ ಇಗಲ್ಲಿ॥
ಕನಕನೋಡಯನಾದ ಕಾಗಿನೆಲೆಯ ಆದಿಕೇವನನನ್ನು ನೆನೆಯುತ್ತಾ॥
ಇಲ್ಲಿಗೆ ಈ ಸಂದು ಮುಗಿಸುವೆನಾ॥

* * *

# ಛಾಯಾ ಚಿತ್ರಗಳು



ರಾಯಣ್ಣನ ಸಮಾಧಿಗೆ ಹರಕೆ ಸಲ್ಲಿಸುತ್ತಿರುವ ಭಕ್ತರು.



ಸಂಗೊಳ್ಳಿ ರಾಯಣ್ಣನ ಪ್ರಥಮ ಮೂರ್ತಿ ಹಾಗೂ ರಾಯಣ್ಣ ಬಳಸುತ್ತಿದ್ದ ಲೋಡುಗಳು.



ಸಂಗೊಳ್ಳಿಯಲ್ಲಿರುವ ಕಲ್ಯಾಣಮಂಟಪ ಹಾಗೂ ಉದ್ಯಾನವನ



ಹೊಸ ಸಂಗೊಳ್ಳಿಯಲ್ಲಿರುವ ರಾಯಣ್ಣನ ಮೂರ್ತಿ

ಬೆಂಗಳೂರಿನ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ರೈಲ್ವೆ ನಿಲ್ದಾಣದಲ್ಲಿರುವ ರಾಯಣ್ಣನ ಪ್ರತಿಮೆ.



ಮೂಲ ಆಕರಗಳು:


೧. ಒಡೆಯರ್ ಡಿ. ಹೆಗ್ಗಡೆ, ೨೦೧೧, ಸ್ವಾತಂತ್ರ್ಯ ಸೇನಾನಿ ಸಂಗೊಳ್ಳಿ ರಾಯಣ್ಣ, ಅಖಿಲಾ ಏಜೆನ್ಸೀಸ್, ಮೈಸೂರು.

೨. ಕ್ಯಾತನಹಳ್ಳಿ ರಾಮಣ್ಣ(ಸಂ), ೧೯೭೨, ಫ್ಲೀಟರು ಸಂಗ್ರಹಿಸಿದ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಯ.

೩. ಕ್ಯಾತನಹಳ್ಳಿ ರಾಮಣ್ಣ(ಸಂ), ೧೯೭೯, ಐದು ಐತಿಹಾಸಿಕ ಲಾವಣಿಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪. ಕುಂಬಳಹಳ್ಳಿ ಮುನಿರಾಜು, ೨೦೧೩, ರಾಷ್ಟ್ರವೀರ, ರಾಷ್ಟ್ರಪ್ರೇಮಿ ಹಾಲುಮತದ ಸಂಗೊಳ್ಳಿ ರಾಯಣ್ಣ, ಕನಕಸುಧಾ ಪ್ರಕಾಶನ, ಬೆಂಗಳೂರು.

೫. ಗಂಗೂಬಾಯಿ ಅ ಪವಾರ, ಸಂಗೊಳ್ಳಿ ರಾಯಣ್ಣ, ಸಿದ್ದೇಶ್ವರ ಪ್ರಕಾಶನ, ಗದಗ.

೬. ಗದ್ದಗಿಮಠ ಬಿ. ಎಸ್, ೧೯೬೯, ಕನ್ನಡ ಜಾನಪದ ಗೀತೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೭. ಚಂದ್ರಜ್ಯೋತಿ ಕೆ. ವಿ., ೨೦೦೮, ಸಂಗೊಳ್ಳಿ ರಾಯಣ್ಣ, ಸ್ಟೂಡೆಂಟ್ ಬುಕ್ ಕಂಪನಿ, ತುಮಕೂರು.

೮. ಜ್ಯೋತಿ ಹೊಸೂರ, ೨೦೦೨, ಜನತಾ ಕ್ರಾಂತಿಯ ವೀರರಾಯಣ್ಣ, ಜಾನಪದ ಮಂಟಪ ಕಾಲಗತಿ ಪ್ರಕಾಶನ, ರಾಯಬಾಗ.

೯. ಜ್ಯೋತಿ ಹೊಸೂರ, ೨೦೦೩, ಡೊಳ್ಳಿನ ಹಾಡುಗಳ ಸಮೀಕ್ಷೆ, ಕಾಲಗತಿ ಪ್ರಕಾಶನ, ರಾಯಬಾಗ.

೧೦. ಜ್ಯೋತಿ ಹೊಸೂರ, ೨೦೧೫, ಸಂಗೊಳ್ಳಿ ರಾಯಣ್ಣ ಚರಿತ್ರೆ ಸಂಶೋಧನೆ, ಕಾಲಗತಿ ಪ್ರಕಾಶನ, ರಾಯಬಾಗ.

೧೧. ನಿಂಗಣ್ಣ ಸಣ್ಣಕ್ಕಿ, ೧೯೮೭, ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ, ವಿದ್ಯಾನಿಧಿ ಪ್ರಕಾಶನ, ಗದಗ.

೧೨. ನಿಂಗಣ್ಣ ಸಣ್ಣಕ್ಕಿ, ೨೦೦೨, ಸಂಗೊಳ್ಳಿ ರಾಯಣ್ಣನ ಪರಿವಾರ, ವಿದ್ಯಾನಿಧಿ ಪ್ರಕಾಶನ, ಗದಗ.

೧೩. ನಿಂಗಣ್ಣ ಸಣ್ಣಕ್ಕಿ, ೨೦೦೩, ಜನಪದ ಸಾಹಿತ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೪. ನಿಂಗಣ್ಣ ಸಣ್ಣಕ್ಕಿ, ೨೦೦೯, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣನ ಚರಿತ್ರೆ–ಪರಿವಾರ, ವಿದ್ಯಾನಿಧಿ ಪ್ರಕಾಶನ, ಗದಗ.

೧೫. ನೇಗಿನಹಾಳ ಎಂ. ಬಿ., ೧೯೯೯, ನೇಗಿನಹಾಳ ಪ್ರಬಂಧಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ಪಾಟೀಲ ಎಚ್. ಎಸ್., ೨೦೦೬, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ.

೧೭. ಪಾಟೀಲ್ ಎಸ್. ವಿ.(ಸಂಗ್ರಹ), ಧೀರ ಪುರುಷರು, ಪಿ. ಸಿ. ಶಾಬಾದಿಮ್ಠ ಬುಕ್ ಡಿಪೋ, ಗದಗ.

೧೮. ಪಾಟೀಲ ಗುಂಡೂರ, ೨೦೦೯, ಸಮರಶೂರ ಸಂಗೊಳ್ಳಿ ರಾಯಣ್ಣ, ಪಿ. ಸಿ. ಶಾಬಾದಿ ಬುಕ್ ಡಿಪೋ, ಗದಗ.

೧೯. ಪಾವಟಿ ಚೆನ್ನಕ್ಕ, ೨೦೦೭, ಹುಲಕುಂದ ಭೀಮ ಕವಿಯ ಸಾಹಿತ್ಯ : ಲಾವಣಿಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೨೦. ಬಡಿಗೇರ ವೀರೇಶ(ಸಂ), ೨೦೦೦, ಹಳೆಯ ಲಾವಣಿಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧. ಬಡಿಗೇರ ವೀರೇಶ, ೨೦೦೯, ಸಂಸ್ಕೃತಿ ಸಂಕಥನ, ಮಯ ಪ್ರಕಾಶನ, ಕಮಲಾಪುರ.

೨೨. ಬಷೀರ್, ೨೦೦೧, ಸಂಗೊಳ್ಳಿ ರಾಯಣ್ಣ, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಪ್ರತಿಷ್ಠಾನ, ಬೆಂಗಳೂರು.

೨೩. ಬಸವರಾಜ ಕಟ್ಟೀಮನಿ, ೧೯೬೮, ಸಂಗೊಳ್ಳಿ ರಾಯನಾಯಕ, ಹೇಮಂತ ಸಾಹಿತ್ಯ ಪ್ರಕಾಶನ, ಬೆಂಗಳೂರು.

೨೪. ಬಸವರಾಜ ಕಟ್ಟೀಮನಿ, ೨೦೦೬, ಸಂಗೊಳ್ಳಿ ರಾಯಣ್ಣ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು.

೨೫. ಬಸವರಾಜ ಕಮತ., ೨೦೧೮, ಸಂಗೊಳ್ಳಿ ಬಂಡಾಯ ಚರಿತ್ರೆ ಮತ್ತು ಜಾನಪದ ನೆಲೆಯಲ್ಲಿ, ಸೂರ್ಯಪ್ರಕಾಶ್ ಗೌಡ ಡಿಸ್ಕೈಕೋರ್ ಇಂಡಿಯ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೨೬. ಬಸವರಾಜ ಮಲಶೆಟ್ಟಿ(ಸಂ), ೨೦೦೮, ಡಾ. ಬಸವರಾಜ ಮಲಶೆಟ್ಟಿ ಅವರ ಆಯ್ದ ಲೇಖನಗಳು, ಸ್ನೇಹಾ ಪ್ರಿಂಟರ್ಸ್. ಕಲಬುರ್ಗಿ.

೨೭. ಬೆಳವಾಡಿ ಮಂಜುನಾಥ(ಸಂ), ೨೦೧೫, ಸತ್ಯವಿಠಲ ವಿರಚಿತ ಸಂಗೊಳ್ಳಿ ರಾಯಣ್ಣ ವೀರಕಥಾ ಲಾವಣಿ, ಕನಕ ಗುರುಪೀಠ, ಕಲಬುರಗಿ.

೨೮. ಮಂಗಿ ಮಹಾಲಿಂಗ, ೨೦೧೧, ಚಾರಿತ್ರಿಕ ವ್ಯಕ್ತಿಯಾಗಿ ಸಂಗೊಳ್ಳಿ ರಾಯಣ್ಣ, ಕಿಕ್ಕೇರಿ ಪಬ್ಲಿಕೇಷನ್ಸ್, ಬೆಂಗಳೂರು.

೨೯. ಮಲ್ಲಿಕಾ ಘಂಟಿ, ೨೦೦೮, ವೀರ ಸಂಗೊಳ್ಳಿ ರಾಯಣ್ಣ, ಶ್ರೀಕಾಗಿನೆಲೆ ಮಹಾಸಂಸ್ಥಾನ ಕನಕ ಗುರುಪೀಠ, ರಾಯಚೂರು.

೩೦. ಮಾನಸ, ೨೦೧೧, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ತನುಮನ ಪ್ರಕಾಶನ, ಮೈಸೂರು.

೩೧. ರಮೇಶ ಬಿ. ಈ, ೨೦೧೧, ಕರ್ನಾಟಕದ ಕ್ರಾಂತಿಕಾರಿಗಳು, ಚಂದನ ಪ್ರಕಾಶನ, ಬೆಂಗಳೂರು.

೩೨. ರಮೇಶ ಬೆ. ಗೋ, ೨೦೧೨, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಸಾಹಿತ್ಯ ಸಾಧನಾ, ಬೆಂಗಳೂರು.

೩೩. ರಾಜಾನಂದ್, ೨೦೦೮, ಸಂಗೊಳ್ಳಿ ರಾಯಣ್ಣ, ಪುಸ್ತಕಾಭರಣ ಪ್ರಕಾಶನ, ಮೈಸೂರು.

೩೪. ರಾಜಪ್ಪ ಟಿ. ಎಸ್, ೧೯೭೮, ಧಾರವಾಡ ಜಿಲ್ಲೆಯ ಲಾವಣಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩೫. ರಾಮಚಂದ್ರ, ೨೦೧೨, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ನವಜ್ಯೋತಿ ಪ್ರಕಾಶನ, ಬೆಂಗಳೂರು.

೩೬. ಲಕ್ಷ್ಮೇಶ್ವರಮಠ, ೨೦೧೧, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಶಾಬಾದಿಮಠ ಪ್ರಿಂಟಿಂಗ್ ಪ್ರಸ್, ಗದಗ.

೩೭. ವಿಜಯಕುಮಾರ(ಸಂಗ್ರಹ), ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಮಾರುತಿ ಬುಕ್ ಸೆಂಟರ್, ಗದಗ.

೩೮. ವಿಷಕಂಠರಾವ್ ಎನ್, ೨೦೦೮, ಸ್ವಾತಂತ್ರ್ಯ ಸಮರದ ಲಾವಣಿಗಳು, ಕರ್ನಾಟಕ ಜಾನಪದ ಪರಿಷತ್, ಬೆಂಗಳೂರು.

೩೯. ಶಂಕರ ಲಮಾಣಿ, ೨೦೦೬, ಹಾಲು ಮತದ ವೀರಗಾಥೆ ಕ್ರಾಂತಿ ವೀರ ಸಂಗೊಳ್ಳಿ ರಾಯಣ್ಣ, ಸೇವಾಲಾಲ ಪ್ರಕಾಶನ, ಬಾಗಲಕೋಟೆ.

೪೦. ಶಶಿಧರ ಟಿ. ಎಸ್, ೨೦೦೩, ರಾಷ್ಟ್ರವೀರ ಸಂಗೊಳ್ಳಿ ರಾಯಣ್ಣ, ಕರಿಯಪ್ಪ ಎಂ, (ಸಂ) ಹಾಲತೊರೆ, ನಗರ ಕುರುಬರ ಸಂಘ.(ರಿ) ದಾವಣಗೆರೆ.

೪೧. ಶಿವರಾಮು, ೨೦೦೧, ಸಂಗೊಳ್ಳಿ ರಾಯಣ್ಣ, ಸಪ್ನ ಬುಕ್ ಹೌಸ್, ಬೆಂಗಳೂರು.

೪೨. ಶಿವಾನಂದ ಗುಬ್ಬಣ್ಣವರ, ೨೦೦೯, ಲಾವಣಿ ಸಾಹಿತ್ಯದಲ್ಲಿ ಸಂಸ್ಥಾನಿಕರ ಬಂಡಾಯ, ಅಕ್ಷಯ ಪ್ರಕಾಶನ, ಧಾರವಾಡ.

೪೩. ಶಿರೀಷ್ ಜೋಶಿ, ೨೦೧೧, ಮಿಂಚು, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ.

೪೪. ಸೂರ್ಯನಾಥ ಕಾಮತ್(ಸಂ), ೧೯೯೫, ಸಂಗೊಳ್ಳಿ ರಾಯಣ್ಣ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೪೫. ಸೂರ್ಯನಾಥ ಕಾಮತ್, ೨೦೧೨, ಇತಿಹಾಸದ ಆಚೆ–ಈಚೆ, ಹೇಮಂತ ಸಾಹಿತ್ಯ, ಬೆಂಗಳೂರು.

೪೬. ಸೋಮೇಶ್ವರ ನಾ.(ಸಂ), ೨೦೧೫, ವೀರ ಸಂಗೊಳ್ಳಿ ರಾಯಣ್ಣ, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೪೭. ಹರಿಶ್ಚಂದ್ರ ದಿಗ್ಸಂಗಿಕರ್(ಸಂ), ೨೦೦೯, ಚಾರಿತ್ರಿಕ ಲಾವಣಿಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೮. ಹೂಗಾರ ಎಚ್. ಎನ್., ೧೯೭೫, ಸ್ವಾತಂತ್ರ್ಯ ಹುಲಿ ಸಂಗೊಳ್ಳಿ ರಾಯಣ್ಣ, ಎಮ್. ವಿ. ಅರಳಿ ಬುಕ್ಸೆಲರ್, ಗದಗ.

**ಆನುಷಂಗಿಕ ಆಕರಗಳು:**


೧. ಅಂಬಲಿ ಎನ್. ಎಂ., ೨೦೦೯, ನಾಟಕಕಾರ ಚಿಕ್ಕೋಡಿ ಶಿವಲಿಂಗ ಶಾಸ್ತ್ರಿಗಳು, ಪೃಥ್ವಿ ಪ್ರಕಾಶನ, ಗದಗ.

೨. ಅನಂತರಾಮಯ್ಯ. ಆರ್. ಎಲ್(ಅನು), ೧೯೭೨, ಸ್ವಾತಂತ್ರ್ಯ ಹೋರಾಟ, ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ದೆಹಲಿ.

೩. ಕಲಬುರ್ಗಿ ಎಂ. ಎಂ(ಸಂ), ೨೦೧೫, ಕಿತ್ತೂರು ಸಂಸ್ಥಾನ ಸಾಹಿತ್ಯ ಭಾಗ–೩

೪. ಕೃಷ್ಣಮೂರ್ತಿ ಡಿ. ಎ., ೧೯೮೦, ಕ್ರಾಂತಿಯ ಕಿಡಿ ಕಿತ್ತೂರು ಚನ್ನಮ್ಮ, ಕಲಾ ಸಾಹಿತ್ಯ ಪ್ರಕಾಶನ, ಬೆಂಗಳೂರು.

೫. ಕೃಷ್ಣರಾಯ ಅ. ನ., ೧೯೫೧, ಕಿತ್ತೂರು ರಾಣಿ ಚೆನ್ನಮ್ಮ, ಆನಂದ ಬ್ರದರ್ಸ್ ಪಬ್ಲಿಷರ್ಸ್, ಬೆಂಗಳೂರು.

೬. ಕೊಂಗವಾಡ ಜಿ. ವಿ(ಸಂ), ೨೦೦೬, ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಕಿಡಿ, ಕಿತ್ತೂರು ಉತ್ಸವ ಸಮಿತಿ, ಕಿತ್ತೂರು.

೭. ಕೊಂಗವಾಡ ಜಿ. ವಿ. (ಸಂ), ೨೦೦೬, ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಕಿಡಿ ಕಿತ್ತೂರ ಇತಿಹಾಸ, ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಮತ್ತು ಅಧ್ಯಕ್ಷರು, ಕಿತ್ತೂರು ಉತ್ಸಹ ಸಮಿತಿ, ಬೆಳಗಾವಿ.

೮. ಗಂಗಾಧರಮೂರ್ತಿ ಬಿ. ಚಂದ್ರಪ್ಪ ಸಿ(ಸಂಗ್ರಹ), ೨೦೧೬, ಸಾಮ್ರಾಜ್ಯಗಳ ಯುಗ ೧೮೫೭–೧೯೧೪, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು.

೯. ಗದ್ದಗಿಮಠ ಬಿ. ಎಸ್. ೧೯೬೯, ಕನ್ನಡ ಜಾನಪದ ಗೀತೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೦. ಗವಿಮಠ ಬಿ. ಎಸ್.(ಸಂ), ೨೦೧೧, ಬೆಳಗಾವಿ ಕನ್ನಡ–ಕನ್ನಡಿಗ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೧. ಗುಂಜಾಳ ಎಸ್. ಆರ್.(ಸಂ), ೨೦೦೩, ಬೆಳಗಾವಿ ಬೆಳಕು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೨. ಚಂದ್ರಶೇಖರ್ ಎಸ್, ೧೯೯೩, ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ ಇತಿಹಾಸಜ್ಞರ ಧೋರಣೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ಜಯಪ್ರಕಾಶ ಬಂಜಗೆರೆ, ೨೦೧೫, ಕನ್ನಡ ರಾಷ್ಟ್ರೀಯತೆ, ಅಭಿನವ ಪ್ರಕಾಶನ, ಬೆಂಗಳೂರು.

೧೪. ಜಯಲಕ್ಷ್ಮಿ ಸೀತಾಪುರ., ೨೦೧೧, ಕನ್ನಡದಲ್ಲಿ ಐತಿಹಾಸಿಕ ಜನಪದ ಲಾವಣಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೫. ಜವರೇಗೌಡ ದೇ(ಸಂ), ೨೦೧೬, ಜನಪದ ಗೀತಾಂಜಲಿ, ಸಪ್ನ ಬುಕ್ ಹೌಸ್, ಬೆಂಗಳೂರು.

೧೬. ತಲ್ವಾಡಿ ಬಿ. ಎಸ್.(ಸಂ), ೨೦೧೪, ಜನಪದ ಚಾರಿತ್ರಿಕ ಕಥನ ಗೀತೆಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೭. ತಪಸ್ವಿಕುಮಾರ್ ನಂ., ೧೯೯೯, ಜಾನಪದ ಅಧ್ಯಯನದ ಸಂಕ್ಷಿಪ್ತ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೮. ತಲ್ಲೂರಾಯನಗೌಡ (ಸಂ), ೧೯೪೭, ಕಿತ್ತೂರು ಬಂಡಾಯ, ಕಿತ್ತೂರ ಚೆನ್ನಮ್ಮ ರಾಣಿ ಐತಿಹಾಸಿಕ ಮಂಡಳಿ, ಬೈಲಹೊಂಗಲ.

೧೯. ದಸ್ತಗೀರ್ ಎಂ., ೧೯೯೭, ೧೮೫೭ರ ರಾಷ್ಟೀಯ ಸ್ವಾತಂತ್ರ್ಯ ಸಂಗ್ರಾಮ, ನವ ಕರ್ನಾಟಕ ಪ್ರಕಾಶನ, ಧಾರವಾಡ.

೨೦. ದಿವಾಕರ ನಾ(ಸಂಗ್ರಹ), ೨೦೧೬, ಕ್ರಾಂತಿಯ ಯುಗ ೧೭೮೯–೧೮೪೮, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು.

೨೧. ದೊಡ್ಡಭಾವೆಪ್ಪ ಮೂಗಿ, ೧೯೫೭, ಕಿತ್ತೂರು ಕಾಳಗ, ರುದ್ರಗಡ ಪ್ರಕಾಶನ, ಬೈಲಹೊಂಗಲ.

೨೨. ನಾಗರಾಜ ಎಂ. ಜಿ., ೧೯೯೭, ಬಿಡುಗಡೆಯ ಮಡಿಲಲ್ಲಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೩. ನಿಂಗಣ್ಣ ಸಣ್ಣಕ್ಕಿ, ೧೯೮೨, ಜಾನಪದ ಜಯಂತಿ, ಜಾನಪದ ಮಂಟಪ, ರಾಯಭಾಗ.

೨೪. ನೀಲಕಂಠಯ್ಯ ಬಿ., ೨೦೦೮, ಸ್ವಾತಂತ್ರ್ಯ ಸಂಗ್ರಾಮದ ಲಾವಣಿಗಳು, ಕರ್ನಾಟಕ ಜಾನಪದ ಪರಿಷತ್, ಬೆಂಗಳೂರು.

೨೫. ಪಾರ್ಥಸಾರಥಿ ಕೆ. ಎಸ್., ೨೦೧೨, ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಒಂದು ಚಾರಿತ್ರಿಕ ಹಿನ್ನೋಟ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೨೬. ಬಸವರಾಜ ನಾಯ್ಕರ, ೨೦೧೫, ಕಿತ್ತೂರಿನ ವೀರರಾಣಿ ಚೆನ್ನಮ್ಮ, ಗ್ಭಿತಾಂಜಲಿ ಪಬ್ಲಿಕೇಷನ್ಸ್, ಬೆಂಗಳೂರು.

೨೭. ಬಸವನಗೌಡ ಪಾಟೀಲ(ಸಂ), ೨೦೧೦, ಮಲ್ಲಸರ್ಜ ಕಾವ್ಯ ಕಿತ್ತೂರು ಬಂಡಾಯ, ತಲ್ಲೂರು ರಾಯನಗೌಡ ಪಾಟೀಲ ಸ್ಮಾರಕ ವಿಶ್ವಸ್ಥ ಸಂಸ್ಥೆ, ಬೆಂಗಳೂರು.

೨೮. ಬಸವರಾಜ ಪೋಲಿಸ್ ಪಾಟೀಲ, ೨೦೦೧, ಜಾನಪದ ಚಿಂತನ, ಅಮರ ಪ್ರಕಾಶನ, ಕಲಬುರ್ಗಿ.

೨೯. ಬಸವರಾಜ ಮಲಶೆಟ್ಟಿ, ೨೦೧೭, ಸ್ವಾತಂತ್ರ್ಯ ಹೋರಾಟ ಮತ್ತು ಲಾವಣಿ ಸಾಹಿತ್ಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೦. ಬಿರಾದಾರ ಎಂ. ಜಿ, ಕೋಟ್ಯಾಳ ಬಿ. ಎಸ್.(ಸಂ), ೨೦೧೪, ಬೀ. ಬೀ ಇಂಗಳಗಿ ಹಸನ ಸಾಹೇಬನ ಗೀಗಿ ಪದಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೩೧. ಬೆಸೂರು ಮೋಹನ್ ಪಾಳೇಗಾರ್, ೨೦೧೦, ವೀರ ವನಿತೆಯರು, ಶ್ರೀಮಾವಿನಹಳ್ಳಿ ಬಸವೇಶ್ವರ ಪ್ರಕಾಶನ, ಚಿತ್ರದುರ್ಗ.

೩೨. ಬೆಳವಾಡಿ ಮಂಜುನಾಥ(ಸಂ), ೨೦೧೫, ಸತ್ಯವಿಠಲ ವಿರಚಿತ ಲಾವಣಿ. ಸಂಪುಟ,೩, ಮಹಾಕಾಳಿ ಪ್ರಕಾಶನ, ಬೆಂಗಳೂರು.

೩೩. ಬೈಲೂರು ಬಸವಲಿಂಗಯ್ಯ ಹಿರೇಮಠ(ಸಂ), ೨೦೧೦, ನೂರು ಜನಪದ ಹಾಡುಗಳು, ಜಾನಪದ ಸಂಶೋಧನ ಕೇಂದ್ರ, ಧಾರವಾಡ.

೩೪. ಬೋರಲಿಂಗಯ್ಯ ಹಿ. ಚಿ.(ಸಂ), ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೫. ಮಠದ ಸಿ. ವ್ಹಿ., ೧೯೭೮, ಸ್ವಾತಂತ್ರ್ಯ ಸೌದಾಮಿನಿ, ಉದಯ ಪ್ರಕಾಶನ, ಬೆಳಗಾವಿ.

೩೬. ಮಾಚಕನೂರ ಎ ವೆಂಕಟೇಶ(ಸಂ), ಕಿತ್ತೂರು,(ಪರಂಪರೆ ಮಾಲಿಕೆ) ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು.

೩೭. ಮಾರಿಯಾಳ ವ್ಹಿ. ಜಿ, ೧೯೮೬, ಮಹಾರಾಣಿ ಕಿತ್ತೂರು ಚನ್ನಮ್ಮನವರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೮. ಮಾರೀಹಾಳ ವ್ಹಿ. ಈ., ೧೯೮೬, ಕನ್ನಡ ನೆಲದ ಸೌಭಾಗ್ಯ ಮಹಾರಾಣಿ ಕಿತ್ತೂರ ಚನ್ನಮ್ಮನವರು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩೯. ಮಾರುತಿ ಎಲ್. ಪಿ, ೨೦೧೨, ಬ್ರಿಟೀಷ್ ವಿರೋಧಿ ಜನಾಂದೋಲನಗಳು, ರೋಹಿಣಿ ಎಂಟರ್ ಪ್ರೈಸಸ್, ಬೆಂಗಳೂರು.

೪೦. ಮಲ್ಲಿಕಾರ್ಜುನ ಆಯ್ ಮಿಂಚು, ೨೦೧೧, ಬ್ರಿಟಿಷರ ಆಡಳಿತ ಮತ್ತು ರಾಣಿ ಕಿತ್ತೂರು ಚೆನ್ನಮ್ಮ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೧. ಮೀನಾಕ್ಷಿ ಜಂಗಮನಿ, ೨೦೧೦, ಚಾರಿತ್ರಿಕ ಕಾದಂಬರಿ : ಸಾಂಸ್ಕೃತಿಕ ಸಂಕಥನ, ರಚನ ಪ್ರಕಾಶನ, ಮೈಸೂರು.

೪೨. ಮುರಿಗೆಪ್ಪ ಎ.(ಸಂ), ೨೦೧೧, ದಕ್ಷಿಣ ಭಾರತೀಯ ಜಾನಪದ ಕೋಶ. ಸಂಪುಟ– ೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೩. ಮುರಿಗೆಪ್ಪ ಎ.(ಸಂ), ೨೦೧೧, ದಕ್ಷಿಣ ಭಾರತೀಯ ಜಾನಪದ ಕೋಶ. ಸಂಪುಟ– ೨, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೪. ಯೋಗೀಶ್ವರಪ್ಪ ಡಿ. ಎನ್, ೨೦೧೦, ಕನ್ನಡಿಗರ ಬ್ರಿಟೀಷ್ ವಿರೋಧಿ ಸಶಸ್ತ್ರ ಬಂಡಾಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೫. ರಂಗನಾಥ ದಿವಾಕರ(ಸಂ), ೧೯೬೦, ಸ್ವಾತಂತ್ರ್ಯ ಯುದ್ಧ. ೧೮೫೭, ಸ್ಟ್ಯಾಂಡರ್ಡ್ ಬುಕ್ ಡಿಪೋ, ಬೆಂಗಳೂರು.

೪೬. ರವೀಂದ್ರನಾಥ ಕೆ., ೨೦೧೪, ಕನ್ನಡ ದಾಖಲು ಸಾಹಿತ್ಯ, ಮಂಗಳ ಪ್ರಕಾಶನ, ಹೊಸಪೇಟೆ.

೪೭. ರಾಮಚಂದ್ರೇಗೌಡ ಹಿ. ಶಿ.(ಸಂ), ೨೦೦೪, ಜಾನಪದ ಗ್ರಹಿಕೆ : ಪರಿಕಲ್ಪನೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೪೮. ಲಕ್ಕಪ್ಪಗೌಡ ಎಚ್. ಜೆ.(ಸಂ), ೧೯೭೭, ಜಾನಪದ ಕೈಪಿಡಿ,(ಜಾನಪದ ಮಾಲೆ) ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪೯. ಲಿಂಗಪ್ಪ ಟಿ. ಪಿ, ೨೦೦೮, ಟಿಪ್ಪು ಸುಲ್ತಾನ್, ಸ್ಟೂಡೆಂಟ್ ಬುಕ್ ಕಂಪನಿ, ತುಮಕೂರು.

೫೦. ವಗ್ಗರ ಎ. ಬಿ, (ಸಂ), ೨೦೧೯, ಕಿತ್ತೂರು ಸಂಸ್ಥಾನ ದಾಖಲೆಗಳು, ಬಸವರಾಜ ಕಟ್ಟೀಮನಿ ಪ್ರತಿಷ್ಠಾನ, ಬೆಳಗಾವಿ.

೫೧. ವಿರೂಪಾಕ್ಷಿ ಎನ್. ಬಿ.(ಸಂ), ೨೦೧೭, ಗಡಿನಾಡ ಪರಿಸರದ ಡೊಳ್ಳಿನ ಹಾಡುಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೨. ವಿಷ್ಣುಮೂರ್ತಿ(ಅನು), ೧೯೮೫, ಭಾರತದ ರಾಷ್ಟ್ರೀಯ ಚಳುವಳಿ, ಭಾರತೀ ಪ್ರಕಾಶನ, ಮೈಸೂರು.

೫೩. ಶಂಕರನಾರಾಯಣ ತೀ. ನಂ, ವೆಂಕಟೇಶ್ ಎಂ. ಎನ್.(ಸಂ), ೨೦೦೪, ಜನಪದ ಸಾಹಿತ್ಯ ಪ್ರಕಾರಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೫೪. ಶಂಕರನಾರಾಯಣ ರಾವ್ ಎನ್. ಪಿ, ೨೦೧೫, ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫೫. ಶೇಷಗಿರಿ ರಾವ್ ಎಲ್. ಎಸ್, ೨೦೧೬, ಹೊಸಗನ್ನಡ ಸಾಹಿತ್ಯ ಚರಿತ್ರೆ, ಸಪ್ನ ಬುಕ್ ಹೌಸ್, ಬೆಂಗಳೂರು.

೫೬. ಷೇಕ್ ಅಲಿ ಬಿ, ಶಿವಣ್ಣ ಕೆ. ಎಸ್.(ಸಂ), ೨೦೧೮, ಕರ್ನಾಟಕ ಚರಿತ್ರೆ ಸಂಪುಟ–೩, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೭. ಶ್ರೀಕಂಠ ಕೂಡಿಗೆ, ೧೯೯೯, ಕನ್ನಡ ಲಾವಣಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೫೮. ಸದಾಶಿವ ಒಡೆಯರ, ೧೯೭೭, ರಾಣಿ ಚೆನ್ನಮ್ಮ, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ.

೫೯. ಸಿಂಹ್ ಕೆ. ಆರ್, ೧೯೭೨, ಎಸ್. ಆರ್ ಪ್ರಕಾಶನ, ಬೆಂಗಳೂರು.

೬೦. ಸಿದ್ಧಣ್ಣ ಎಫ್. ಜಕಬಾಳ, ೨೦೨೦, ಡೊಳ್ಳಿನ ಹಾಡುಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೧. ಸಿಂಪಿ ಲಿಂಗಣ್ಣ, ಧೂಲಾ ಪಿ.(ಸಂಗ್ರಹ), ೧೯೯೦, ಜೀವನ ಸಂಗೀತ,(ಜಾನಪದ ಲಾವಣಿ ಸಂಗ್ರಹ) ಸಮಾಜ ಪುಸ್ತಕಾಲಯ, ಧಾರವಾಡ.

೬೨. ಹಂಪ ನಾಗರಾಜಯ್ಯ, ಪದ್ಮ ಪ್ರಸಾದ್ ಎಸ್. ಪಿ.(ಸಂ), ಕೋಲಾಟಗಳು ಮತ್ತು ಕೋಲು ಪದಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೩. ಹಲಸಂಗಿ ಗೆಳೆಯರು.(ಸಂಗ್ರಹ), ೨೦೦೫, ಗರತಿಯ ಹಾಡು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೪. ಹಾಲಪ್ಪ ಗ. ಸ., ೧೯೬೬, ಭಾರತ ಸ್ವಾತಂತ್ರ್ಯ ಬೆಳ್ಳಿಚುಕ್ಕಿ : ಕಿತ್ತೂರು ರಾಣಿ ಚೆನ್ನಮ್ಮ, ಕರ್ನಾಟಕ ಸಾಹಿತ್ಯ ಸಹಕಾರಿ ಸಂಘ, ಧಾರವಾಡ.

೬೫. ಹಾಲಪ್ಪ ಗ. ಸ., ೧೯೬೭, ಭಾರತ ಸ್ವಾತಂತ್ರ್ಯದ ಬೆಳ್ಳಿಚುಕ್ಕಿ, ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ ಲಿಮಿಟೆಡ್, ಧಾರವಾಡ.

೬೬. ಹೆಗಡೆ ಎಲ್. ಆರ್., ೧೯೭೩, ಕೆಲವು ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೬೭. ಹೊಳೆಯಣ್ಣವರ ಎಸ್. ಕೆ., ಸ್ವಾತಂತ್ರ್ಯ ಸಂಗ್ರಾಮದ ಬೆಳ್ಳಿಚುಕ್ಕಿ ಕಿತ್ತೂರು ರಾಣಿ ಚೆನ್ನಮ್ಮ, ಶಾಬಾದಿಮಠ ಪ್ರಿಂಟಿಂಗ್ ಪ್ರೆಸ್, ಗದಗ.

ಇಂಗ್ಲಿಷ್ ಗ್ರಂಥಗಳು


1. Gazetteer of Bombay Presidency Volume XXI, belgaum published First Edition on 1884 By Bombay Govt. Reprint in 2004. By Govt. of Karnatak Editor : James M Campbell

2. History of freedom movement in Karnataka Voi 1(1962) Editors : Dr.MV Krishna rao, Prof.G.S.Halappa publisher : Govt. of Mysore publication

3. The role of sangolli Rayanna in the Kitturu Princely state of Karnataka : An analyassis (2003), By Dr. Mallikarjun.l.Minch, Publisher : K.Mukundappa, Bangalore

4. Kitturu Chennamma Rani by Shreedhar telkar (reprint/1980) publisher : Sadanand S Desayi Rani chennamma publication, New yark U.S.A.

5. An Historical Account of the Belagam District in Bombay Presidency. By H.J. Stokes & Published by Govt of Bombay (1870)


* * *

